# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಜಿ. ಎಂ. ಬೊಮ್ನಳ್ಳಿ , ಅರಸು, ಸ್ಯಾಮ್, ಶ್ರೀಹರಿ,
ಶಶಿಕಾಂತ ಎಸ್. ಯಡಹಳ್ಳಿ , ಬಂದಗದ್ದೆ ರಮೇಶ್

ಮುಖಪುಟ : ವರ್ಣಚಿತ್ರ : ಕಲ್ಲೇಶ್

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

೧೯೩೦ರಲ್ಲಿ ಗಾಂಧೀಜಿ ಉಪ್ಪಿನ ಸತ್ಯಾಗ್ರಹ ನಡೆಸಲು ಸಬರಮತಿ ಆಶ್ರಮದಿಂದ ದಂಡಿಗೆ ಕಾಲ್ನಡಿಗೆಯಲ್ಲಿ ಹೋದರು. ಅದರ ೭೫ನೇ ವರ್ಧಂತಿ ಬೆಂಗಳೂರಿನಲ್ಲಿ ನಡೆದದ್ದು ಗಾಂಧೀಜಿಗೆ ಮಹಾಮಂಗಳಾರತಿ ಮಾಡಿದಂತಿತ್ತು. ರಾಜಭವನದಿಂದ ಗಾಂಧಿಭವನಕ್ಕೆ ನಡಿಗೆ. ರಾಜ್ಯಪಾಲರು ಉದ್ಘಾಟಿಸಲು ಅನುಕೂಲವಾಗುವಂತೆ ಏರ್ಪಾಟು. ರಾಜಭವನದ ಹಾಸುಹುಲ್ಲಿನ ಬಳಿ ಗಾಂಧೀಜಿಯ ಒಂದು ಪ್ರತಿಮೆಯನ್ನಿರಿಸಲಾಗಿದೆ. ಅದರ ಮುಂದೆಯೇ ಮೆರವಣಿಗೆಯ ಉದ್ಘಾಟನೆ! ಸಾಮಾನ್ಯವಾಗಿ ಗಾಂಧೀ ಪ್ರತಿಮೆ ಯೆಂದರೆ ಕಬ್ಬನ್ ಪಾರ್ಕ್ ಬಳಿ ಇರುವುದೆಂದೇ ಭಾವನೆ. ಹಾಗೆ ಹೊರಗೆ ಬಂದು ಉದ್ಘಾಟಿಸಲು ಅವರಿಗೇನು ಕಷ್ಟವೋ ತಿಳಿಯದು. ವೈಸ್‌ರಾಯ್ ಮನೆಯಿಂದ ಗಾಂಧೀಜಿ ಹೊರಟಿದ್ದರೆ ಹೇಗಿರುತ್ತಿತ್ತೆಂಬ ಕಲ್ಪನೆ ಬರುತ್ತಿತ್ತು. ರಾಜಭವನದ ಒಳಗೆ ಹೋಗಲು ತಪಾಸಣೆ ಬೇರೆ! ಮಕ್ಕಳು, ಮಹಿಳೆಯರು ಸೇರಿದ್ದರು. ಆದರೆ ರಾಜ್ಯಪಾಲರು ಉಪನ್ಯಾಸ ನೀಡಿದ್ದು ೧೦-೧೫ ಮಂದಿ ಮಹನೀಯರಿಗೆ. ಆಮೇಲೆ ಮೆರವಣಿಗೆಯು ''ಹಿರಿಯ ಗಾಂಧೀವಾದಿ''ಗಳ ನೇತೃತ್ವದಲ್ಲಿ. ಅವರಲ್ಲಿ ಇಬ್ಬರು ಕುಖ್ಯಾತ ಮತೀಯ ರಾಜಕೀಯ ಪಕ್ಷದ ಧುರೀಣರು. ನಿಧಾನವಾಗಿ ಅವರೂ ಅವರ ಕಾರ್ಯಕರ್ತರೂ ಗಾಂಧೀಭವನಕ್ಕೆ ನುಗ್ಗಿ ಕ್ರಮೇಣ ಅದನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುವ ಹುನ್ನಾರವಿದ್ದರೆ ಆಶ್ಚರ್ಯವಿಲ್ಲ. ಈಗಾಗಲೇ ಎರಡು ಪ್ರಮುಖ ಸಂಸ್ಥೆಗಳನ್ನು ಹೀಗೆ ತಮ್ಮದಾಗಿಸಿಕೊಂಡಿರುವ ನಿದರ್ಶನಗಳಿವೆ. ಅವರು ಸೇರಿದ ನಂತರ ಬೇರೆ ಯಾರೂ ಸೇರಲಾಗದಂತೆ ನಿಯಮವನ್ನು ಭದ್ರಗೊಳಿಸುವುದು ಅವರ ಕಾರ್ಯತಂತ್ರ. ನಮ್ಮ ಗಾಂಧಿವಾದಿಗಳು ಈ ಧೃತರಾಷ್ಟ್ರಾಲಿಂಗನಕ್ಕೆ ಸ್ವಯಂ ಹಾತೊರೆಯುತ್ತಿದ್ದಾರೇನೋ ಎನಿಸುತ್ತದೆ!

ಹಿಂದಿನ ಪೋಪ್ ಸತ್ತು ಹೊಸಬ ಈಗ ಜೀಸಸ್ ಪ್ರತಿನಿಧಿಯಾಗಿ ಪ್ರಪಂಚದಲ್ಲಿ ಕ್ರಿಸ್ತನ ಸಂದೇಶ ಸಾರಲಿದ್ದಾನೆ. ಹಿಟ್ಲರನ ಕಾಲದಲ್ಲಿ ಯುವಚಮೂ ದಳದಲ್ಲಿ ಇದ್ದ ''ಖ್ಯಾತಿ'' ಈತನದು. ಈಗಿನ ಚರ್ಚ್ ಮತ್ತು ಪೋಪ್ ಹೇಗೆ ತಾನೇ ಜೀಸಸ್‌ಗೆ ಹತ್ತಿರ ಎಂಬ ಗಾಢ ವಿಸ್ಮಯ ನಮ್ಮನ್ನು ಕಾಡುತ್ತದೆ. ಅವರ ವೇಷಭೂಷಣಗಳೇ ಸಾಕು, ಅವರನ್ನು ಕಂಡು ದಿಗ್ಭ್ರಾಂತನಾಗಿ ಜೀಸಸ್ ಓಡಿಬಿಡುವುದಕ್ಕೆ. ಮಿಲ್ಟನ್ ತನ್ನೊಂದು ಕವನದಲ್ಲಿ ಚರ್ಚಿನ ಮಹಾತ್ಮರನ್ನು ''ಕುರಿ ಕಾಯದ ಹೆಗ್ಗಣಗಳು'' ಎಂಬರ್ಥ ಬರುವಂತೆ ಟೀಕಿಸಿರುವುದು ಈ ಪೋಪ್-ಕಾರ್ಡಿನಲ್‌ಗಳನ್ನು ನೋಡಿದರೆ ಮನದಟ್ಟಾಗುತ್ತದೆ. (ಚರ್ಚಿನ ಶ್ರದ್ಧಾಳುಗಳನ್ನು 'ಕುರಿ' ಎಂದು ಪ್ರತೀಕಿಸುವುದು ಪದ್ಧತಿ). ಆ ಪೋಪ್ ಸತ್ತಾಗ ಪಾಶ್ಚಾತ್ಯ ಮಾಧ್ಯಮಗಳು ಹುಚ್ಚಾಪಟ್ಟೆ ಆತನ ಇಲ್ಲದ-ಸಲ್ಲದ ಸದ್ಗುಣಗಳನ್ನು ಸ್ತುತಿಸಿದವು; ನಮ್ಮ ಮಂಗ ಮಾಧ್ಯಮಗಳು ಅದಕ್ಕೆ ದನಿಗೂಡಿಸಿದುವು. ಅದೇನು ಆತನ ಧಾರ್ಮಿಕ ಸಾಧನೆ ಅಥವಾ ಶ್ರದ್ಧೆ ಎಂಬುದು ತಿಳಿದಿಲ್ಲ. ಆತನೊಬ್ಬ ಪ್ರಚಂಡ ರಾಜಕಾರಣಿ. ಧರ್ಮದ ಮುಸುಕಿನಲ್ಲಿ ಜನವಿರೋಧಿ ಕಾರ್ಯತಂತ್ರಗಳನ್ನು ರೂಪಿಸಿ ತನ್ನ ಧಾರ್ಮಿಕ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡ ಮಹಾತ್ಮ ಈತ. ಜೀಸಸ್ ಬಡವರ ಪರವಾಗಿ ನಿಂತು ಶಿಲುಬೆಗೇರಿದ; ಈತ ಸರ್ವಾಧಿಕಾರಿಗಳ ಪರ ನಿಂತು ಜನರನ್ನು ಶಿಲುಬೆಗೇರಿಸಿದ! ಚಿಲಿಯ ಪಿಶಾಚಿ ಪಿನೋಶೆಯ ಪರಮಮಿತ್ರ ಈತ. ದಕ್ಷಿಣ ಅಮೆರಿಕಾಕ್ಕೆ ಹಲವು ಬಾರಿ ಭೇಟಿ ನೀಡಿ ಸಾಮ್ರಾಜ್ಯಶಾಹಿ ಭಂಟರ ಬೆಂಬಲಕ್ಕೆ ನಿಂತು ಜನರಿಗೆ ಸ್ವರ್ಗದ ದಾರಿ ತೋರಿಸಿದ ಅಪಶ್ರೇಯಸ್ಸು ಈತನದು. ಪೋಲೆಂಡಿನಲ್ಲಿ ಘಾತುಕತನವನ್ನು ಮೆರೆಸಿ ಕ್ಯೂಬಾದಲ್ಲಿ ಅದನ್ನೇ ಪ್ರಯೋಗಿಸಲು ಯತ್ನಿಸಿ ಹತಾಶನಾದದ್ದು ಈತನ ಕೆಲವೇ ಸೋಲುಗಳಲ್ಲಿ ಒಂದು. ಈತನ ಶಿಷ್ಯ ಲೆಕ್ ವಲೇಸ್ಸಾ ಪೋಲೆಂಡಿನ ಅಧ್ಯಕ್ಷನಾದ, ಕೆಲವೇ ದಿನಗಳಲ್ಲಿ ಜನಗಳ ಧಿಕ್ಕಾರಕ್ಕೆ ಗುರಿಯಾದ. ಕ್ಯೂಬಾದ ಕ್ಯಾಸ್ಟ್ರೋಗೆ ಅಂತಹ ಗತಿ ಬರಲಿಲ್ಲ. ಕಾರಣ ಆತನಿಗೆ ಜನರ ಆಶೀರ್ವಾದ ಪ್ರಮುಖವೇ ಹೊರತು ಪೋಪನದಲ್ಲ. ಜೋನ್- ಬ್ರೂನೋ-ಗೆಲಿಲಿಯೋ ಮುಂತಾದವರನ್ನು ಪೀಡಿಸಿದ ಚರ್ಚಿನ ಪರಂಪರೆಗೆ ಎರಡನೆ ಜಾನ್ ಪಾಲ್ ಸರಿಯಾದ ವಾರಸುದಾರ. ಆತನ ನಿರ್ಗಮನದಿಂದ ಚರ್ಚಿನ ನಡತೆ ನಿಜಕ್ಕೂ ಭಿನ್ನವಾದೀತೆ ಎಂಬುದನ್ನು ಕಾದು ನೋಡಬೇಕು. ವಾಷಿಂಗ್‌ಟನ್ನಿನ ಶ್ವೇತ ಭವನಕ್ಕೆ ನೆಂಟನಾಗಿ ಮುಂದಿನ ಪೋಪನು ಬ್ರೆಜಿಲ್, ವೆನಿಜುಯೇಲ ಮುಂತಾದೆಡೆ ಸರ್ಕಾರಗಳನ್ನು ಬುಡಮೇಲು ಮಾಡುವ ಕೃತ್ಯದಲ್ಲಿ ಶಾಮೀಲಾಗಬಹುದೇ ಎಂಬ ಕುತೂಹಲವಿದೆ.


೯ನೇ ಪುಟಕ್ಕೆ...



ತಿಂಗಳ ಪತ್ರಿಕೆ

ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೬ ಸಂಚಿಕೆ-೧೦ ಮೇ ೨೦೦೫





**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೯೬೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**




# ಮೇ 5, ಮಾರ್ಕ್ಸ್ ಜನ್ಮದಿನ

**ದೆ**ಹಲಿಯ ಕಿರೋರಿಮಲ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಕೆ. ಎಂ. ಅಶ್ರಫ್ ಅವರನ್ನು ಪ್ರಾಚಾರ್ಯರು ಒಮ್ಮೆ ಕೇಳಿದರಂತೆ : ''ನೀನು ಮಾರ್ಕ್ಸ್‌ವಾದಿಯೆಂದು ಹೇಳುತ್ತಾರೆ, ನಿಜವೆ ?'' ಅಶ್ರಫ್ ಹೇಳಿದರು : ''ಛೆ, ನಾನು ಭಾರತ ಕಮ್ಯುನಿಸ್ಟ್ ಪಕ್ಷದ ಸದಸ್ಯ. ಪಕ್ಷದ ಸದಸ್ಯನಲ್ಲದವನು ಎಂಥ ಮಾರ್ಕ್ಸ್‌ವಾದಿ !'' ಅಂದರೆ, ಮಾರ್ಕ್ಸ್‌ವಾದವನ್ನು ದೂರ ನಿಂತು ನೋಡಲಾಗದೆಂದರ್ಥ. ಇತಿಹಾಸ ನಿರ್ಮಿಸುವವರು ಯಾರು ಮತ್ತು ಇತಿಹಾಸದಲ್ಲಿ ಕಾಣಬರುವ ವ್ಯವಸ್ಥೆಗಳು ಹಾಗೂ ಸಾಮಾಜಿಕ ರಚನೆ ಉಂಟಾದದ್ದು ಹೇಗೆ ಎಂಬುದು ಮುಖ್ಯ ಪ್ರಶ್ನೆ. ಇತಿಹಾಸ ನಿರ್ಮಿಸುವವರು ತಮ್ಮ ಮನಬಂದಂತೆ, ತಮಗಿಷ್ಟವಾಗುವ ಸನ್ನಿವೇಶದಲ್ಲಿ, ಇತಿಹಾಸ ನಿರ್ಮಿಸಲಾಗುವುದಿಲ್ಲ. ಆಯಾ ಕಾಲಘಟ್ಟವು ನೀಡುವ ಹಿನ್ನೆಲೆ ಹಾಗೂ ಸಂದರ್ಭಗಳಲ್ಲೇ ಇತಿಹಾಸದ ನಿರ್ಮಿತಿ ಆಗಬೇಕು. ಉದಾಹರಣೆಗೆ, ಜಾತಿವ್ಯವಸ್ಥೆ ಇಲ್ಲದ ಭಾರತದಲ್ಲಿ ರಾಜಕೀಯ-ಸಾಮಾಜಿಕ ಚಿಂತನೆ ನಡೆಸಿ ಬದಲಾವಣೆ ತರಬೇಕೆಂದು ಆಶಿಸಿದರೆ ಹೇಗೆ ? ಇರುವ ಎಲ್ಲ ದ್ವಂದ್ವ ಮತ್ತು ಸಂಕೀರ್ಣತೆಗಳ ನಡುವೆಯೇ ಚಿಂತನೆ ಮತ್ತು ಕ್ರಿಯೆ ಸಾಗಬೇಕು. ಜಾತಿ, ಅಸ್ಪೃಶ್ಯತೆ, ಮೂರು ಕೋಟಿ ದೇವರುಗಳು, ಇವುಗಳ ನಡುವೆಯೇ ಹೋರಾಟದ ಹಾದಿಯನ್ನು ಕಂಡುಕೊಳ್ಳಬೇಕು.

ಇತಿಹಾಸದ ಗತಿಯನ್ನು ನಿರ್ಧರಿಸುವ ಅಂಶಗಳು ಯಾವುವು ? ಯಾರೋ ಒಬ್ಬ ಧೀರೋದಾತ್ತ ವ್ಯಕ್ತಿತ್ವವುಳ್ಳವನು ಇತಿಹಾಸವನ್ನು ನಿರ್ಮಿಸಿಬಿಡಬಲ್ಲನೆಂದು ಕಾರ್ಲೈಲ್ ಹೇಳುತ್ತಿದ್ದ. ಒಬ್ಬೊಂಟಿಯಾಗಿ ಅವನು ಹಾಗೆ ಮಾಡುವುದಿಲ್ಲ; ಜನರನ್ನು ಒಗ್ಗೂಡಿಸಿ ಮಾಡುತ್ತಾನೆ : ಗಾಂಧೀಜಿ ಅಥವಾ ಲೆನಿನ್ ಮಾಡಿದಂತೆ. ಸ್ವತಃ ಇಂತಹ 'ಹೀರೋ' ಸಹ ವಿಕಾಸವಾಗುತ್ತಿರುತ್ತಾನೆ : ಒಂದೊಂದು ಅನುಭವವೂ ಅವನನ್ನು ಪುನಶ್ಚೇತನಗೊಳಿಸುತ್ತದೆ, ಜನರ ನಾಡಿಮಿಡಿತವನ್ನು ಅರಿಯುವಲ್ಲಿ ನಿಷ್ಣಾತನಾಗುತ್ತಾನೆ. ದಕ್ಷಿಣ ಆಫ್ರಿಕಾದಲ್ಲಿ ಹೋರಾಟ ನಡೆಸಿದ ಗಾಂಧೀಜಿ ಜಲಿಯನ್ ವಾಲ್‌ಬಾಗ್ ನಂತರದ ಗಾಂಧೀಜಿಯಾಗಿ ವಿಕಾಸಗೊಳ್ಳಲು ಅನುಭವವೇ ಸಾಮಗ್ರಿ. ಇಂಗ್ಲಿಷ್ ಸೈನಿಕರ ಶುಶ್ರೂಷೆ ಮಾಡಲು ಬೋಯೆರ್ ಯುದ್ಧದಲ್ಲಿ ಗಾಂಧೀಜಿ ಮುಂದೆ ಬಂದರು; ಸೈತಾನೀ ಯಂತ್ರವಾದ ಈ ಬ್ರಿಟಿಷ್ ಆಡಳಿತವನ್ನು ನುಚ್ಚುನೂರು ಮಾಡಬೇಕೆಂದು ಜಲಿಯನ್ ವಾಲ್‌ಬಾಗ್ ನಂತರ ನುಡಿದರು. ಇತಿಹಾಸವು ಆಕಸ್ಮಿಕಗಳ ಪರಿಣಾಮವಲ್ಲ. ಗುಲಾಮಗಿರಿಯನ್ನಾಧರಿಸಿದ ಸಾಮಾಜಿಕ ವ್ಯವಸ್ಥೆ ಕೊನೆಗಾಣಲು ಸ್ಪಾರ್ಟಕಸ್ ನೇತೃತ್ವದಲ್ಲಿ ರೋಮ್ ಸಾಮ್ರಾಜ್ಯದ ಗುಲಾಮರು ಹೋರಾಟಕ್ಕಿಳಿಯಬೇಕಾಯಿತು; ರೋಮಿನ ಯಾವನೋ ಒಬ್ಬ ಸೇನಾ ದಂಡನಾಯಕನ ವೈಫಲ್ಯದಿಂದ ಅದು ಕೊನೆಯುಸಿರು ಎಳೆಯಲಿಲ್ಲ. ಉತ್ಪಾದನಾ ಸಂಬಂಧಗಳು ಹಿಂದಿನಂತೆ ಮುಂದುವರಿಯಲು ಅಸಾಧ್ಯವಾದಾಗ ಮಾತ್ರವೇ ಸಮಾಜದಲ್ಲಿ ಒಂದು ಗುಣಾತ್ಮಕ ಬದಲಾವಣೆ ಉಂಟಾಗುತ್ತದೆ, ಒಂದು ಹೊಸ ಸಾಮಾಜಿಕ ವ್ಯವಸ್ಥೆ ಅಸ್ತಿತ್ವಕ್ಕೆ ಬರುತ್ತದೆ. ಇತಿಹಾಸದಲ್ಲಿ ಇಂತಹ ಅನೇಕ ಪ್ರಕ್ರಿಯೆಗಳನ್ನು ಗುರುತಿಸಬಹುದು. ಅವನ್ನು ಅರ್ಥೈಸುವ ಕ್ರಮಕ್ಕೆ ಚಾರಿತ್ರಿಕ ಭೌತವಾದೀ ಪದ್ಧತಿ ಎನ್ನುತ್ತಾರೆ. ವರ್ತಮಾನದಲ್ಲಿ ಸದಾ ಜರುಗುತ್ತಿರುವ ರಾಜಕೀಯ ಘಟನೆಗಳ ಹಿನ್ನೆಲೆಯಲ್ಲಿ ಕೂಡ ಆರ್ಥಿಕತೆಯ ನೇರ ಪ್ರಭಾವ ಇರುತ್ತದೆ. ಅದನ್ನು ತಿಳಿಯದೆಯೂ ರಾಜಕೀಯದಲ್ಲಿ ಪಾತ್ರ ನಿರ್ವಹಿಸುವವರು ಇರಬಹುದು; ಆದರೆ ಅವರು ತಮ್ಮ ಎಲ್ಲೆಯನ್ನು ಇಚ್ಛಾಮಾತ್ರದಿಂದ ವಿಸ್ತರಿಸಿಕೊಳ್ಳಲು ಅಸಮರ್ಥರಿರುತ್ತಾರೆ. ಚಾರಿತ್ರಿಕ ಭೌತವಾದ ಮತ್ತು ರಾಜಕೀಯ ಆರ್ಥಿಕತೆಗಳನ್ನು ನಿರ್ದಿಷ್ಟವಾಗಿ ಸೂತ್ರೀಕರಿಸಿದ ತತ್ತ್ವಜ್ಞಾನಿ ಕಾರ್ಲ್ ಮಾರ್ಕ್ಸ್. ಫ್ರೆಡರಿಕ್ ಏಂಗೆಲ್ಸ್ ಜೊತೆಗೂಡಿ ಈತ ಪ್ರತಿಪಾದಿಸಿದ ತಾತ್ವಿಕ ಪ್ರಣಾಲಿಕೆಗೆ ಮಾರ್ಕ್ಸ್‌ವಾದವೆಂಬ ಹೆಸರು ಬಂದಿದೆ. ಇತಿಹಾಸ, ವಿಜ್ಞಾನ, ತತ್ತ್ವಶಾಸ್ತ್ರ, ಅರ್ಥಶಾಸ್ತ್ರ, ಸಾಹಿತ್ಯ, ಸಂಸ್ಕೃತಿ, ಮುಂತಾದ ಕ್ಷೇತ್ರಗಳಲ್ಲಿ ಮಾರ್ಕ್ಸ್‌ವಾದಿ ವಿಶ್ಲೇಷಕರು ಅಸಾಮಾನ್ಯವಾದ ಕೃಷಿ ಮಾಡಿ ಜಗತ್ತಿನ ಜ್ಞಾನ ದಿಗಂತವನ್ನು ವಿಪುಲವಾಗಿ ವಿಸ್ತರಿಸಿದ್ದಾರೆ. ಗಾರ್ಡನ್ ಚೈಲ್ಡ್, ಡಿ. ಡಿ. ಕೋಸಾಂಬಿ, ಆರ್. ಎಸ್. ಶರ್ಮ, ಜೆ. ಡಿ. ಬರ್ನಾಲ್, ಜೆ. ಬಿ. ಎಸ್. ಹಾಲ್ಡೇನ್, ಜಾರ್ಜ್ ಥಾಮ್ಸನ್, ದೇವಿಪ್ರಸಾದ ಚಟ್ಟೋಪಾಧ್ಯಾಯ, ಪಾಲ್ ಸ್ವೀಝಿ, ಕಾಡ್‌ವೆಲ್, ಬ್ರೆಕ್ಟ್ ಮುಂತಾದ ದಿಗ್ಗಜಗಳನ್ನು ಈ ನಿಟ್ಟಿನಲ್ಲಿ ನೆನೆಯಬಹುದು.

ಇತಿಹಾಸದ ಗತಿಯನ್ನು ನಿರೂಪಿಸುವ ಈ ತತ್ವ ಕೆಲವರಿಗೆ ನಿಷಿದ್ಧ, ಇನ್ನು ಕೆಲವರಿಗೆ ಅದು ಇರಿಸು-ಮುರಿಸನ್ನುಂಟು ಮಾಡುತ್ತದೆ. ಉದಾಹರಣೆಗೆ, ಯುರೋಪಿನ ಚರಿತ್ರೆಯನ್ನು ಬರೆಯುವಾಗ ಫಿಶರ್ ತನ್ನ ಉಪೋದ್ಘಾತದಲ್ಲಿ ಹೀಗೆನ್ನುತ್ತಾನೆ : ''ಇತಿಹಾಸದಲ್ಲಿ **ಪೂರ್ವನಿರ್ಧಾರಿತ** ಕ್ರಮವೊಂದನ್ನು ನನಗಿಂತಲೂ ಹೆಚ್ಚು ಶ್ರೇಷ್ಠರಾದ ವಿದ್ವಾಂಸರು ಗುರುತಿಸಿದ್ದಾರೆ. ಒಂದೊಂದು ಘಟ್ಟದಲ್ಲೂ ಯಾವುದೋ ಒಂದು ತುರ್ತಾದ ಘಟನೆ ಸಂಭವಿಸಿ ಅದರಿಂದ ಮತ್ತೊಂದು ತುರ್ತಿನ ಘಟನೆಗೆ ಎಡೆಮಾಡಿಕೊಟ್ಟಿದೆ. ಸಮುದ್ರದಲ್ಲಿ ಒಂದರ ಮೇಲೊಂದು ಅಲೆ ಬರುವುದಕ್ಕೆ ಸಮಾನವಾದುದು ಇದು.'' ಇದನ್ನೇ ಮಹಾಭಾರತದಲ್ಲಿ ''ಯಥಾ ಕಾಷ್ಠಂ ಚ ಕಾಷ್ಠಂ ಚ ಸಮೇಯಾತಾಂ ಮಹೋದಧೌ'' ಎಂದು ವ್ಯಾಖ್ಯಾನಿಸಲಾಗಿದೆ. ಅಂದರೆ, ಇತಿಹಾಸವು ಯಾದೃಚ್ಛಿಕ; ಅದಕ್ಕೆ ಕಾರ್ಯ-ಕಾರಣ ಭಾವವನ್ನು ಅರಸುವಂತಿಲ್ಲ. ಮರದ ತುಂಡುಗಳು ಸಮುದ್ರದಲ್ಲಿ ಹೇಗೋ ಒಮ್ಮೆ ಸನಿಹಕ್ಕೆ ಬರುತ್ತವೆ, ಒಮ್ಮೆ ದೂರವಾಗುತ್ತವೆ. ಅದರ ಮೇಲೆ ಮಾನವನ ಹಿಡಿತವಿಲ್ಲ. ಅದನ್ನೇ ಫಿಶರ್ ''ಪೂರ್ವನಿರ್ಧಾರಿತ'' ಎನ್ನುತ್ತಾನೆ. ಯಾರು ಅದನ್ನು ಪೂರ್ವದಲ್ಲೇ ನಿರ್ಧರಿಸಿದ್ದು ಮತ್ತು ಏಕೆ ಎಂಬ ಪ್ರಶ್ನೆ ಹಾಕಿದರೆ ಅದಕ್ಕೆ ಉತ್ತರವಿಲ್ಲ. ಇದ್ದರೆ ಅದನ್ನು ''ಕರ್ಮಫಲ'' ಎನ್ನಬೇಕಷ್ಟೆ! ಇದರಿಂದ ಸಂಪೂರ್ಣವಾಗಿ ಭಿನ್ನವಾದ್ದು ಮಾರ್ಕ್ಸ್‌ನ ಇತಿಹಾಸ ಮೀಮಾಂಸೆ. ೧೯೫೦ರಲ್ಲಿ ಯಾರ್ಕ್‌ನ ಆರ್ಚ್‌ಬಿಷಪ್ ಹೇಳಿದ್ದದ್ದು ಇದು : ''ಕಮ್ಯುನಿಸ್ಟರಿಗೆ ಪ್ರಬಲವಾದ ನಂಬಿಕೆ ಒಂದಿದೆ. ವರ್ಗರಹಿತ ಸಮಾಜದ ಆವಿಷ್ಕಾರವಾಗುವುದು ಚಾರಿತ್ರಿಕವಾಗಿ ಅನಿವಾರ್ಯವೆಂಬುದು ಆ ನಂಬಿಕೆ. ಸಾಮಾಜಿಕ ಅನ್ಯಾಯ, ಬಡತನ, ಅಜ್ಞಾನ, ಇತ್ಯಾದಿಗಳು ಇಲ್ಲದಿರುವಂತಹ ಸಮಾಜದ ರಚನೆ ಅಗತ್ಯ ಮತ್ತು ಸಾಧ್ಯ; ಅಲ್ಲದೆ, ಅದು ಅನಿವಾರ್ಯವೆಂಬುದು ಆ ನಂಬಿಕೆ. ಅದರಿಂದ ಪ್ರೇರಿತರಾಗಿ ಅವರು ಯೋಜಿತ ರೀತಿಯಲ್ಲಿ ಮುಂದೆ ಸಾಗುತ್ತಿದ್ದಾರೆ.'' ಅವರು ಇದನ್ನು ಹೇಳಿದ್ದು ಇಂಗ್ಲೆಂಡಿನಲ್ಲಿ ಕ್ರೈಸ್ತ ಧರ್ಮಾನುಯಾಯಿಗಳನ್ನು ಆವರಿಸುತ್ತಿದ್ದ ಮೋಹ, ನಿಷ್ಕ್ರಿಯತೆ, ಮುಂತಾದ್ದನ್ನು ಟೀಕಿಸಲು ಮತ್ತು ಅವರ ಧಾರ್ಮಿಕ ಕರ್ತವ್ಯವನ್ನು ಒತ್ತುಕೊಟ್ಟು ಪ್ರತಿಪಾದಿಸಲು. ಕಾರ್ಲ್ ಪಾಪರ್ (ಹೆಸರಿನಲ್ಲಿ 'ಪಾಪರ್'

ಎಂದಿರುವುದು ಆತನ ಬೌದ್ಧಿಕ ಸಾಮರ್ಥ್ಯವನ್ನು ವಿರೂಪಿಸುವುದಕ್ಕಾಗಿ ಅಲ್ಲ) ಮುಂತಾದವರ ಬಣದ ಅಭಿಪ್ರಾಯದಂತೆ ವೈಜ್ಞಾನಿಕ ಮತ್ತು ತಾತ್ವಿಕ ಸಿದ್ಧಾಂತದ ಬುನಾದಿಯಲ್ಲಿ ರಾಜಕೀಯ ಮತ್ತು ಸಾಮಾಜಿಕ ಬದಲಾವಣೆಗಳನ್ನು ಅರ್ಥೈಸಬೇಕೆಂದು ಅಪೇಕ್ಷಿಸುವುದು ಕೇವಲ ಅನರ್ಥವಾದ ಒಂದು ನಿಲುವು. ಹಾಗೆ ಮಾಡಿದ್ದೇ ಆದರೆ ವ್ಯಕ್ತಿಯೊಬ್ಬನನ್ನು ಸಾಮಾಜಿಕ ಬದಲಾವಣೆಯ ಸಂದರ್ಭದಲ್ಲಿ ಅಪ್ರಕೃತವಾದ ಒಂದು ಸಾಮಗ್ರಿಯನ್ನಾಗಿ ಮಾಡಿದಂತಾಗುತ್ತದೆ. ಇದು ತೀರಾ ಅಗ್ಗದ ಹೇಳಿಕೆ ಎನಿಸುತ್ತದೆ. ವೈಜ್ಞಾನಿಕ ಮತ್ತು ತಾತ್ವಿಕ ತಳಹದಿ ಬೇಡವೆಂದು ಚರ್ಚೆ ಆರಂಭಿಸುವವರೊಡನೆ ಮಾರ್ಕ್ಸ್‌ವಾದವು ಮೂಕವಾಗಿ ಉಳಿಯಬೇಕಾದ್ದು ಸಹಜವಾಗಿದೆ. ಸಮಾಜದ ಬೆಳವಣಿಗೆಯಲ್ಲಿ ಒಂದು ನಿಯಮವಿದೆಯೆಂದು ಹೇಳಿದರೆ ಅದು ವ್ಯಕ್ತಿಯನ್ನು ಅಳಿಸಿಹಾಕಿಬಿಟ್ಟಂತೆ ಏಕಾಗುತ್ತದೆ ? ಭೌತ ಪ್ರಪಂಚದಲ್ಲಿ ''ಸ್ವಭಾವ'' ಇರುವುದರಿಂದ ಮಾನವನ ವ್ಯಕ್ತಿತ್ವ ನಾಶವಾಗಿಬಿಟ್ಟಿದೆ ಎಂದು ಹೇಳಿದಷ್ಟೇ ಅರ್ಥಹೀನವಾದ್ದು ಈ ಅಭಿಪ್ರಾಯ. ಬೆಂಕಿ ಸುಡುತ್ತದೆ, ನೀರು ಹರಿಯುತ್ತದೆ; ಆದ್ದರಿಂದ ಮಾನವನಿಗೆ ವ್ಯಕ್ತಿತ್ವ ನಾಶವಾಯಿತು, ಎಂದು ಹೇಳಿದರೆ ಏನು ತರ್ಕ ಮಾಡಬೇಕು !

ಹಾಗಾದರೆ, ವೈಜ್ಞಾನಿಕವಾಗಿ ಸಮಾಜ ಬೆಳವಣಿಗೆಯ ನಿಯಮ ಏನು ? ಅದಕ್ಕೂ ಪೂರ್ವಭಾವಿಯಾಗಿ, ಇದಕ್ಕೆ ''ನಿಯಮ'' ಎಂಬುದೊಂದು ಇರಲು ಶಕ್ಯವೆ ? ನಿಸರ್ಗದಲ್ಲಿ ಕಾಣಬರುವ ನಿಯಮಗಳು ಪ್ರಜ್ಞಾರಹಿತ ವಸ್ತುಗಳಿಗೆ ಸಂಬಂಧಿಸಿವೆ; ಸಮಾಜದಲ್ಲಿರುವುದು ಪ್ರಜ್ಞೆ ಇರುವ ಜನಸಮೂಹ. ಇಂತಹ ಜೈವಿಕ ಸಂಘಾತದ ನಿಯಮವನ್ನು ಸಮಗ್ರವಾಗಿ ನಿರೂಪಿಸಲಾದೀತೆ ? ಇದಕ್ಕೆ ಉತ್ತರ ದೊರಕುವುದು ನಿಸರ್ಗದ ಹಾಗೂ ಮಾನವ ಸಮಾಜದ ಸಂಬಂಧದಲ್ಲಿ ಎರಡು ವಿಶಿಷ್ಟ ಗುಣಗಳನ್ನು ಅರಿತುಕೊಂಡಾಗ. ಅವು ಯಾವುವು ? (ಅ) ವಸ್ತುನಿಷ್ಠವಾಗಿ ಅಸ್ತಿತ್ವವನ್ನುಳ್ಳ ಹೊರಗಣ ಬೃಹತ್ ವಿಶ್ವವು ನಮ್ಮ ವೈಯಕ್ತಿಕ ಪ್ರಜ್ಞೆಯಿಂದ ಅಬಾಧಿತವಾದುದು ಅಥವಾ ಸ್ವತಂತ್ರವಾದುದು; (ಆ) ವಿಶ್ವದ ಇತರ ನಿಯಮಗಳಲ್ಲಿರುವಂತೆ ಸಾಮಾಜಿಕ ಅಸ್ತಿತ್ವ ಮತ್ತು ಬೆಳವಣಿಗೆಯಲ್ಲಿ ಕಾರ್ಯ-ಕಾರಣ ಸಂಬಂಧವಿದೆ. ಅದನ್ನು ಗುರುತಿಸಲು ನಾವು ಅಸಮರ್ಥರಾದರೆ ಅದು ಇಲ್ಲವೆಂದೇನೂ ಅರ್ಥವಲ್ಲ. ಮಾನವ ಸಮಾಜವು ಸಂಕೀರ್ಣವೆಂದ ಮಾತ್ರಕ್ಕೆ ಅದಕ್ಕೆ ನಿಯಮಗಳಿಲ್ಲವೆಂದೇನೂ ಅಲ್ಲ.

ಆ ನಿಯಮವನ್ನು ನಿರೂಪಿಸುವುದು ರಾಜಕೀಯ ಆರ್ಥಿಕತೆ. ಉತ್ಪಾದನೆಯ ಸಂದರ್ಭದಲ್ಲಿ ಮಾನವ ಸಂಬಂಧಗಳು ಹೇಗೆ ಉಂಟಾಗಿವೆ ಮತ್ತು ಬೆಳೆದಿವೆ, ಬೆಳೆಯುತ್ತಿವೆ, ಎಂಬುದರ ಸ್ಪಷ್ಟೀಕರಣ ಇಲ್ಲಿ ಸಿಗುತ್ತದೆ. ಪ್ರಕೃತಿಯೊಡನೆ ಸೆಣಸಿ ಸಹಬಾಳ್ವೆ ನಡೆಸುವ ಮಾನವನ ಜೀವನ ವಿಧಾನ, ಸ್ವಾತಂತ್ರ್ಯ, ಇತ್ಯಾದಿಗಳು ಅವನ ಆಯಾ ಕಾಲದ ಜ್ಞಾನ ಮತ್ತು ಅದರ ಅಳವಡಿಕೆಗೆ ಸಮನಾಗಿ ಇರುತ್ತದೆ. ಅದನ್ನು ಮೀರಿ ಆತ ಸ್ವಾತಂತ್ರ್ಯವನ್ನು ಅನುಭವಿಸಲಾರ. ನೈಸರ್ಗಿಕ ನಿಯಮದಂತೆ ಮಾನವನು ಜೀವಂತವಾಗಿರಬೇಕಾದರೆ ಉಸಿರಾಡುತ್ತಿರಬೇಕು. ಉಸಿರಾಡದೆಯೂ ಜೀವಂತವಾಗಿರುವ ಸ್ವಾತಂತ್ರ್ಯ ಅವನಿಗಿಲ್ಲ. ಅಂತೆಯೇ ಸಾಮಾಜಿಕ ಮತ್ತು ಆರ್ಥಿಕ ನಿಯಮಗಳೂ ಸಹ ಅವನ ಇರುವಿಕೆಯನ್ನು ನಿರ್ಧರಿಸುತ್ತವೆ, ಬದಲಾಯಿಸುತ್ತವೆ, ಮತ್ತು ಪೋಷಿಸುತ್ತವೆ. ನಿಯಮದ ಜ್ಞಾನ, ಅದರ ಅಳವಡಿಕೆಗೆ ಅಗತ್ಯವಾದ ವ್ಯವಸ್ಥೆ, ಇವು ಮಾನವ ಸಮಾಜದ ಸೂತ್ರಗಳು. ಜ್ಞಾನವಿದ್ದರೆ ಸಾಮೂಹಿಕ ಮಧ್ಯಪ್ರವೇಶದಿಂದ ವ್ಯವಸ್ಥೆಯನ್ನು ಸುಗಮಗೊಳಿಸಿಕೊಳ್ಳುವ ಸಾಧ್ಯತೆಯುಂಟು. ಇಂದು ಭೂಕಂಪದ ಜ್ಞಾನ ನಮಗಿಲ್ಲ; ಆದ್ದರಿಂದ ಅದರ ಭೀಕರತೆಗೆ ತುತ್ತಾಗುವುದು ಅನಿವಾರ್ಯ. ನಾಳೆ ಅದು ನಮಗೆ ಲಭಿಸಿದರೂ ಅದರಿಂದ ಪಾರಾಗಲು ಸೂಕ್ತ ವ್ಯವಸ್ಥೆ ಇರಬೇಕು. ಅದನ್ನು ಮಾನವ ರಚಿಸಿಕೊಳ್ಳಬಲ್ಲ. ಆದರೆ ಅದಕ್ಕೆ ಅಡೆತಡೆಗಳನ್ನು ಒಡ್ಡುವ ವರ್ಗವೊಂದಿರಲು ಸಾಧ್ಯ. ಅದರ ಆಸಕ್ತಿಗಳೇ ಬೇರೆ. ಅದರಿಂದಾಗಿ ಸಂಘರ್ಷವೇರ್ಪಡುತ್ತದೆ. ಅಬ್ರಹಂ ಲಿಂಕನ್ನನ ಈ ಮಾತುಗಳನ್ನು ಗಮನಿಸೋಣ : ''ಸ್ವಾತಂತ್ರ್ಯವೇನೆಂದು ನಿಖರವಾಗಿ ಯಾರೂ ಹೇಳಿಲ್ಲ; ಆದರೆ ಅಮೆರಿಕನ್ನರಿಗೆ ಅದನ್ನು ತಿಳಿಯುವ ಅವಶ್ಯಕತೆ ಇದೆ. ನಾವೆಲ್ಲಾ ಸ್ವಾತಂತ್ರ್ಯದ ಪರವೇ. ಆದರೆ ನಾವೆಲ್ಲಾ ಅದನ್ನು ಒಂದೇ ಅರ್ಥದಲ್ಲಿ ಬಳಸುತ್ತಿಲ್ಲ. ಕೆಲವರಿಗೆ ಅದು ಸ್ವಚ್ಛಂದತೆ; ತನ್ನ ದುಡಿಮೆಯಿಂದ ಲಭ್ಯವಾದದ್ದು ತನಗೆ. ಹೀಗೆ ಅದರ ವಿನಿಯೋಗ. ಇತರರಿಗೆ, ಬೇರೆಯವರ ದುಡಿಮೆಯಿಂದ ಬಂದದ್ದೂ ತನಗೆ; ಹಾಗೆಯೇ ಅದರ ವಿನಿಯೋಗ ! ಇವೆರಡರ ನಡುವೆ ಸಾಮರಸ್ಯ ಅಸಾಧ್ಯ. ಒಬ್ಬರು ಅದನ್ನು ಸ್ವಾತಂತ್ರ್ಯವೆಂದರೆ ಇತರರು ಅದನ್ನು ದಬ್ಬಾಳಿಕೆ ಎನ್ನುತ್ತಾರೆ.'' ಅಂದರೆ, ಕೆಲವರಿಗೆ ದಬ್ಬಾಳಿಕೆಯ ಸ್ವಾತಂತ್ರ್ಯ !

ನಮ್ಮ ವ್ಯವಸ್ಥೆಯಲ್ಲಿ ಕಳಂಕವಿದ್ದರೆ ಬೇರೊಂದು ವ್ಯವಸ್ಥೆಯತ್ತ ನಾವು ಸಾಗಬೇಡವೇ, ಎಂಬುದು ಹೆಗೆಲ್ ಹಾಕಿಕೊಂಡ ಒಂದು ಪ್ರಶ್ನೆ. ಅದನ್ನು ಮುಂದುವರಿಸಿ ಮಾರ್ಕ್ಸ್ ಆ ಪರ್ಯಾಯದ ರಚನೆ ಏಕೆ, ಹೇಗೆ, ಮತ್ತು ಮುಂದೇನು ಎಂಬುದನ್ನು ವಿಶ್ಲೇಷಿಸಿದರು. ತತ್ತ್ವಜ್ಞಾನಿ ವೈಟ್‌ಹೆಡ್ ಹೇಳುವಂತೆ ಸ್ವಾತಂತ್ರ್ಯ ಎಂಬುದರಲ್ಲಿ ಆಯ್ಕೆ ಮತ್ತು ಕ್ರಿಯೆ ಎರಡೂ ಸಮ್ಮಿಳಿತಗೊಂಡಿವೆ. ಆತನ ಮಾತುಗಳು ಭಾಗಶಃ ಹೀಗಿವೆ : ''ಸ್ವಾತಂತ್ರ್ಯವೆಂದರೆ ಚಿಂತನೆ, ಸಂವಹನ, ಧಾರ್ಮಿಕ ನಂಬಿಕೆ, ಎಂಬಿತ್ಯಾದಿ ಕಲ್ಪನೆಗಳಿಗೆ ನಾವು ಸೀಮಿತಗೊಳಿಸಿಬಿಡುತ್ತೇವೆ. ಹಾಗೆ ಮಾಡಿದಾಗ, ನಮ್ಮ ಸಹಜೀವಿಗಳೊಡನೆ ಏರ್ಪಡುವ ವೈರುಧ್ಯಗಳಿಂದಾಗಿ ಸ್ವಾತಂತ್ರ್ಯಕ್ಕೆ ಎಲ್ಲೆಗಳು ನಿರ್ಮಾಣವಾಗುತ್ತವೆ, ಎಂಬ ಅರ್ಥ ಧ್ವನಿಸುತ್ತದೆ. ಇದು ಸರಿಯಲ್ಲ. ಮಾನವನ ಜೀವವನ್ನು ಪಂಜರದೊಳಕ್ಕೆ ದಬ್ಬುವಂತಹ ನೂರಾರು ಘಟಕಗಳಿವೆ : ಭೌತ ಪ್ರಕೃತಿಯ ಸ್ವಭಾವ, ಅದರ ಕಠಿಣ ನಿಯಮಗಳು ಅವುಗಳ ಪೈಕಿ ಸೇರುತ್ತವೆ. ಇದರಿಂದ ಹುಟ್ಟು-ಸಾವು, ಶಾಖ-ಶೀತ, ಹಸಿವು-ರೋಗ, ಇವೆಲ್ಲಾ ಸಂಭವಿಸುತ್ತವೆ. ...ಸ್ವಾತಂತ್ರ್ಯದ ಸತ್ವವಿರುವದು ನಮ್ಮ ಉದ್ದೇಶಗಳು (ಆಯಾ ಸಂದರ್ಭದಲ್ಲಿ) ಎಷ್ಟು ಪ್ರಾಯೋಗಿಕತೆಯನ್ನುಳ್ಳವು ಎಂಬುದರಲ್ಲಿ. ಮಾನವ ಜನಾಂಗದ ಸಂಕಷ್ಟಗಳು ಈ ಉದ್ದೇಶಗಳನ್ನು ನಿರೂಪಿಸುವ ನ್ಯೂನತೆಯಿಂದಾಗಿ ಹೆಚ್ಚಿವೆ ಮತ್ತು ಹತಾಶೆಗೆ ಕಾರಣವಾಗಿವೆ. ... ಪ್ರೊಮಿಥಿಯಸ್‌ನು ಮಾನವಕೋಟಿಗೆ ಪತ್ರಿಕಾ ಸ್ವಾತಂತ್ರ್ಯವನ್ನು ಬಳುವಳಿಯಾಗಿ ತಂದುಕೊಡಲಿಲ್ಲ. ಅವನು ಬೆಂಕಿಯನ್ನು ತಂದುಕೊಟ್ಟ. ಅದರಿಂದ ಅಡಿಗೆ ಬೇಯಿಸಿಕೊಳ್ಳಬಹುದು, ಚಳಿ ಹೋಗಲಾಡಿಸಿಕೊಳ್ಳಬಹುದು. ಅಂದರೆ, ಮಾನವನ ಪ್ರಾಥಮಿಕ

೯ನೇ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೧೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




### ಮಾರ್ಚ್ ಸಂಚಿಕೆ – ಎಚ್ಚೆನ್

ಮೌಢ್ಯವನ್ನು ಅಪ್ಪಿಕೊಳ್ಳುವ ಜನರ ಪ್ರವೃತ್ತಿಯನ್ನು ಕೊನೆಗೊಳಿಸಲು ಡೋಂಗಿ ಬಾಬಾಗಳನ್ನು ವೈಚಾರಿಕತೆಯ ಚಾಟಿಯಿಂದ ಬಾರಿಸಿ ಬಯಲಿಗೆಳೆದು ಜನರಲ್ಲಿ ವಿಚಾರ ಕ್ರಾಂತಿಯನ್ನು ಹೊತ್ತಿಸಿದ ವಿಜ್ಞಾನಿ, ಶಿಕ್ಷಣತಜ್ಞ, ಎಲ್ಲಾ ವಾದಗಳಿಂದಲೂ ಒಳ್ಳೆಯದನ್ನು ಹೀರಿಕೊಂಡು ತನ್ನದೇ 'ಎಚ್ಚೆನ್‌ವಾದ' ರೂಪಿಸಿಕೊಂಡು ಮುನ್ನಡೆದ ಡಾ|| ಎಚ್. ನರಸಿಂಹಯ್ಯನವರು ಎನ್.ಇ.ಎಸ್. ಸಂಸ್ಥೆಯನ್ನೇ ಜೀವಾಳವಾಗಿಸಿಕೊಂಡು, ವಿದ್ಯಾರ್ಥಿಗಳ ಒಡನಾಟದಲ್ಲೇ ಇದ್ದುಕೊಂಡು ವಿಜ್ಞಾನದ ಚಟುವಟಿಕೆಗಳನ್ನು ಹುಟ್ಟುಹಾಕಿ, ಪ್ರತಿಯೊಬ್ಬರಲ್ಲೂ ಪ್ರಶ್ನಿಸುವ ಮನೋಭಾವ ಬೆಳೆಸಿ ಪ್ರಜ್ಞಾವಂತರಾಗುವಂತೆ ಮಾಡಲು ಹೆಣಗಿದ್ದರ ಜೊತೆಗೆ, ಹುಟ್ಟಿದ ಊರನ್ನು ಉತ್ತಮವಾಗಿ ರೂಪಿಸಿ, ಕೊನೆಯುಸಿರೆಳೆಯುವ ತನಕವೂ ಸರಳತೆಯನ್ನು ಕೈಬಿಡದಿದ್ದುದು ಸುಲಭ ಸಾಧ್ಯವಾದ ಮಾತೇನಲ್ಲ. ಅವರ ಹಾಸ್ಯ ಚಟಾಕಿಗಳನ್ನು ಹಲವಾರು ಮಹನೀಯರು ಹಂಚಿಕೊಂಡಿದ್ದಾರೆ. ಸಂಪಾದಕೀಯ ಅರ್ಥಗರ್ಭಿತವಾಗಿದೆ.

ಅಂತೆಯೇ ದಬ್ಬಾಳಿಕೆ, ದೌರ್ಜನ್ಯ, ಲೈಂಗಿಕ ಶೋಷಣೆ, ಬೆತ್ತಲೆಸೇವೆ, ಬಾನಾಮತಿಯಂತಹ ಎಚ್ಚೆನ್ ಕೂಡ ವಿರೋಧಿಸುತ್ತಿದ್ದ ಕಂದಾಚಾರಗಳನ್ನು ಹಾಗೂ ತಾವು ಕಂಡುಂಡ ಅದೆಷ್ಟೋ ಅನುಭವಗಳನ್ನು ಹೆಕ್ಕಿ ತೆಗೆದು ಸಮಾಜಮುಖಿ ಸಾಹಿತ್ಯ ಸೃಷ್ಟಿಸಿ ಹಲವಾರು ಪ್ರಶಸ್ತಿಗಳನ್ನು ಮಡಿಲಿಗೆ ತುಂಬಿಕೊಂಡಿರುವ, ಜೊತೆಗೆ ಇಂದಿನ ಮಹಿಳೆಯರಿಗೆ ಆದರ್ಶಪ್ರಾಯರಾಗಿರುವ ಖ್ಯಾತಲೇಖಕಿ ಗೀತಾ ನಾಗಭೂಷಣರ ಬರಹ ಹಾಗೂ 'ಬದುಕು' ಕುರಿತು ನಡೆಸಿರುವ ಸಂದರ್ಶನ ಸಮಯೋಚಿತವಾಗಿದೆ. ನಿಜವಾಗಿಯೂ ಇದೊಂದು ಸಂಗ್ರಹಯೋಗ್ಯ ಸಂಚಿಕೆಯೇ ಸರಿ.

ಪಣಜಿ — **ಅಂಕಳ್ಳಿ ಜಯರಾಂ**

ಮತ್ತೆ ಮತ್ತೆ ಕಣ್ಣಿಗೆ ಅಡರುವ ತೇವ; ಕೈಯನ್ನು ತೊಡರಿಕೊಂಡು ಅಚೇತನಕ್ಕೊಳಗಾಗಿಸುತ್ತಿದೆ. ಹಳ್ಳಿಯ ಮುಗ್ಧತೆಯೊಂದಿಗೇ ಸಿಲಿಕಾನ್ ವ್ಯಾಲಿಯಲ್ಲಿ, ಧ್ಯೇಯ ಬದ್ಧತೆಗಳಿಂದಲೇ ಬದುಕಿದ್ದ ಚೇತನದ ಬಗ್ಗೆ ಕೇವಲ ಹಿರೀಕರು ಬರೆದಾಗ ನನ್ನಂಥವನು ಭಾವ ಬರಿದಾಗಿಸಿಕೊಳ್ಳುವುದು ಹೇಗೆಂಬ ಒತ್ತಡಕ್ಕೆ ಬಿದ್ದೆ. ನಾನು ೮೩-೮೬ರ ನ್ಯಾಷನಲ್ ಕಾಲೇಜಿನ ವಿದ್ಯಾರ್ಥಿ. ಬೇರೆಲ್ಲಾ ರಂಗುರಂಗಿನ ಕಾಲೇಜುಗಳಲ್ಲಿ ಅವಕಾಶವಿದ್ದರೂ ಸೆಳೆದಿದ್ದು ನ್ಯಾಷನಲ್ ಕಾಲೇಜು ಮತ್ತು ಅದರ ಹಿಂದಿನ ಅಗಾಧ ಎಚ್ಚೆನ್ ನೆರಳು. ಸಿಟಿಯ ಜಟಿಜಟಿಗೆ ಹೊಂದಿಕೊಳ್ಳುತ್ತಲೇ ಇಂಗ್ಲಿಷಿಗೆ ಕಂಗಾಲಾಗುತ್ತಲೇ ಏದುಸಿರಿಡುವಾಗ ಎಚ್ಚೆನ್ ನಗುತ್ತಾ ಹೇಳಿದ್ದು ''ನಮಗೆ ಅಪನಂಬಿಕೆ ಅಷ್ಟೆ. ಹಳ್ಳಿ ಹುಡುಗರೇ ಎಂದಿಗೂ ಗೆಲ್ಲೋದು ಹೆದರಬೇಡಪ್ಪಾ'', ಎಂದು. ಇನ್ಯಾರೋ ಈ ಮಾತಾಡಿದ್ದರೆ ಅದು ಕೇವಲ ಸಾಂದರ್ಭಿಕವಾಗಿರುತ್ತಿತ್ತೇನೊ. ಆದರೆ ಎಚ್ಚೆನ್ನರಿಂದ ಬಂದ ಆ ವಾಕ್ಯಕ್ಕೆ ಅವರ ಸಾಧನೆಯೆಲ್ಲದರ ಶಕ್ತಿ ಆವಾಹಿತವಾಗಿ ನನ್ನನ್ನ ಹುರಿದುಂಬಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ.

ಕಾಕತಾಳೀಯವೆಂಬಂತೆ ಕೆಲವೇ ತಿಂಗಳ ಹಿಂದೆ ನಾನು, ವಿನಿ, ಮತ್ತು ನಾಗೇಶ ಇಂದಿಗೂ ನಮ್ಮ ಕಾಲೇಜಾಗೇ ಉಳಿದಿರುವ ನ್ಯಾಷನಲ್ ಕಾಲೇಜಿನ ದರ್ಶನಕ್ಕೆಂದು ಹೋಗಿದ್ದಾಗ ಅಚಾನಕ್ಕಾಗಿ ಎಚ್ಚೆನ್‌ರ ದರ್ಶನವೂ ಆಯಿತು. ಆಗಲೇ ಕುಂದುತ್ತಿದ್ದ ಆರೋಗ್ಯದ ನಡುವೆ ಹೈರಾಣಾಗಿದ್ದರೂ ತುಂಟತನದ, ಸಾಮೀಪ್ಯದ ಆ ಮಾತುಗಳು, ಅವರ ಮುಪ್ಪುರಿಗೊಂಡ ಸಮಾಜಮುಖೀ ಸರಳತೆ, – ನನ್ನನ್ನು ಲಜ್ಜೆಗೊಳಗಾಗಿಸಿಬಿಟ್ಟವು. ಅಂತಹ ಕೊನೇ ಕೊಂಡಿಯೂ ಕಳಚಿಕೊಂಡಿತೇ ಎಂದು ಈಗ ಭಯವೂ ಆಗಿಬಿಡುತ್ತದೆ.




ಅವರ ಸಾಧನೆ, ಸರಳತೆ, ವೈಚಾರಿಕತೆ, ರಾಜೀಗಳು, ಇತ್ಯಾದಿ ಎಲ್ಲ ಇರಲಿ. ಮುಪ್ಪಿನವರೆಗೆ ಸಾರ್ಥಕವಾಗಿ ಬದುಕುವಂತಾದರೆ, ಅವರಲ್ಲಿ ಹತ್ತಂಶ ಸಾಧಿಸುವಷ್ಟಾದರೆ, ಅವರಂತೆ ಕಡೇ ಘಳಿಗೆಗಳಲ್ಲಿ ಆನಂದದಿಂದ ಮುಗ್ಧವಾಗಿ ಹೃದಯ ತುಂಬಿ ನಗುವಂತಾದರೆ, ಅವರಂತೆ ಸತ್ತಾಗ ಸಂಬಂಧಿಗಳಲ್ಲದ ಒಂದು ಹತ್ತು ಜನ ಆರ್ದ್ರರಾಗುವಂತೆ ಜೀವನ ನಾನು ಜೀವಿಸುವಂತಾದರೆ...!

ಪಾವಗಡ — **ಕೆ. ಪುರುಷೋತ್ತಮ ರೆಡ್ಡಿ**

೧೯೮೪-೮೫ರಲ್ಲಿ ನನ್ನ ಒಬ್ಬ ಮಗನನ್ನು ಬಸವನಗುಡಿ ನ್ಯಾಷನಲ್ ಕಾಲೇಜಿನಲ್ಲಿ ವಿಜ್ಞಾನ ವಿದ್ಯಾರ್ಥಿಯಾಗಿ ದಾಖಲಿಸಲು ಹೋದೆ. ಇದಕ್ಕೆ ಪ್ರೇರಣೆ ಹೆಚ್.ಎನ್. ಹೇಗೆಂದರೆ ೧೯೬೬ರಲ್ಲಿ ನನ್ನ ಹುಟ್ಟೂರಾದ ಸಂತೇಕಲ್ಲಹಳ್ಳಿಯ ಪಕ್ಕ ಬೀಚಗೊಂಡಹಳ್ಳಿ ಎಂಬ ಊರಿದೆ. ಆ ಊರಿನ ಬಡರೈತನೊಬ್ಬನ ಮಗ 'ತ್ಯಾಗರಾಜ' ಎಂಬುವನು ಎಸ್.ಎಸ್.ಎಲ್.ಸಿ.ಯಲ್ಲಿ ಅತ್ಯುತ್ತಮ ಶ್ರೇಣಿಯಲ್ಲಿ ತೇರ್ಗಡೆಯಾಗಿ ಬಸವನಗುಡಿ ನ್ಯಾಷನಲ್ ಕಾಲೇಜಿನಲ್ಲಿಯೇ ಓದಬೇಕೆಂಬ ಮಹದಾಸೆ ಹೊತ್ತಿದ್ದವನಾಗಿದ್ದನು. ನಾನೂ ಅವನೂ ಚಿಂತಾಮಣಿಯ ಹಿಂದುಳಿದ ವರ್ಗಗಳ ವಿದ್ಯಾರ್ಥಿನಿಲಯದಲ್ಲಿ ಒಂದೇ ಕೊಠಡಿಯಲ್ಲಿ ಬೇರೆ ಬೇರೆ ತರಗತಿಗಳಲ್ಲಿ ಓದುತ್ತಿದ್ದ ಸಹಪಾಠಿಗಳು. ಅವನು ನನಗಿಂತ ಒಂದು ವರ್ಷ ಕಿರಿಯನಾಗಿದ್ದನಷ್ಟೆ! ಬಹಳ ಬುದ್ಧಿವಂತ. ಮಹಾನ್ ಪ್ರತಿಭಾಶಾಲಿಯಾಗಿ ಹೊರಬರುತ್ತಾನೆಂಬ ಆಶಾಕಿರಣ ಅವನ ಬಗ್ಗೆ ನನಗಿತ್ತು! ಕಾರಣ ಅವನು ಸದಾ ನೆನಪಿಸಿಕೊಳ್ಳುತ್ತಿದ್ದ ಕೋಲಾರ ಜಿಲ್ಲೆಯ ಅನರ್ಘ್ಯ ರತ್ನಗಳೆಂದರೆ – ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯ ಮತ್ತು ಡಾ|| ಹೆಚ್. ನರಸಿಂಹಯ್ಯನವರನ್ನು ಮಾತ್ರ! ಅವನು ನ್ಯಾಷನಲ್ ಕಾಲೇಜಿನಲ್ಲಿ ಪ್ರವೇಶಕ್ಕಾಗಿ ಅರ್ಜಿ ಸಲ್ಲಿಸಿದ್ದ – ಮೊದಲ ಪಟ್ಟಿಯಲ್ಲಿ ಅವನಿಗೆ ಪ್ರವೇಶ ಸಿಗಲಿಲ್ಲ! ಆ ಕಾರಣಕ್ಕಾಗಿಯೇ 'ಹುಚ್ಚ'ನಾಗಿ 'ಮಾಯ'ವಾಗಿಬಿಟ್ಟ! ಮಾಯವಾಗಿಬಿಟ್ಟ ಅಷ್ಟೆ! ಏನಾದ ? ಇಂದಿಗೂ ಯಾರಿಗೂ ಗೊತ್ತಿಲ್ಲ!!! ಅವನು ಮಾಯವಾಗುವುದಕ್ಕೆ ಅವನಿಗೆ ನ್ಯಾಷನಲ್ ಕಾಲೇಜಿನಲ್ಲಿ 'ಸೀಟು' ಸಿಗಲಿಲ್ಲವೆಂಬುದು ಕಾರಣವೆಂದು ನನಗೆ ಗೊತ್ತು. ಇದು ಸತ್ಯ. ಅವನು ಈ ಮಾತನ್ನು ಕೊನೆಯ ಸಾರಿ ನನ್ನ ಬಳಿ ಹೇಳಿಕೊಂಡಿದ್ದ. ಈ ಘಟನೆ ನನ್ನ ಮನಸ್ಸಿನ ಮೇಲೆ ತೀವ್ರ ಪರಿಣಾಮ ಉಂಟು ಮಾಡಿತ್ತು. ಅವನಿಗೆ ಗೊತ್ತಿದ್ದ ವಿಶ್ವೇಶ್ವರಯ್ಯನವರಾಗಲಿ, ಹೆಚ್.ಎನ್.ರವರಾಗಲಿ ನನ್ನ ಮಗನಿಗೆ ಗೊತ್ತಿರಲಿಲ್ಲ. ನನಗೆ ಗೊತ್ತಿದ್ದ ಕಾರಣ ಮಾಯವಾದ 'ತ್ಯಾಗರಾಜ'ನನ್ನು ನನ್ನ ಮಗನ ರೂಪದಲ್ಲಿ ಭಾವಿಸಿಕೊಂಡು ನಾನು ಮೊದಲ ಬಾರಿ ನನ್ನ ಮಗನ ಪಿ.ಯು.ಸಿ. ಪ್ರವೇಶಕ್ಕಾಗಿ 'ತ್ಯಾಗರಾಜ'ನು ಮಾಯವಾದ ಗುಂಗಿನಲ್ಲಿಯೇ ಹೆಚ್.ಎನ್.ರನ್ನು ಮೊದಲ ಸಾರಿ ಮಗನಸಹಿತ ಕಂಡೆ! ಅವರನ್ನು ಕಾಣುವ ಒಂದೆರಡು ಕ್ಷಣಗಳ ಹಿಂದೆ ನನ್ನ ಮಿತ್ರನ ರೂಪ ನನ್ನ ಮನಸ್ಸನ್ನು ಕದಡಿತ್ತು! ಹೆಚ್.ಎನ್.ರ ಕಛೇರಿಯೊಳಕ್ಕೆ ಹೋದಾಗ ಪ್ರಸನ್ನವದನರಾಗಿ ''ಇಲ್ಲಪ್ಪ ತಪ್ಪು ತಿಳಿಯಬೇಡ. ಬಹಳ ಒತ್ತಡ ಇದೆ. ನೀನೂ ಒಂದು ಕಾಲೇಜಿನ ಅಧ್ಯಾಪಕ. ಪ್ರವೇಶದ ಒತ್ತಡ ನಿನಗೂ ತಿಳಿದಿರುವುದೇ ಅಲ್ಲವೆ ? ಇರುವ ಅವಕಾಶದಲ್ಲಿ ಎಲ್ಲರಿಗೂ ನ್ಯಾಯ ದೊರಕಿಸಬೇಕಿದೆ. ನಿನ್ನ ಮಗನಿಗೆ ಸೀಟು ಕೊಡಲಾಗುವುದಿಲ್ಲ'' ಎಂಬ ಮಾತನ್ನು ನಿರ್ಧಾರಿತವಾಗಿ ಸ್ಪಷ್ಟವಾಗಿ ಹೇಳಿದರು. ನನಗಿದ್ದ ಮತ್ತೊಂದು ಬ್ರಹ್ಮಾಸ್ತ್ರ ನಾವು ಮೀಸಲು ಜನರು. ನನ್ನ ಜನ ಕರ್ನಾಟಕದಲ್ಲಿ ಇರುವುದೇ ೩,೪೪೧ ಜನ. ಸರ್ಕಾರಿ ದಾಖಲೆಗಳ ಪ್ರಕಾರ ಶೇಕಡ ೦.೦೪ರಷ್ಟು ಮಾತ್ರ. ನಾನೇ ಮೊದಲ ಪದವೀಧರ. ನನ್ನ ಮಕ್ಕಳನ್ನು ನಾನು ಓದಿಸಬೇಡವೆ ? ನೀವೂ ನಮ್ಮವರೆಂದು ಬಂದೆ ಎಂಬ ಮೊಂಡುವಾದ ಮಂಡಿಸಿದೆ. ''ಅವೆಲ್ಲಾ ನನ್ನ ಬಳಿ ನಡೆಯುವುದಿಲ್ಲ. 'ಇಲ್ಲ' ಎಂದೆನಲ್ಲ. ನನ್ನ ಸಮಯ ವ್ಯರ್ಥ ಮಾಡಬೇಡ'' ಎಂದರು. ಒಬ್ಬ ತಂದೆಯಾಗಿ ನನ್ನ ಮಗನಿಗೆ ಪ್ರವೇಶಾವಕಾಶ ನೀಡಲಿಲ್ಲವಲ್ಲ ಎಂದು ಮುನಿಸಿಕೊಂಡೆ ಹೊರಬಂದೆ! ನಂತರ ನನ್ನೊಬ್ಬ ಸ್ನೇಹಿತ ''ಜಯನಗರ ನ್ಯಾಷನಲ್ ಕಾಲೇಜಿನಲ್ಲಿ ಪ್ರವೇಶ ಪಡೆಯಲು ಮುಖ್ಯಮಂತ್ರಿಗಳ ಸಹಾಯ ಬೇಕಾಯಿತಪ್ಪ'' ಎಂದು ಎಚ್ಚೆನ್‌ರ ನಿಷ್ಠುರವಾದ 'ಸತ್ಯ' ಪಾಲನೆಯನ್ನು ಕೊಂಡಾಡಿದರು. ನನ್ನ ಮಗನಿಗೆ ಪ್ರವೇಶ ನಿರಾಕರಿಸಿದಾಗ

ಹೇಳಿದ ಮಾತು ನೆನಪಾಯಿತು ! ''ಒತ್ತಡಗಳಿವೆ, ಇರುವ ಅವಕಾಶದಲ್ಲಿ ಎಲ್ಲರಿಗೂ ನ್ಯಾಯ ದೊರಕಿಸಬೇಕು''.

ಬೆಂಗಳೂರು — ಪ್ರೊ॥ ಎನ್. ಚಂದ್ರಪ್ಪ

**ಏಪ್ರಿಲ್ ಸಂಚಿಕೆ**

**ಹದಿನೈದು ಮಂದಿ ಕೊಲೆಗಡುಕರ ಕತೆ** (ಅನು : ಎಲ್. ವಿ. ಶಾಂತಕುಮಾರಿ) : ನನ್ನ ಎರಡು ಅನುಭವಗಳಿವು. ನಾಡಿನ ಹೆಸರಾಂತ ಹಿರಿಯ ಶಸ್ತ್ರವೈದ್ಯ ಡಾ॥ ಆರ್. ಎಚ್. ಎಸ್. ಶೆಣೈ ನನ್ನ ಶಾಲಾಸಹಪಾಠಿ ಮಿತ್ರ. ಅವರು ಮೈಸೂರಿನ ಸರ್ಕಾರೀ ವೈದ್ಯ ಕಾಲೇಜಿನ ಮುಖ್ಯಸ್ಥ ರಾಗಿದ್ದಾಗ ಶಸ್ತ್ರಚಿಕಿತ್ಸೆಯನ್ನು ಪ್ರತ್ಯಕ್ಷ ನೋಡಬೇಕೆಂಬ ಅಪೇಕ್ಷೆಯನ್ನು ಅವರಿಗೆ ತಿಳಿಸಿದೆ. ಇಲ್ಲಿಯ ಖಾಸಗಿ ಆಸ್ಪತ್ರೆಯಲ್ಲಿ ತಾವು ಸದ್ಯವೇ ಮಾಡಲಿದ್ದ ಮೂಲವ್ಯಾಧಿ ಶಸ್ತ್ರಕ್ರಿಯೆಯನ್ನು ದರ್ಶಿಸಲು ನನಗೆ ಅವಕಾಶ ಒದಗಿಸಿದರು. ಆ ಸುಮಾರು ಒಂದೂವರೆ ತಾಸು ಅದನ್ನು ಚಿಕಿತ್ಸಕವಾಗಿ ಗಮನಿಸಿದೆ. ಎಲ್ಲ ಮುಗಿದನಂತರ ಅವರು ನನ್ನ ಅನಿಸಿಕೆ ತಿಳಿಯಬಯಸಿದರು. ಮೂರು ಮುಖ್ಯ ಅಂಶಗಳನ್ನು ಪ್ರಸ್ತಾವಿಸಿದೆ: ''ಬೋಗುಣಿಗಟ್ಟಲೆ ರಕ್ತ ಹರಿದುಹೋಗುವುದೆಂದು ನಿರೀಕ್ಷಿಸಿದ್ದೆ, ಹಾಗಾಗದೇ ಅಲ್ಪಸ್ವಲ್ಪ ನೆತ್ತರು ಒಸರಿದ್ದನ್ನು ಮಾತ್ರ ಕಂಡೆ. ನಿನ್ನ ಕೈಚಳಕ ಭರತನಾಟ್ಯದಲ್ಲಿಯ ಮುದ್ರೆಗಳಂತೆ ಕಲಾತ್ಮಕವಾಗಿತ್ತು! ಸ್ವಭಾವತಃ ವಿನೋದಶೀಲ ಪ್ರವೃತ್ತಿಯ ನೀನು ಶಸ್ತ್ರಕ್ರಿಯೆಯ ವೇಳೆ ಆಯಾಗಳ ಮೇಲೆ ಸಿಡುಕುತ್ತಿದ್ದೆ.'' ಅವರ ವಿವರಣೆ ಮಾರ್ಮಿಕವಾಗಿತ್ತು. ''ಜೀಟಿ ! ನಿನ್ನ ಚಿಂತನೆ ಸರಿಯಾಗಿದೆ. ರೋಗಿಯ ರಕ್ತದ ಗರಿಷ್ಠ ಉಳಿತಾಯವೊಂದೇ ವೈದ್ಯನ ಆದ್ಯ ಲಕ್ಷ್ಯವಾಗಬೇಕು, ಹೊರತು, ಎಷ್ಟು ಶೀಘ್ರವಾಗಿ ತಾನು ಶಸ್ತ್ರಕ್ರಿಯೆಯನ್ನು ಮುಗಿಸಿದ್ದೇನೆ ಎಂಬುದಲ್ಲ. ಯಾವುದೇ ಶಸ್ತ್ರಕ್ರಿಯೆ ವೈದ್ಯಕೀಯವಾಗಿ ಪರಿಪೂರ್ಣ ವಾಗಿದ್ದರೆ ಅದೊಂದು ಕಲೆಯೂ ಆಗಿರತಕ್ಕದ್ದೆಂದು ನಮಗೆ ಪ್ರಾಯೋಗಿಕ ಶಿಕ್ಷಣ ದೊರೆತಿದೆ. ಇಂಥ ಒಂದು ಸಾಮೂಹಿಕ ಸುಸಂಘಟಿತ ಕ್ರಿಯೆಯಲ್ಲಿ ಆಯಾಗಳಿಂದ ತೊಡಗಿ ಎಲ್ಲರಿಗೂ ಖಚಿತ ಮತ್ತು ನಿರ್ದಿಷ್ಟ ಪಾತ್ರಗಳಿವೆ. ಅವನ್ನು ಉಡಾಫೆಯಿಂದಲೋ ಅಜ್ಞತೆಯಿಂದಲೋ ಅವರು ನಿರ್ಲಕ್ಷಿಸಿದರೆ ಆಗಾಗಲೇ ಅವರಿಗೆ ಶಾಸ್ತಿ ಮಾಡಲೇಬೇಕು – ರೋಗಿಯ ಬದುಕು-ಸಾವಿನ ಪ್ರಶ್ನೆಯಿದು.''

ಎರಡನೆಯದು, ೨೦೦೧ರಲ್ಲಿ ನನ್ನ ವಯಸ್ಸು ೭೫ ದಾಟಿತ್ತು. ಆ ಮೊದಲೇ ಬಾಧಿಸುತ್ತಿದ್ದ ನೆಗಡಿ, ಕೆಮ್ಮು ಆಗ ಉಲ್ಬಣಿಸುತ್ತಿದ್ದುವು. ಎಲ್ಲ ಬಗೆಯ ತಪಾಸಣೆಗಳೂ ಗುಳಿಗೆಗಳ ನುಂಗಣೆಯೂ ತಜ್ಞ ವೈದ್ಯರ ಆದೇಶದಂತೆ ನಡೆದುವು. ೭೭ರ ವೇಳೆಗೆ ಪರಿಸ್ಥಿತಿ ವಿಕೋಪಿಸಿತು. ಸ್ಪೀರಾಯ್ಡ್ ಮುಂತಾದ ಮಾತ್ರೆಗಳ ಸೇವನೆ, ಚುಚ್ಚುಮದ್ದು ಇತ್ಯಾದಿ ಪ್ರಯೋಗ ಮುಂದುವರಿಯಿತು. ಇದ್ದಕ್ಕಿದ್ದಂತೆ ತೀವ್ರ ಜ್ವರಪೀಡಿತನಾದೆ. ಹೈಟೆಕ್ ಆಸ್ಪತ್ರೆಯ ತುರ್ತು ನಿಗಾ ಘಟಕಕ್ಕೆ ಸೇರಿಸಿದರು. ಅಲ್ಲಿಯ ವಿಶಿಷ್ಟ ತಜ್ಞರ ಪ್ರಕಾರ ದೋಷಪೂರ್ಣ ರೋಗನಿದಾನ ಮತ್ತು ತಪ್ಪು ಔಷಧಿಸೇವನೆಗಳೇ ನನ್ನ ಅನಾರೋಗ್ಯದ ಕಾರಣಗಳು. ತೀವ್ರ ವ್ಯಾಧಿಗೆ ತೀವ್ರತರ ಮದ್ದು. ೪೫ ದಿನಗಳ ನಂತರ ಜೀವಚ್ಛವವಾಗಿ ಮರಳಿದೆ ೨೦೦೩ರ ಕೊನೆಯಲ್ಲಿ. ಈಗಿನ ಸ್ಥಿತಿ ಏನು ? ಗಣಕ ಪರಿಭಾಷೆಯಲ್ಲಿ ನನ್ನ ಯಂತ್ರಾಂಶ ಶಿಥಿಲವಾಗಿದೆ, ಅದೃಷ್ಟವಶಾತ್ ತಂತ್ರಾಂಶ ಕ್ಷೀಣಿಸಿಲ್ಲ. ಔಷಧಿಜನ್ಯ ಮತ್ತು ವೈದ್ಯಕೃತ ರೋಗಗಳಿಗೇನು ಪರಿಹಾರ ?

ಮೈಸೂರು — ಜಿ. ಟಿ. ನಾರಾಯಣರಾವ್

ಏಪ್ರಿಲ್ ತಿಂಗಳ 'ಹೊಸತು' ಸಮಯೋಚಿತ ಸಂಚಿಕೆ ಯಾಗಿ ಮೂಡಿಬಂದಿದೆ. ಕಾರಣ ಲೆನಿನ್‌ರವರು ಜನಿಸಿದ ತಿಂಗಳಾದ್ದರಿಂದ ಮುಖಪುಟದಲ್ಲಿ ಅವರಿದ್ದಾರೆ ಎನಿಸುತ್ತದೆ. ಬಜೆಟ್ ಕುರಿತ ಮಾಹಿತಿ ಅರ್ಥಗರ್ಭಿತವಾಗಿತ್ತು. ಕಲಾವಿದರಿಗೆ ಮೀಸಲಾದ ಒಂದು ಪುಟ ಬಹುವರ್ಣ ರಂಜಿತವಾಗಿ ಬರುತ್ತಿರುವುದು ಸಂತಸದ ವಿಚಾರ. ಕನ್ನಡಿಗರ ಹಿರಿಮೆಗೆ ಮಹಿಳೆಯರ ಕೊಡುಗೆ ಅಪಾರವಾದುದು ಎಂಬ ವಿಷಯವನ್ನು ಎಚ್. ವಿ. ಸಾವಿತ್ರಮ್ಮನವರು ನಿರೂಪಿಸಿದ್ದಾರೆ. ಚಾಚಾನೆಹರು ಮತ್ತು ಈಚಲುಮರ ಕುರಿತಂತೆ ಈರಪ್ಪ ಎಂ. ಕಂಬಳಿಯವರು ಬಹಳ ಚೆನ್ನಾಗಿ ವಿವರಿಸಿದ್ದಾರೆ.

ಪಾಂಡವಪುರ — ಅ. ಮೃತ್ಯುಂಜಯ

**ದ್ವೈತ ವೃಕ್ಷದ ಕೆಳಗೆ**

ಕತ್ತಲೆಯನಪ್ಪಿ ಎಲ್ಲ ಸುಖಿಸುವ ವೇಳೆ
ಬಿಟ್ಟೆಲ್ಲವನ್ನೂ ಬೈರಾಗಿ ನೀ ಬಂದೆ
ಕೊಪ್ಪರಿಗೆ ಧನಕನಕ ಇರುವುದೆಲ್ಲೀ ತನಕ
ನೀನು ಹೊರಟೇಬಿಟ್ಟೆ ಕಾಗಿನೆಲೆಗೆ
ಯಾವ ನೆಲೆ ದೊರೆತಿದೆಯೊ ಇಂದು ನಿನಗೆ !

* * *

ದ್ವೈತ ವೃಕ್ಷದ ಕೆಳಗೆ ಕನಕ ನಿಂತಿದ್ದಾನೆ
ಬುಡ ಬೇರೆ ಕುಡಿ ಬೇರೆ ಎಂಬಂತೆ
ನಾಲ್ಕು ವರ್ಣದ ವೃಕ್ಷ, ಕಡೆಯಲಿದ್ದಾನೆ
ದ್ವೈತ ವೃಕ್ಷದ ಕೆಳಗೆ ಕನಕ ನಿಂತಿದ್ದಾನೆ.

ದಾಸಕೂಟದ ವೇಷಧಾರಿ ದಾಸರ ನಡುವೆ
ಮೋಸ ಹೋಗಿದ್ದಾನೆ, ವ್ಯಾಸರಾಯರ ಒಲಿಸಿ
ಲೇಸ ಕಂಡಿದ್ದಾನೆ, ಭಕ್ತರಾಗಿಯ
ಸಮತೆಯಾಶಿಸಿದ್ದಾನೆ
ಸಾಧನೆಯ ಶೂನ್ಯದಲಿ ಸೋತು ನಿಂತಿದ್ದಾನೆ
ದ್ವೈತ ವೃಕ್ಷದ ಕೆಳಗೆ ಕನಕ ನಿಂತಿದ್ದಾನೆ.

ಅಂದು ನೀ ತುಳಿದ ನಾಗರವಿಂದೂ ಬುಸುಗುಟ್ಟಿ
ನಿನ್ನಂತೆ ಕಂಡವರನೆಲ್ಲ ಕಾಡುತಿದೆ
ಅಂದು ನೀನೆದೆಯೊಡ್ಡಿ ಕಾದಿದಷ್ಟಕ್ಕೇ
ಇಂದಿಗೂ ತುಸು ಕಸುವು ಮನೆ ಮಾಡಿದೆ.

ಕಳೆದು ಹೋಗಿದ್ದೀಯೆ ಹೇಗೆ ನೀ ಕನಕ !
ಬರೀ ಲೆಕ್ಕಕ್ಕಿದ್ದೀಯೆ ಇಲ್ಲೀ ತನಕ !!

ಬೆಂಗಳೂರು — ರಾಜಶೇಖರ ರಾಮಣ್ಣ ಬಿಲ್ವಪತ್ರಿ

**ಯುದ್ಧವಿಮಾನ ಮಾರಾಟ ತಂತ್ರ**

ಪಾಕಿಸ್ತಾನ ಮತ್ತು ಭಾರತ ಕಾಶ್ಮೀರದ ಭೂಭಾಗದ ಒಡೆತನಕ್ಕಾಗಿ ದಶಕಗಳಿಂದ ಯುದ್ಧಕ್ಕೆ ಬಿದ್ದು ಬಡವಾಗಿ ರುವಾಗ ಅಮೇರಿಕ ಎಂಬ ಕೋತಿ ಬಂದು ಇಬ್ಬರ ಮಧ್ಯೆ ಭಿನ್ನಾಭಿಪ್ರಾಯ ಬಿಗಡಾಯಿಸುವಂತೆ ಮಾಡಿ ತನ್ನ ಮಾರಕ ಶಸ್ತ್ರಾಸ್ತ್ರಗಳನ್ನು ಮಾರುವ ಮೂಲಕ ತನ್ನ ಆರ್ಥಿಕ ಮತ್ತು ರಾಜಕೀಯ ಹಿತಾಸಕ್ತಿಯನ್ನು ಕಾಪಾಡಿಕೊಳ್ಳಲು ಉರಿವ ಮನೆ ಗಳ ಹಿರಿವ ಕೆಲಸವನ್ನು ನಿಯತ್ತಾಗಿ ಮಾಡುತ್ತಾ 'ಇಬ್ಬರ ಜಗಳ ಮೂರನೆಯವನಿಗೆ ಲಾಭ' ಎಂಬುದನ್ನು ಜಗತ್ತಿಗೆ ಸಾರುತ್ತಿದೆ. ಭಾರತದ ಆರ್ಥಿಕ ಮೂಲ ಇರುವುದು ಕೃಷಿಯಲ್ಲಿ, ಆದರೆ ಅಮೇರಿಕಾದ ಮುಖ್ಯ ಆದಾಯ ಮೂಲ ಯಾವುದು ? ಶಸ್ತ್ರಾಸ್ತ್ರ ತಯಾರಿಕೆ ಮತ್ತು ಮಾರಾಟ. ಬಂದೂಕು, ಬಾಂಬು, ಮಿಸೈಲ್, ಕ್ಷಿಪಣಿಗಳನ್ನು ಬೆಳೆಯುವ ಈ ಯುದ್ಧಕೋರ ದೇಶದ ಮೂಲ ಉದ್ದೇಶ ಅವುಗಳ ಮಾರಾಟ. ಎಲ್ಲಾ ದೇಶಗಳು ಶಾಂತಿ ನೆಮ್ಮದಿಯಿಂದಿದ್ದರೆ ಅದ್ಯಾರು ಕೊಂಡ್ಕೋತಾರೆ ಇವನ್ನ? ಅದಕ್ಕೆಂದೇ ಎರಡು ದೇಶಗಳ ನಡುವೆ ವೈಮನಸ್ಸು ಹುಟ್ಟಿಸಿ, ಸಮರದಾಹವನ್ನು ಸೃಷ್ಟಿಸಿ, ಶಸ್ತ್ರಾಸ್ತ್ರ ಗಳನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಎರಡು ದೇಶಕ್ಕೂ ಸರಬರಾಜು ಮಾಡುವ ಅಮೇರಿಕವು ಅವಕಾಶ ಸಿಕ್ಕಾಗಲೆಲ್ಲ ಶಾಂತಿ ಮಂತ್ರವನ್ನು ಏಕತಾನತೆಯಿಂದ ಪಠಿಸುತ್ತಲೇ ಅಶಾಂತಿಯನ್ನು ಸೃಷ್ಟಿಸುತ್ತ ವಿಶ್ವ ಭಯೋತ್ಪಾದಕ ದೇಶವಾಗಿ ಅಟ್ಟಹಾಸ ಗೈಯುತ್ತಿರು ವುದನ್ನು ಖಂಡಿಸಲೂ ತಾಕತ್ತಿಲ್ಲದ ಹಲವಾರು ದೇಶಗಳು ಅಸಹಾಯಕತೆಯಿಂದ ಆಕಾಶ ನೋಡುತ್ತಿವೆ, ಇಲ್ಲವೇ ಸಹಾಯ ಯಾಚಿಸುತ್ತಿವೆ. ಸಾಮ್ರಾಜ್ಯಶಾಹಿ ಕುತಂತ್ರದ ಒಂದು ಭಾಗವೇ ಎಫ್-೧೬ ಯುದ್ಧ ವಿಮಾನದ ಮಾರಾಟ ಮತ್ತು ವಹಿವಾಟು. ಟೆಕ್ಸಾಸ್‌ನ ಸಮರ ವಿಮಾನ ತಯಾರಿಸುವ ಲಾಕ್‌ಹೀಡ್ ಮಾರ್ಟಿನ್ ಸಂಸ್ಥೆ ತಯಾರಿಕೆಯ ಎಫ್-೧೬ ಯುದ್ಧ ವಿಮಾನವು ಸಮಕಾಲೀನ ಸಮರ್ಥ ಮತ್ತು ಬಹುಪ್ರಯೋಜನ ಹೊಂದಿ ವಿಶ್ವಾದ್ಯಂತ ಬೇಡಿಕೆ ಪಡೆದಿದೆ. ಈ ಯುದ್ಧ ವಿಮಾನದ ಮಾರಾಟದಲ್ಲಿ ಅಮೇರಿಕ ತನ್ನ ಆರ್ಥಿಕ-ರಾಜಕಾರಣದ ಪೂರ್ಣ ಪ್ರಮಾಣದ ಪ್ರಯೋಜನ ಪಡೆಯಲು ತಂತ್ರ ಹೆಣೆದಿದೆ. ತೈಲಸಮೃದ್ಧ ದೇಶಗಳಿಗೆ ಆರ್ಥಿಕ ಕಾರಣಗಳಿಗಾಗಿ ಸರಬರಾಜು ಮಾಡಲಾಗುವ ಈ ಯುದ್ಧ ವಿಮಾನಗಳು, ಪಾಕಿಸ್ತಾನದಂತಹ ಭೌಗೋಳಿಕ ಕಾರ್ಯತಂತ್ರಕ್ಕೆ ಅನುಕೂಲವಾಗುವ ದೇಶಗಳಿಗೆ ಆರ್ಥಿಕ ಮತ್ತು ರಾಜಕೀಯ ಕಾರಣಗಳಿಗಾಗಿ ಪೂರೈಸಿ, ಶಸ್ತ್ರಾಸ್ತ್ರ ಪೈಪೋಟಿಯನ್ನು ಹುಟ್ಟುಹಾಕಿ ಸಂಘರ್ಷಮಯ ಮತ್ತು ವಿವಾದಾತ್ಮಕ ರಾಜಕೀಯ ಪರಿಸ್ಥಿತಿಗಳನ್ನು ತನ್ನ ಅನುಕೂಲಕ್ಕೆ ತಕ್ಕಂತೆ ನಿಯಂತ್ರಿಸುವ ಕಾರ್ಯತಂತ್ರವನ್ನು ಜಾರಿಗೊಳಿ ಸುತ್ತಿದೆ. ಭಾರತ ಮತ್ತು ಪಾಕಿಸ್ತಾನಗಳಂತಹ ದೇಶದ ಜನರಿಗೆ ಬೇಕಾಗಿರುವುದು ಬಾಂಬು, ಬಂದೂಕು, ಯುದ್ಧ ವಿಮಾನ ಗಳಲ್ಲ, ಬದುಕಲು ಅತ್ಯಗತ್ಯವಾದ ಊಟ, ವಸತಿ, ವಸ್ತ್ರ, ಶಿಕ್ಷಣ ಮತ್ತು ಶಾಂತಿ. ಅಮೇರಿಕದ ಕುತಂತ್ರವನ್ನು ಅರಿತು ಅದನ್ನು ಪ್ರತಿರೋಧಿಸುವ ತಾಕತ್ತು ಈ ದೇಶಗಳ ಪ್ರಭುತ್ವಕ್ಕೆ ಇರಬೇಕು. ಆದರೆ ಜನಸಾಮಾನ್ಯರಿಗೆ ಅರ್ಥ ವಾಗಬಹುದಾದ ಸಾಮ್ರಾಜ್ಯಶಾಹಿ ಹುನ್ನಾರಗಳು ಆಳುವ ದೊರೆಗಳಿಗೇಕೆ ಅರ್ಥವಾಗುತ್ತಿಲ್ಲ? ಎಂಬುದೆಲ್ಲರ ಪ್ರಶ್ನೆ.

ಬೆಂಗಳೂರು — ಎಸ್. ಶಶಿಕಾಂತ ಯಡಹಳ್ಳಿ

**ನಾಗ್ವಿಬ್ ಮಹಫೌಜ್**

ಈಜಿಪ್ಟಿಗೆ ಮಾತ್ರವಲ್ಲದೆ ಜಗತ್ತಿನ ಪ್ರತಿಯೊಬ್ಬ ಮಾನವೀಯ ಮೌಲ್ಯಗಳ ಪ್ರತಿಪಾದಕ ಮಾನವರಿಗೆ ನೊಬೆಲ್ ಕಿರೀಟ ತೊಡಿಸಿದ ಅತ್ಯಂತ ಅಪರೂಪದ ವ್ಯಕ್ತಿ ನಾಗ್ವಿಬ್ ಮಹಫೌಜ್‌ರ ಬಗೆಗಿನ ಸರಳ, ಸುಂದರ ಹಾಗೂ ಅನನ್ಯ ಲೇಖನಕ್ಕಾಗಿ ''ಹೊಸತು'' ಅಭಿನಂದನೀಯ. ದೇಶ,

ಭಾಷೆ, ಧರ್ಮ, ಜಾತಿ-ಮತ ಭೇದಗಳಿಂದ ದೂರ ನಿಂತು ಮಹಾನ್ ನಾಗರಿಕತೆಯ ದೇಶದಲ್ಲಿ ಬಾಳಿಬದುಕಿದ ಈ ಶ್ರೇಷ್ಠ ಬರಹಗಾರರ ಬದುಕಿನ ಒಳ ಮತ್ತು ಹೊರಗಿನ ವಿಚಾರಗಳನ್ನು ಆಳವಾಗಿ ಅಭ್ಯಸಿಸಿದುದರ ಪರಿಣಾಮವಾಗಿ ಅವರಿಂದ ಮೂಡಿಬಂದ ಕೃತಿಗಳು ಅತ್ಯಂತ ಶ್ರೇಷ್ಠವೆನಿಸಿವೆ. ಕಥೆಗಳು ಹಾಗೂ ಕಾದಂಬರಿಗಳು ಕೇವಲ ವಿಚಾರಗಳ, ಘಟನೆಗಳ ಅಥವಾ ಸುದ್ದಿಯ ವಿವರಗಳಾಗದೆ, ಸಮಗ್ರ ಬದುಕಿನ ಒಟ್ಟಾರೆ ವಸ್ತುವಾಗಿ, ಸಾಮಾಜಿಕ, ಧಾರ್ಮಿಕ ಹಾಗೂ ವಾಸ್ತವಗಳ ಚಿಂತನೆಗಳ ಸೃಷ್ಟಿಯಾದಾಗ ಬರಹಗಾರ ಸಾಹಿತಿಯಾಗಿ, ದಾರ್ಶನಿಕನಾಗಿ, ಮಿಗಿಲಾದ ಮಾನವನಾಗಿ ಹೃದಯಕ್ಕೆ ಹತ್ತಿರವಾಗುತ್ತಾ ಬದಲಾವಣೆಗಳ ಹರಿಕಾರರಾಗುತ್ತಾನೆ. ಮಾನವರ ಜೀವನದ ಬಗ್ಗೆ ಬದಲಾಗುತ್ತಿರುವ ಸಮಾಜದ ರೀತಿಯ ಬಗ್ಗೆ ಸೋಂಕಿನಿಂದ ನರಳುತ್ತಿರುವ ನಾಗರಿಕತೆಗಳ ಬಗ್ಗೆ ಅತ್ಯಂತ ಕಳವಳ ವ್ಯಕ್ತಪಡಿಸಿ ಒಳಿತಿಗಾಗಿ ಕಳಕಳಿಯ ಮನವಿಯನ್ನು ಸಲ್ಲಿಸುತ್ತಿರುವ ಈ ಮಹಾಪುರುಷ ಚಿರಾಯುವಾಗಲಿ ಎಂಬ ಹಾರೈಕೆ ಪ್ರತಿಯೊಬ್ಬ ಮಾನವರ ಪರವಾಗಿ ನೀವು ಸಲ್ಲಿಸಿರುವಿರಿ.

ಬೆಂಗಳೂರು - ೩ **ನರೇಂದ್ರ ಸಿರಕಜೆ**

### ಭಾರತ-ಪಾಕ್ ಬಾಂಧವ್ಯ

ವೀರ್‌ಝೂರಾ ಭಾರತ-ಪಾಕ್ ಪ್ರೇಮಕಥೆಯ ಚಿತ್ರ. ವೀರಪ್ರತಾಪಸಿಂಗ್ ಮತ್ತು 'ಖಾನ್' ಕಂದಾನ್ ಹುಡುಗಿ 'ಝೂರಾ' ಈ ಚಿತ್ರದಲ್ಲಿ ಅಮರ ಪ್ರೇಮಿಗಳಾಗಿ ನಿಲ್ಲುತ್ತಾರೆ. ಪ್ರಸ್ತುತ ಸಂದಿಗ್ಧ ಸನ್ನಿವೇಶದಲ್ಲಿ ಅಂದರೆ ಭಾರತ ಪಾಕ್ ಬಾಂಧವ್ಯದಲ್ಲಿ ಒಂದು ಹೊಸ ಮೈಲುಗಲ್ಲು ಎಂದು ಈ ಚಿತ್ರವನ್ನು ಬಣ್ಣಿಸಬಹುದು. ಪಾಕಿಸ್ತಾನಿಯರೆಂದರೆ ವೈರಿಗಳೇನೋ ಎಂಬಂತೆ ನಾವು ಕಂಡರೆ ನಮ್ಮನ್ನು ಪಾಕಿಸ್ತಾನದವರು ಶತ್ರುಗಳಂತೆ ಕಾಣುವ ರೀತಿಯಲ್ಲಿ ಇವತ್ತು ನಮ್ಮ ಉಭಯ ರಾಷ್ಟ್ರಗಳ ಬಾಂಧವ್ಯ ಹಳಸಿದೆ. ನಿಜಕ್ಕೂ ಇಂತಹ ಒಂದು ಪ್ರಯೋಗದಿಂದ ಕೋಮು ಸಾಮರಸ್ಯದಲ್ಲಿ ಮತ್ತು ಉಭಯ ರಾಷ್ಟ್ರಗಳ ಬಾಂಧವ್ಯ ಹೊಸೆಯುವಲ್ಲಿ, ಬೆಸೆಯುವಲ್ಲಿ ಯಶಸ್ಸು ಗಳಿಸಿದೆ.

'ಭಾರತದಲ್ಲಿರುವವರು ಎಲ್ಲರೂ ಒಳ್ಳೆಯವರಲ್ಲ, ಪಾಕಿಸ್ತಾನದಲ್ಲಿರುವವರು ಎಲ್ಲರೂ ಕೆಟ್ಟವರಲ್ಲ' ಎಂಬುವುದಕ್ಕೆ 'ಸಿದ್ದಿಕಿ' ಕುಟುಂಬದ ನ್ಯಾಯವಾದಿ ಪಾತ್ರ ಜೀವ ತುಂಬುತ್ತದೆ. ಒಬ್ಬ ಭಾರತೀಯನನ್ನು ಬಿಡಿಸಲು ಅಂದರೆ ಅವನ ಪ್ರೀತಿಯನ್ನು ಮತ್ತು ಅವನನ್ನು ಅರ್ಥ ಮಾಡಿಕೊಳ್ಳಲಾಗದ ಸನ್ನಿವೇಶದಲ್ಲಿ, ಸತ್ಯದ ಹುಡುಕಾಟದಲ್ಲಿ ಹುಡುಗಿ ಕೃಶಳಾಗುತ್ತಾಳೆ. ಗೆಲುವಿಗಾಗಿ ಹೋರಾಟ ಮಾಡುವ ಗೆಲುವೇ ಬದುಕು ಎನ್ನುವ ಮೂಲಭೂತ ವಾದಿಗಳು ರಾಜಕೀಯದ ಕೈಗೊಂಬೆಯಾಗಿ ರಾಜಕಾರಣಿಗಳ ಆಟಕ್ಕೆ ದಾಳವಾಗಿರುವ ಮೂಲಭೂತ ವಾದ ಪ್ರತೀಕವಾಗಿ ಜಾಕೀರ್ ಅಹಮ್ಮದ್ ಪಾತ್ರ ಸಾಕ್ಷೀಕರಿಸುತ್ತದೆ. ದುಷ್ಟಶಕ್ತಿ ಮತ್ತು ಶಿಷ್ಟಶಕ್ತಿ ಮಧ್ಯ ಹೋರಾಟದ ಕೊನೆಯಲ್ಲಿ ಶಿಷ್ಟಶಕ್ತಿಯ ಗೆಲುವು ಇಲ್ಲಿ ಕಾಣುತ್ತೇವೆ. ಈ ನಾಡಿನ ಮಣ್ಣು ಬೇರೆಯಲ್ಲ ಪಾಕಿಸ್ತಾನದ ಮಣ್ಣು ಬೇರೆಯಲ್ಲ ಎಂಬುವುದಕ್ಕೆ ಭಾರತೀಯ ಖೈದಿಗೆ '೭೮೬' ಸಂಖ್ಯೆ ಕೊಟ್ಟು ಅವನ ಅಭಿಪ್ರಾಯದಲ್ಲಿ ಉಭಯ ದೇಶದ ಸಂಬಂಧ, ಮಣ್ಣಿನ ಗುಣದರ್ಶನ ಪಾಕಿಸ್ತಾನದ ಮಣ್ಣಿನಲ್ಲಿ ತನ್ನ ತಾಯಿನಾಡಿನ ದರ್ಶನ ಕಾಣುತ್ತಾನೆ. ನಮ್ಮ ಮಧ್ಯ ಏಕೆ ಈ ಕಂದರ ಎಂಬ ಅವನ ಮಾತು ಅತ್ಯಂತ ಅರ್ಥಗರ್ಭಿತವಾಗಿದೆ.

ಹೊನ್ನಹಮ್ಮಿಗಿ **ಅಬ್ದುಲ್ ರಜಾಕ್ ಮುಲ್ಲಾ**

### ಉನ್ನತ ಶಿಕ್ಷಣ

ಬಹುರಾಷ್ಟ್ರೀಯ ಕಂಪನಿಗಳು ವಾಣಿಜ್ಯ, ವ್ಯಾಪಾರ ಮತ್ತು ಕೈಗಾರಿಕಾ ಕ್ಷೇತ್ರಕ್ಕೆ ಪ್ರವೇಶಿಸಿದ್ದು ಈಗಾಗಲೇ ಹಳೆಯ ವಿಷಯ. ಆದರೆ ವಿದೇಶಿ ವಿಶ್ವವಿದ್ಯಾಲಯಗಳು ಭಾರತದ ಉನ್ನತ ಶೈಕ್ಷಣಿಕ ಕ್ಷೇತ್ರದ ಕಡೆಗೆ ಇತ್ತೀಚಿನ ವರ್ಷಗಳಲ್ಲಿ ತೋರುತ್ತಿರುವ ಒಲವು ಬಹುಚರ್ಚಿತ ವಿಷಯವಾಗಿದೆ. ರಸಾಯನ ವಿಜ್ಞಾನಿ ಪ್ರೊ|| ಸಿ. ಎನ್.ಆರ್. ರಾವ್ ಅವರ ನೇತೃತ್ವದಲ್ಲಿ ವಿದೇಶಿ ವಿಶ್ವವಿದ್ಯಾಲಯಗಳ ಬಗ್ಗೆ ಒಂದು ಸಮಿತಿಯು ವರದಿಯನ್ನು ತಯಾರಿಸಿತ್ತು. ಅದರ ಪರಿಣಾಮ ತಿಳಿದುಬಂದಿಲ್ಲ.

ಅಮೇರಿಕಾದ ಕಾರ್ನೆಲ್ ವಿಶ್ವವಿದ್ಯಾಲಯವು ನೇರವಾಗಲ್ಲದಿದ್ದರೂ, ಧಾರವಾಡ ಕೃಷಿ ವಿಶ್ವವಿದ್ಯಾಲಯದ ಜೊತೆ ಒಡಂಬಡಿಕೆ ಮಾಡಿಕೊಂಡಿದೆ, ಹಾಗೆಯೇ ಬೆಂಗಳೂರು ವಿಶ್ವವಿದ್ಯಾಲಯವು ಆಸ್ಟ್ರೇಲಿಯಾದ ಅನೇಕ ವಿಶ್ವವಿದ್ಯಾಲಯಗಳ ಜೊತೆ ಹೊಂದಾಣಿಕೆಯ ಹಸ್ತಲಾಘವ ಮಾಡಿದೆ. ಅದರ ಕಾರ್ಯವ್ಯಾಪ್ತಿ, ಅದರಿಂದಾಗುವ ಪ್ರಯೋಜನಗಳು ಏನು? ಮುಂಬರುವ ದಿನಗಳಲ್ಲಿ ವಿದೇಶಿ ಶೈಕ್ಷಣಿಕ ಸಂಸ್ಥೆಗಳು ನೇರವಾಗಿ ಭಾರತಕ್ಕೆ ಪ್ರವೇಶಿಸುವುದು ಖಾತರಿಯಾಗಿದೆ. (ಕಾಗೆಯ ಗೂಡಿನಲ್ಲಿ ಕೋಗಿಲೆ ಮೊಟ್ಟೆ ಇಟ್ಟಂತೆ). ಅಂದರೆ ಇಲ್ಲಿನ ಮೂಲಭೂತ ಸೌಲಭ್ಯಗಳನ್ನು ಹೇರಳವಾಗಿ ಉಪಯೋಗಿಸಿಕೊಂಡು ಸಂಸ್ಥೆಗಳನ್ನು ನಡೆಸುವ ಔದಾರ್ಯವನ್ನು ಬಹಳ ತ್ವರಿತವಾಗಿ ತೋರಿಸುತ್ತಿದ್ದಾರೆ. ಭಾರತದಲ್ಲಿ ವಿದೇಶೀ ಶಿಕ್ಷಣ ಸಂಸ್ಥೆಗಳ ಅಗತ್ಯವೇನಾದರೂ ಜರೂರಾಗಿದೆಯೇ? ಸ್ವಾತಂತ್ರ್ಯ ಗಳಿಸಿ ಐವತ್ತೆಂಟು ವರ್ಷ ಪೂರೈಸಿರುವ ಭಾರತವು ಅದರ ಉದ್ದಗಲಕ್ಕೂ ಅನೇಕ ಉನ್ನತ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುವಲ್ಲಿ ಶ್ರಮಿಸುತ್ತಿದೆ. ಈ ಸಾಲಿನ ಆಯವ್ಯಯದಲ್ಲಿ ೧೦೦ ಕೋಟಿ ರೂಪಾಯಿಗಳನ್ನು ಬೆಂಗಳೂರಿನ ಪ್ರತಿಷ್ಠಿತ ಭಾರತೀಯ ವಿಜ್ಞಾನ ಸಂಸ್ಥೆಗೆ ಮೀಸಲಿಡಲಾಗಿದೆ. ಈ ಅನುದಾನವನ್ನು ಸಂಸ್ಥೆ ಮತ್ತು ಸ್ಥಳೀಯ ವಿಶ್ವವಿದ್ಯಾಲಯಗಳು ಅರ್ಥಪೂರ್ಣವಾಗಿ ಉಪಯೋಗಿಸಿಕೊಂಡಲ್ಲಿ ದೇಶದ ಸರ್ವತೋಮುಖ ಅಭಿವೃದ್ಧಿಯಾಗುವುದರಲ್ಲಿ ಅನುಮಾನವಿಲ್ಲ.

ವಿದೇಶದಿಂದ ಬರುವ ಶಿಕ್ಷಣ ಸಂಸ್ಥೆಗಳಿಂದಾಗುವ ಲಾಭವನ್ನು ಅಲ್ಲಗಳೆಯುವಂತಿಲ್ಲ. ಅವರ ಮುಂದುವರಿದ ತಾಂತ್ರಿಕತೆ, ಪ್ರಾಯೋಗಿಕ ಬೋಧನಾ ಕ್ರಮಗಳು ವಿಭಿನ್ನವಾಗಿದ್ದರೂ, ಸ್ಥಳೀಯ ಬುದ್ಧಿಜೀವಿಗಳಿಗೆ ಉದ್ಯೋಗಾವಕಾಶಗಳು ದೊರೆಯುವ ಸಾಧ್ಯತೆ ಇದೆ. ಆದರೆ ಈ ವಿದೇಶಿ ಸಂಸ್ಥೆಗಳ ಕಾರ್ಯವೈಖರಿ, ಸ್ಥಳೀಯ ಸಮಸ್ಯೆಗಳಿಗೆ ಸ್ಪಂದಿಸುವ ವಿಧಾನ, ವಿಧಿಸುವ ಶುಲ್ಕ ಮತ್ತು ನಮ್ಮಲ್ಲಿರುವ ವಿಶ್ವವಿದ್ಯಾಲಯಗಳ ಪೈಪೋಟಿ ಸಾಮರ್ಥ್ಯದ ಬಗ್ಗೆ ಗಂಭೀರ ಚಿಂತನೆ ಈ ಸಂದರ್ಭದಲ್ಲಿ ಅಗತ್ಯವಿದೆ. ಜಾಗತೀಕರಣದ ಮಾರುಕಟ್ಟೆಯಲ್ಲಿ ವಿದೇಶಿ ಸಂಸ್ಥೆಗಳು ಲಾಭಗಳಿಸಲು ವ್ಯಾಪಾರಕ್ಕೆ ಬರುತ್ತಿದ್ದಾರೆ ಎನ್ನೋಣವೆ? ನಮ್ಮಲ್ಲಿಗೆ ಬರುವ ವಿದೇಶಿ ಶಿಕ್ಷಣ ಸಂಸ್ಥೆಗಳು ಯಾವ ರೀತಿ ಬಡ ಹಾಗೂ ಮಧ್ಯಮವರ್ಗದ ಪ್ರತಿಭಾವಂತ ವಿದ್ಯಾರ್ಥಿಗಳನ್ನು ತಮ್ಮತ್ತ ಸೆಳೆಯುತ್ತವೆ ಎಂಬುದನ್ನು ಕಾದು ನೋಡಬೇಕಾಗಿದೆ.

ಒಂದು ವೇಳೆ ಪ್ರೊ|| ರಾವ್ ಅವರ ವರದಿಯನ್ನು ಕೇಂದ್ರ ಸರ್ಕಾರ ಮಾನ್ಯಮಾಡಿದ್ದೇ ಆದರೆ ಭವಿಷ್ಯದಲ್ಲಿ ಹೆಚ್ಚಾಗಿ ಸ್ಥಾಪನೆಯಾಗಲಿರುವ ವಿದೇಶಿ ಸಂಸ್ಥೆಗಳ ಮೇಲೆ ಸರ್ಕಾರ ಯಾವ ರೀತಿಯಾದ ಧೋರಣೆಯನ್ನು ತಳೆಯುತ್ತದೆ ಎಂಬುದು ಯಕ್ಷ ಪ್ರಶ್ನೆಯಾಗಿದೆ. ಜಾಗತೀಕರಣದ ಅಲೆಯಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಬಂದು ನಮ್ಮ ಕೈಗಾರಿಕಾ ಕ್ಷೇತ್ರದಲ್ಲಿ ಮಾಡಿರುವ ಅನಾಹುತವನ್ನು (ಸಣ್ಣ ಮತ್ತು ಗುಡಿ ಉದ್ಯಮಗಳ ಪತನ) ನೋಡಿದರೆ ಮುಂಬರುವ ದಿನಗಳಲ್ಲಿ ದೇಶಿ ವಿದ್ಯಾ ಸಂಸ್ಥೆಗಳ (ಸೈದ್ಧಾಂತಿಕ ಹಿನ್ನೆಲೆಯಲ್ಲಿ ನಡೆಯುವ) ಪತನ ದೂರವಿಲ್ಲವೆನ್ನಿಸುತ್ತದೆ. ಇಲ್ಲಿ ವಿದೇಶಿ ಉನ್ನತ ಶಿಕ್ಷಣ ಸಂಸ್ಥೆಗಳಿಂದ ಭಾರತದ ಪ್ರಜೆಗಳಿಗೆ ಅದ್ಭುತವಾದ ಜ್ಞಾನ ದೊರೆಯುತ್ತದೆಂಬುದು ಮೂರ್ಖತನದ ಪರಮಾವಧಿಯಾಗುತ್ತದೆ.

ಭಾರತದಲ್ಲಿ ಈಗಾಗಲೇ ಸ್ಥಾಪಿತವಾಗಿರುವ ಶೈಕ್ಷಣಿಕ ಸಂಸ್ಥೆಗಳಿಗೆ ಹೆಚ್ಚಿನ ಆರ್ಥಿಕ ನೆರವು, ಶಿಸ್ತುಬದ್ಧ ಮಾನವ ಸಂಪನ್ಮೂಲ (ರಾಜಕೀಯ ಮಧ್ಯಸ್ಥಿಕೆ ಇಲ್ಲದ), ಸಂಶೋಧನೆಗೆ ಹೆಚ್ಚು ಒತ್ತು ಹಾಗೂ ವಿಪುಲ ಉದ್ಯೋಗಾವಕಾಶಗಳನ್ನು ಕೊಡುವ ನಿಟ್ಟಿನಲ್ಲಿ ಸರ್ಕಾರವಲ್ಲದೆ ಸಮಸ್ತ ಜನತೆಯು ಕಾರ್ಯಪ್ರವೃತ್ತರಾಗಿ ನಮ್ಮದೇ ಆದ ಒಂದು ಉತ್ತಮ ಶಿಕ್ಷಣ ವ್ಯವಸ್ಥೆಯನ್ನು ರೂಪಿಸುವ ನಿಟ್ಟಿನಲ್ಲಿ ಶ್ರಮಿಸೋಣವೆ?

ಬೆಂಗಳೂರು **ಬಿ. ಎನ್. ವೇಣುಗೋಪಾಲ್**

ಉನ್ನತ ಶಿಕ್ಷಣಕ್ಕೆ ಹಣಕಾಸು ಹೂಡಿಕೆಯಿಂದ ಸರಕಾರವು ಹಿಂದೆಗೆಯುತ್ತಿದೆ, ಹಣಕಾಸು ಸಂಪನ್ಮೂಲದ ಕೊರತೆಯಿಂದ ಉನ್ನತ ಶಿಕ್ಷಣವು ಸೊರಗುತ್ತಿದೆ ಎಂದು ದೂರುವ ಭರದಲ್ಲಿ ಇಂತಹ ಪರಿಸ್ಥಿತಿ ನಿರ್ಮಾಣವಾಗುವಲ್ಲಿ ಕಾಲೇಜು ಶಿಕ್ಷಕರ ಪಾತ್ರವನ್ನು ಲೇಖನದಲ್ಲಿ ಉದ್ದೇಶಪೂರ್ವಕವಾಗಿಯೇ ಮರೆಮಾಡಲಾಗಿದೆ ಎನಿಸಿತು (ಲೇಖಕರು ಸ್ವತಃ ಕಾಲೇಜು ಶಿಕ್ಷಕರಾಗಿರುವುದು ಇದಕ್ಕೆ ಕಾರಣವಿರಬಹುದು).

ಹಿಂದೆ ಗೌರವಯುತ ಬದುಕು ಸಾಗಿಸುವುದಕ್ಕೆ ಕಡಿಮೆಯಾಗದಷ್ಟು ಸಂಬಳ ಬರುತ್ತಿದ್ದಾಗ ನಮ್ಮ ಶಿಕ್ಷಕರುಗಳು ತಕ್ಕ ಮಟ್ಟಿಗೆ ಚೆನ್ನಾಗಿಯೇ ಕೆಲಸ ಮಾಡುತ್ತಿದ್ದರು. ಆದರೆ ಈಗ ವಾರಕ್ಕೆ ಹತ್ತೋ-ಹನ್ನೆರಡೋ ಗಂಟೆಗಳ ಅಕ್ಷರಶಃ 'ಉಪನ್ಯಾಸ', ತಮ್ಮ ಪೀರಿಯಡ್ ಮುಗಿಯಿತೆಂದರೆ ಕಾಲೇಜಿನಿಂದಲೇ ನಾಪತ್ತೆಯಾಗಬಹುದಾದಂತಹ ಸೌಲಭ್ಯ. ಯಾರಿಗುಂಟು ಯಾರಿಗಿಲ್ಲ ಕೈತುಂಬ ಸಂಬಳ. ಓದುವುದನ್ನು ಮಾತ್ರ ಮರೆತೇಬಿಟ್ಟರು. ಜ್ಞಾನಸಂವರ್ಧನೆಯ ವಿಚಾರದಲ್ಲಿ ಬಹುತೇಕ ಈ ಶಿಕ್ಷಕರು ನಿಂತ ನೀರಾದರು.

ಯುಜಿಸಿಯು ವೇತನ ಶ್ರೇಣಿಯನ್ನೇನೋ ಕೊಟ್ಟಿತು. ಅದರ ಜತೆಯಲ್ಲಿಯೇ ಕರ್ತವ್ಯ ನಿಬಂಧನೆಗಳನ್ನೂ ನಿಗದಿಪಡಿಸಿತು. ತಕ್ಷಣ ನಮ್ಮ ಶಿಕ್ಷಕರುಗಳು ಆಕ್ಷೇಪ ಎತ್ತಿಯೇ ಬಿಟ್ಟರು. ಪೀರಿಯಡ್ ಮುಗಿದ ತಕ್ಷಣ ಕಾಲೇಜಿನಿಂದ ನಾಪತ್ತೆಯಾಗುತ್ತಿದ್ದ ಮಂದಿಗೆ ಭಾರೀ ಕಷ್ಟವಾಗತೊಡಗಿತು. ಹಾಗಾಗಿಯೇ ಯುಜಿಸಿ ವೇತನ ಶ್ರೇಣಿ

ಬೇಕು. ಆದರೆ ಅದು ನಿಗದಿಪಡಿಸಿದ ಕರ್ತವ್ಯದ ಹೊರೆ ಬೇಡವೆಂದು ಬಹಿರಂಗವಾಗಿಯೇ ಹೇಳತೊಡಗಿದರು. ಇದೆಂಥಾ ನ್ಯಾಯ!

ಓದು ಮತ್ತು ಜ್ಞಾನದ ನವೀಕರಣ ಎಂದರೆ ನಮ್ಮ ಬಹಳ ಮಂದಿ ಶಿಕ್ಷಕರಿಗೆ ಬಹಳ ದೂರ. ಅದರಲ್ಲೂ ಡಾಕ್ಟರೇಟ್ ಆಗಿಹೋಯಿತೆಂದರೆ ಇನ್ನು ಕಲಿಯುವುದಕ್ಕೇನೂ ಉಳಿದಿಲ್ಲ ಎಂಬ ಧನ್ಯತಾಭಾವ. ಡಾ|| ಎಂಬ ಅಲಂಕಾರವನ್ನು ಹೆಸರಿಗೆ ಶಾಶ್ವತವಾಗಿ ಅಂಟಿಸಿಕೊಂಡು ಆರಾಮ ಕುಳಿತುಬಿಡುತ್ತಾರೆ. ಜಪಾನಿನಲ್ಲಿ ಒಂದು ಡಾಕ್ಟರೇಟ್ ಪಡೆಯುವುದು ಎಷ್ಟು ಕಷ್ಟವೋ (ನಮ್ಮಲ್ಲಿ ಅದು ಎಷ್ಟು ಸುಲಭವಾಗಿದೆ ಮತ್ತು ಎಷ್ಟು ಕಳಪೆಯಾಗಿದೆ ಎಂಬ ಬಗ್ಗೆ ಈಗ ಗಂಭೀರ ಚರ್ಚೆಗಳು ನಡೆಯುತ್ತಿವೆ) ಡಾಕ್ಟರೇಟನ್ನು ಉಳಿಸಿಕೊಳ್ಳುವುದೂ ಅಷ್ಟೇ ಕಷ್ಟ. ಅದು ಉಳಿದುಕೊಳ್ಳಬೇಕಾದರೆ ನಿರಂತರ ಸಾಧನೆ, ಸಂಶೋಧನೆ ಸಾಬೀತುಪಡಿಸುತ್ತಲೇ ಇರಬೇಕು. ನಮ್ಮ ಡಾಕ್ಟರೇಟ್ ಪದವೀಧರರು ಮತ್ತೆ ಸಂಶೋಧನೆ ಮಾಡುವ ಮಾತಂತಿರಲಿ ಪತ್ರಿಕೆಗಳಲ್ಲಿ ಒಂದೆರಡು ಒಳ್ಳೆಯ ಲೇಖನ ಬರೆಯುವಂತಹ ಕೆಲಸ ಕೂಡ ಮಾಡುವುದಿಲ್ಲ.

ಹಾಗಾಗಿ, ಸಮಸ್ಯೆ ಭೂತಾಕಾರವಾಗಿ ಬೆಳೆಯುವಲ್ಲಿ ನಮ್ಮೆಲ್ಲರ ಪಾಲೂ ಇದೆ ಎನ್ನುವುದನ್ನು ಮೊದಲು ನಾವು ಅರ್ಥಮಾಡಿಕೊಳ್ಳಬೇಕು. ಪಡೆಯುತ್ತಿರುವ ವೇತನಕ್ಕೆ ತಕ್ಕ ಕೆಲಸಮಾಡುತ್ತಿದ್ದೇವೆಯೇ, ಜ್ಞಾನವನ್ನು ನವೀಕರಣಗೊಳಿಸುತ್ತಿದ್ದೇವೆಯೇ ಎಂದು ನಮ್ಮ ಕಾಲೇಜು ಶಿಕ್ಷಕರುಗಳು ಎದೆಮುಟ್ಟಿ ಪ್ರಶ್ನಿಸಿಕೊಳ್ಳಬೇಕು. ಯುಜಿಸಿ ನಿಗದಿಪಡಿಸುವ ಭರ್ಜರಿ ವೇತನಶ್ರೇಣಿ ಬೇಕು. ಆದರೆ ಅದು ನಿಗದಿಪಡಿಸುವ ಕರ್ತವ್ಯಭಾರಗಳು, ಅರ್ಹತೆಗಳು, ಗುಣಮಟ್ಟ ಮಾನದಂಡಗಳು ಬೇಡ ಎನ್ನುವುದು ನ್ಯಾಯವಲ್ಲ ಎನ್ನುವುದನ್ನೂ ಉದಾರವಾಗಿ ಒಪ್ಪಿಕೊಳ್ಳಬೇಕು.

ಮಂಗಳೂರು — **ಎಸ್. ಕೆ. ಸಿದ್ಧಾರ್ಥ**

### ವಸತಿ ಶಾಲೆಗಳ ಶಿಕ್ಷಕರು

ಇತ್ತೀಚೆಗೆ ರಾಜ್ಯದ ಮೊರಾರ್ಜಿ ದೇಸಾಯಿ/ ನವೋದಯ ಮಾದರಿ ವಸತಿ ಶಾಲೆಗಳಲ್ಲಿ ಗುತ್ತಿಗೆ ಆಧಾರದಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರಾಂಶುಪಾಲರು ಮತ್ತು ಸಹಶಿಕ್ಷಕರನ್ನು ಖಾಯಂಗೊಳಿಸಬೇಕು ಎಂದು ಆಗ್ರಹಿಸಲಾಗಿದೆ. ದಲಿತರು, ಹಿಂದುಳಿದವರು ಮತ್ತು ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ಸಮಾಜ ಕಲ್ಯಾಣ ಇಲಾಖೆ ಮೂಲಕ ಸರಕಾರವು ಪ್ರಾರಂಭಿಸಿರುವ ಈ ವಸತಿ ಶಾಲೆಗಳನ್ನು ಶಿಕ್ಷಣ ಇಲಾಖೆಯಿಂದ ನಿಯೋಜನೆಯ ಮೇರೆಗೆ ನೌಕರರನ್ನು ತೆಗೆದುಕೊಂಡು ನಡೆಸಲಾಗುತ್ತಿತ್ತು. ಆಯಾ ಜಿಲ್ಲಾ ಪಂಚಾಯಿತಿಗಳ ವ್ಯಾಪ್ತಿಗೆ ಒಳಪಟ್ಟ ಶಾಲೆಗಳಿವು. ನಂತರ ಸಮಾಜಕಲ್ಯಾಣ ಇಲಾಖೆಯು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ಎಂಬ ಸಂಸ್ಥೆಯನ್ನು ರಚಿಸಿತು. ಶಾಲೆಗಳ ನಿರ್ವಹಣೆಯ ಅಧಿಕಾರ ಈ ಸಂಘಕ್ಕೆ ಬಂದ ಬಳಿಕ ಅದು ಈ ತನಕ ನಿಯೋಜನೆ ಮೇರೆಗೆ ಕರ್ತವ್ಯ ನಿರ್ವಹಿಸುತ್ತಿದ್ದ ಸಿಬ್ಬಂದಿಯನ್ನು ಬಿಡುಗಡೆಗೊಳಿಸಿ ಮೀಸಲಾತಿ ಮತ್ತಿತರೇ ಸರಕಾರಿ ನಿಯಮಗಳ ಅನುಸಾರ ಅರ್ಹತೆಯ ಮೇಲೆ ತಾನೇ ಗುತ್ತಿಗೆ ಆಧಾರದಲ್ಲಿ ನೌಕರರನ್ನು ನೇಮಕ ಮಾಡಿ ಶಾಲಾ ನಿರ್ವಹಣೆ ಮಾಡತೊಡಗಿತು.

೨೦೦೫-೦೬ರ ಶೈಕ್ಷಣಿಕ ವರ್ಷದಿಂದ ಸದರಿ ಸಂಘವನ್ನು ರದ್ದುಪಡಿಸಿ ಎಲ್ಲ ಶಾಲೆಗಳನ್ನು ಆಯಾ ಜಿಲ್ಲಾ ಪಂಚಾಯಿತಿಗಳ ವಶಕ್ಕೊಪ್ಪಿಸಿ ಪೂರ್ವಯಥಾಸ್ಥಿತಿಯಂತೆ ಶಾಲೆಗಳನ್ನು ನಡೆಸಬೇಕೆಂದು ತಿಳಿಸಲಾಗಿದೆ. ಅದಕ್ಕೆ ಸಮಾಜ ಕಲ್ಯಾಣ ಇಲಾಖೆಯು ಸಮ್ಮತಿ ವ್ಯಕ್ತಪಡಿಸಿದೆ. ಪೂರ್ವಯಥಾಸ್ಥಿತಿ ಎಂದರೆ ಯಾವುದು? ಸಮಾಜ ಕಲ್ಯಾಣ ಇಲಾಖೆಯ ಅಂಗಸಂಸ್ಥೆ ನೇಮಕಾತಿ ಅರ್ಜಿ ಕರೆದಿರುವ ಸಂಘ ಕಾನೂನುಬಾಹಿರ ಎನ್ನುವುದು ಅರ್ಜಿ ಹಾಕಿದ ಅಭ್ಯರ್ಥಿಗೆ ತಿಳಿದಿರಲು ಸಾಧ್ಯವಿದೆಯೇ? ಸರಕಾರ ರಚಿಸಿದ ಸಂಸ್ಥೆ ಕಾನೂನು ಬಾಹಿರವಿದ್ದಲ್ಲಿ ಸರಕಾರವೇ ಅದಕ್ಕೆ ಜವಾಬ್ದಾರವಲ್ಲವೇ? ಈ ಹಿನ್ನೆಲೆಯಲ್ಲಿ ಇಲಾಖೆಯ ನೌಕರರಲ್ಲದಿದ್ದರೂ ಇಲಾಖೆಯ ನೌಕರನಿಗೆ ಇರಬೇಕಾದ ಜವಾಬ್ದಾರಿಯನ್ನು ನಿರ್ವಹಿಸುತ್ತಿರುವ ಗುತ್ತಿಗೆ ಆಧಾರದ ಶಿಕ್ಷಕರನ್ನು ಖಾಯಂಗೊಳಿಸಬೇಕು ಎಂಬ ಶಿಕ್ಷಕರು ಮತ್ತು ಪ್ರಾಂಶುಪಾಲರ ಬೇಡಿಕೆಗೆ ಅರ್ಥವಿದೆ. ಇತ್ತೀಚೆಗೆ ಗುತ್ತಿಗೆ ಆಧಾರದ ೬೦೦೦ ಜನ ಇಂಜಿನಿಯರ್‌ಗಳನ್ನು, ಕೆಲ ವರ್ಷಗಳ ಹಿಂದೆ ಗುತ್ತಿಗೆ ಆಧಾರದ ಪಶುವೈದ್ಯರನ್ನು ಖಾಯಂಗೊಳಿಸಿರುವಾಗ, ಕಾನೂನು ಬಾಹಿರವಾಗಿದ್ದರೂ ಮಾನವೀಯತೆಯ ಆಧಾರದಲ್ಲಿ ಗ್ರಾಮೀಣ ಮೀಸಲಾತಿಯಲ್ಲಿ ಬಂದ ನೌಕರರನ್ನು ಉಳಿಸಿಕೊಂಡಿರುವಾಗ ಒಟ್ಟು ವಸತಿ ಶಾಲೆಗಳಲ್ಲಿರುವ ಗರಿಷ್ಠ ೭೫೦ ಶಿಕ್ಷಕರು ಮತ್ತು ೭೫ ಪ್ರಾಂಶುಪಾಲರನ್ನು ಬೀದಿಗೆ ತಳ್ಳುವುದು ಮಾನವೀಯತೆಯೇ?

ಮೂಡಬಿದರೆ — **ಅರವಿಂದ ಚೊಕ್ಕಾಡಿ**

---

*ಸಂಪಾದಕೀಯ....೫ನೇ ಪುಟದಿಂದ*

ಅಗತ್ಯಗಳಲ್ಲಿ ಕ್ರಿಯಾಸ್ವಾತಂತ್ರ್ಯವು ಮಹತ್ವವುಳ್ಳದ್ದು.” ಇದಕ್ಕೆ ಜಾನ್ ಲೂಯಿಸ್ ಎಂಬ ತತ್ತ್ವಶಾಸ್ತ್ರಜ್ಞ ಇನ್ನೊಂದು ವಾಕ್ಯ ಸೇರಿಸಿದ: “ಉದ್ದೇಶವು ಪ್ರಾಯೋಗಿಕವಾಗಿ ಸಿದ್ಧಿಸಬೇಕಾದರೆ ಅದಕ್ಕೆ ಬೇಕಾದ ಸನ್ನಿವೇಶದ ತಿಳುವಳಿಕೆ ಇರಬೇಕು ಮತ್ತು ಅದನ್ನು ಅಳವಡಿಸಿಕೊಳ್ಳಬೇಕು.”

ವರ್ಗಗಳನ್ನಾಗಲಿ ವರ್ಗ ಹೋರಾಟವನ್ನಾಗಲಿ ಮಾರ್ಕ್ಸ್ ಸೃಷ್ಟಿಸಲಿಲ್ಲ. ಆತ ಇತಿಹಾಸದ ಅಧ್ಯಯನದಿಂದ ಅವುಗಳ ಸ್ವರೂಪವನ್ನು ಅನ್ವೇಷಿಸಿದ ಮತ್ತು ಸೂತ್ರೀಕರಿಸಿದ, ಅಷ್ಟೆ. ಮಾರ್ಕ್ಸ್ ಎಂಬ ವ್ಯಕ್ತಿ ಜನ್ಮತಾಳುವ ಸಾವಿರಾರು ವರ್ಷಗಳ ಹಿಂದೆಯೇ ಭಾರತದಲ್ಲಿ ದಸ್ಯುಗಳು, ಶೂದ್ರರು, ಅಸ್ಪೃಶ್ಯರು ತಮ್ಮ ಅಸ್ತಿತ್ವವನ್ನು ಪುನರ್ರಚಿಸಿಕೊಳ್ಳಲು ನೂರಾರು ಹೋರಾಟಗಳನ್ನು ನಡೆಸಿದ್ದರು ಮತ್ತು ಕೆಲವೊಮ್ಮೆ ಯಶಸ್ವಿಯೂ ಆಗಿದ್ದರು. ಉದಾಹರಣೆಗೆ, ಬುದ್ಧನ ಕಾಲದ ಆಸುಪಾಸಿನ ಧರ್ಮಶಾಸ್ತ್ರಕಾರರು ಶೂದ್ರರ ಬಗ್ಗೆ ಧಾರಾಳವಾಗಿ ಅವಹೇಳನಕರ ಮಾತುಗಳನ್ನಾಡಿ ಶುದ್ಧ ದ್ರೋಹವೆನಿಸುವಂತಹ ಕರಾಳ ಕಟ್ಟುನಿಟ್ಟುಗಳನ್ನು ವಿಧಿಸಿದರು; ಆದರೆ ಅದೇ ಧರ್ಮಶಾಸ್ತ್ರಕಾರರು ಗುಪ್ತರ ಕಾಲಕ್ಕೆ ಬರುವಷ್ಟರ ವೇಳೆಗೆ ಶೂದ್ರರಿಗೆ ಸ್ವಲ್ಪ ಗೌರವಯುತ ಸ್ಥಾನ ನೀಡಿ ಅವರ ಬಗ್ಗೆ ಸಹನೆಯ ಮಾತುಗಳನ್ನಾಡಿದರು. ಇದಕ್ಕೆ ಕಾರಣವೇನು? ಶೂದ್ರರ ಹೋರಾಟ! ಅದನ್ನು ವರ್ಗ ಹೋರಾಟವೆಂದು ಕರೆದರೆ ಯಾರೂ ಕಸಿವಿಸಿಗೊಳ್ಳಬೇಕಾಗಿಲ್ಲ. ಮಾನವನ ಆಸೆ-ಆಕಾಂಕ್ಷೆ, ಅವನ ಪ್ರಜ್ಞಾಪೂರ್ವಕ ಹೋರಾಟ, ಇವು ಸಮಾಜವನ್ನು ರೂಪಿಸಿವೆ. ಮುಂದೆಯೂ ರೂಪಿಸುತ್ತವೆ. ಮಾರ್ಕ್ಸ್‌ನ ಸ್ನೇಹಿತನಾಗಿದ್ದ ವಿಲ್ಹೆಲ್ಮ್ ಲೀಬ್‌ನೆಖ್ಟ್ ತನ್ನೊಂದು ಪುಸ್ತಿಕೆಯಲ್ಲಿ ಹೇಳಿದ: “ಸಂಗಾತಿಗಳೆ, ಆಸೆಪಡುವುದನ್ನು ಕಲಿಯಿರಿ; ವಿಮೋಚನೆಗೊಳ್ಳುವ ಆಸೆ ಅದ್ಭುತವಾದುದು.”

ಮಾರ್ಕ್ಸ್‌ನ ೧೮೭ನೆಯ ಜನ್ಮದಿನದಂದು ಇದನ್ನು ಗಂಭೀರವಾಗಿ ಮೆಲುಕು ಹಾಕುವುದು ಆರೋಗ್ಯಕರ.

*ಈ ತಿಂಗಳು.... ೩ನೇ ಪುಟದಿಂದ*

ಪೋಪನ ಶವಸಂಸ್ಕಾರಕ್ಕೆ ಇರಾನಿನ ಅಧ್ಯಕ್ಷ ಉಪಸ್ಥಿತನಿದ್ದುದು ಜಾರ್ಜ್ ಬುಷ್‌ಗೆ ಅಸಮಾಧಾನ ತಂದಿತಂತೆ. ಇದಲ್ಲವೇ ದೊಣೆನಾಯಕನ ಅಪ್ಪಣೆ! ಧಾರ್ಮಿಕ ಜಡ್ಡುತನವನ್ನು ದೂರೀಕರಿಸುವುದಕ್ಕೆ ಇದೊಂದು ಒಳ್ಳೆಯ ಬೆಳವಣಿಗೆಯೆಂದು ಆತನನ್ನು ಸ್ವಾಗತಿಸಬೇಕಾಗಿತ್ತು. ಅಲ್ಲಿ ಇನ್ನೊಂದು ಸ್ವಾರಸ್ಯವಿತ್ತು; ಇರಾನಿನ ಅಧ್ಯಕ್ಷನು ಇಸ್ರೇಲಿನ ಪ್ರತಿನಿಧಿಯ ಕೈ ಕುಲುಕಿದನೆಂಬ ಆಪಾದನೆ ಬಂದಿತ್ತು. ನಮ್ಮ ಪ್ರಪಂಚದ ರಾಜಕಾರಣ ಎಷ್ಟು ಶೋಭಾಯಮಾನವಾಗಿದೆಯಲ್ಲವೇ? ಪಾಕಿಸ್ತಾನದ ಅಧ್ಯಕ್ಷರಿಗೆ ಹಸ್ತಲಾಘವ ನೀಡಿದ ನಮ್ಮ ಪ್ರಧಾನಿ, ವಿರೋಧ ಪಕ್ಷದ ನಾಯಕ ಅಡ್ವಾನಿ, ಮುಂತಾದವರ ಮೇಲೆ ಇಂತಹ ಆಪಾದನೆ ಮಾಡದಷ್ಟಾದರೂ ಸುಸಂಸ್ಕೃತರಾದರೆ ಸ್ವಲ್ಪ ಸಮಾಧಾನ ಪಡಬೇಕಾದ್ದೆ. ಆದರೆ ಬಾಳ ಠಾಕ್ರೆಯ ಶಿಷ್ಯರು ಅದರಲ್ಲೂ ಸ್ವಲ್ಪ ಹುಳಿ ಹಿಂಡುವ ಕೆಲಸ ಮಾಡಿದ್ದಾರೆ. ಭಾರತ-ಪಾಕಿಸ್ತಾನಗಳಲ್ಲಿ ಸ್ವಲ್ಪ ಬೆಳಕು ಹರಿಯುವ ಸೂಚನೆ ಇದೆ, ಅದು ಅತ್ಯಂತ ಸ್ವಾಗತಾರ್ಹವಾದದ್ದು.

ಸಂಸ್ಕೃತಿಯ ವಕ್ತಾರರಲ್ಲಿ ಅಗ್ರೇಸರ ತಾನೆಂದು ಸ್ವಯಂ ಪಟ್ಟ ಕಟ್ಟಿಕೊಂಡಿರುವ ಮಾನ್ಯ ಸುದರ್ಶನ್ ಅವರು ಉಮಾ ಭಾರತಿಯವರ ಕುಟುಂಬದ ಹಿನ್ನೆಲೆ ಬಗ್ಗೆ ಟೀಕೆ ಮಾಡಿದ್ದಾಗಿ ವರದಿಯಾಗಿದೆ. ಇದು ತೀರಾ ಕೆಳಮಟ್ಟದ ಭಾವನೆಯೆಂಬುದು ಸ್ಪಷ್ಟ. ಉಮಾ ಅವರ ಸೋದರ ಕನ್ನಯ ಲಾಲ ಪ್ರತಿಕ್ರಿಯಿಸಿದ್ದು ಹೀಗೆ: “ನನಗೆ ಎಪ್ಪತ್ತು ವರ್ಷ ಮತ್ತು ನಾನು ಮೊದಲಿನಿಂದಲೂ ಕಮ್ಯುನಿಸ್ಟ್ ಆಗಿ ಉಳಿದಿದ್ದೇನೆ. ಸುದರ್ಶನ್ ನನಗೆ ಅರ್ಹತಾ ಪತ್ರ ಕೊಡಬೇಕಾಗಿಲ್ಲ. ಅವರು ಯಥಾಪ್ರಕಾರ ಶ್ರೇಣೀಕೃತ ಸಮಾಜದ ಕುತ್ಸಿತ ಬ್ರಾಹ್ಮಣನಂತೆ ಕೆಟ್ಟ ಸಂಪ್ರದಾಯವನ್ನು ಮತ್ತೆ ಎತ್ತಿ ಹಿಡಿದಿದ್ದಾರೆ. ನಾನದನ್ನು ಸಂಪೂರ್ಣವಾಗಿ ವಿರೋಧಿಸುತ್ತೇನೆ.” ಉಮಾ ಭಾರತಿಯ ಅಣ್ಣ ಏನಾದರೇನು ಸುದರ್ಶನ ಮಹಾಶಯನಿಗೆ? ಅದರಿಂದ ಉಮಾ ಅವರನ್ನು ಅಳೆಯುವುದಾದರೆ ಸುದರ್ಶನ್ ಅವರ ಸಾಂಸ್ಕೃತಿಕ ವ್ಯಕ್ತಿತ್ವದ ಬಗ್ಗೆ ಏನು ಹೇಳೋಣ! ಉಮಾ ಅವರ ಪ್ರತಿಭೆಯು ಅವರ ಅಣ್ಣನ ರಾಜಕೀಯದಿಂದಾಗಿ ಬಣ್ಣ ಪಡೆಯುತ್ತದೇನು?

# ಅಮೆರಿಕದ ಬಂಡವಾಳಶಾಹಿ ಮಡಿಲಿನಿಂದ ಸಿಡಿದ ಸಂಘರ್ಷದ ಕಿಡಿ

> ಬಂಡವಾಳಶಾಹಿ ವ್ಯವಸ್ಥೆಯ ಬೆಳವಣಿಗೆಯ ಜೊತೆ ಜೊತೆಗೇ ಹುಟ್ಟಿಬಂದ ಕಾರ್ಮಿಕ ವರ್ಗ ಹಲವಾರು ಅಮೋಘ ಹಾಗೂ ನಿರ್ಣಾಯಕ ಹೋರಾಟಗಳ ಮೂಲಕ ಚರಿತ್ರೆಯ ಪುಟಗಳನ್ನು ತುಂಬಿದೆ. ೧೮೪೮ರಲ್ಲಿ ಘೋಷಿಸಿದ್ದ ಕಮ್ಯುನಿಸ್ಟ್ ಪ್ರಣಾಳಿಕೆ ಕಾರ್ಮಿಕ ವರ್ಗಕ್ಕೆ ಹೊಸ ಚಿಂತನೆ, ಹೊಸ ಚಾಲನೆ, ಹೊಸ ಸ್ಫೂರ್ತಿ ಕೊಟ್ಟಿದ್ದಕ್ಕೆ ನಂತರದ ಪ್ಯಾರಿಸ್ ಕ್ರಾಂತಿ (೧೮೭೦) ಮತ್ತು ರಷ್ಯಾ ಕ್ರಾಂತಿ (೧೯೧೭) ನಿದರ್ಶನಗಳು. ಈ ಚಿಂತನೆಗಳು ದೇಶ-ದೇಶಗಳಿಗೆ ಹರಡಿ ಅಮೆರಿಕದ ಬಂಡವಾಳಶಾಹಿ ವ್ಯವಸ್ಥೆಯನ್ನು ಕೆಣಕಿದ್ದು, ತಲ್ಲಣಿಸಿದ್ದು ಇತಿಹಾಸದಲ್ಲಿ ಒಂದು ಅವಿಸ್ಮರಣೀಯ ಘಟನೆಯಾಗಿದೆ.

**ಮುರಳೀಧರ್**

**ಬಂ**ಡವಾಳಶಾಹಿ ವ್ಯವಸ್ಥೆಯ ಬೆಳವಣಿಗೆಯ ಜೊತೆ ಜೊತೆಗೇ ಹುಟ್ಟಿಬಂದ ಕಾರ್ಮಿಕ ವರ್ಗ ಹಲವಾರು ಅಮೋಘ ಹಾಗೂ ನಿರ್ಣಾಯಕ ಹೋರಾಟಗಳ ಮೂಲಕ ಚರಿತ್ರೆಯ ಪುಟಗಳನ್ನು ತುಂಬಿದೆ. ೧೮೪೮ರಲ್ಲಿ ಘೋಷಿಸಿದ್ದ ಕಮ್ಯುನಿಸ್ಟ್ ಪ್ರಣಾಳಿಕೆ ಕಾರ್ಮಿಕ ವರ್ಗಕ್ಕೆ ಹೊಸ ಚಿಂತನೆ, ಹೊಸ ಚಾಲನೆ, ಹೊಸ ಸ್ಫೂರ್ತಿ ಕೊಟ್ಟಿದ್ದಕ್ಕೆ ನಂತರದ ಪ್ಯಾರಿಸ್ ಕ್ರಾಂತಿ (೧೮೭೦) ಮತ್ತು ರಷ್ಯಾ ಕ್ರಾಂತಿ (೧೯೧೭) ನಿದರ್ಶನಗಳು. ಈ ಚಿಂತನೆಗಳು ದೇಶ-ದೇಶಗಳಿಗೆ ಹರಡಿ ಅಮೆರಿಕದ ಬಂಡವಾಳಶಾಹಿ ವ್ಯವಸ್ಥೆಯನ್ನು ಕೆಣಕಿದ್ದು, ತಲ್ಲಣಿಸಿದ್ದು ಇತಿಹಾಸದಲ್ಲಿ ಒಂದು ಅವಿಸ್ಮರಣೀಯ ಘಟನೆಯಾಗಿದೆ.

ಕೈಗಾರಿಕೀಕರಣ ಅಮೆರಿಕವನ್ನು ೧೮೮೦ರ ಹೊತ್ತಿಗೆ ಬಂಡವಾಳಶಾಹಿ ವ್ಯವಸ್ಥೆಯ ಅಗ್ರಮಾನ್ಯ ರಾಷ್ಟ್ರವನ್ನಾಗಿಸಿತ್ತು. ಹಾಗೆಯೇ ಸಾಮಾಜಿಕ ಬಿಕ್ಕಟ್ಟುಗಳು ತೀವ್ರ ಸ್ವರೂಪ ತಾಳಿ ಸಾಮಾಜಿಕ ಸಂಘರ್ಷಗಳಿಗೆ ಅಣಿ ಮಾಡಿಕೊಟ್ಟ ಕಾಲಘಟ್ಟ ಕೂಡ. ೧೬ ಗಂಟೆ ಕೆಲಸದ ಅವಧಿ ಸರ್ವೇಸಾಮಾನ್ಯವಾಗಿತ್ತು. ಕಾರ್ಮಿಕರ ಶೋಷಣೆ-ಬವಣೆ ಎಲ್ಲೆ ಮೀರಿತ್ತು. ೧೮೮೧ರಲ್ಲಿ ಹುಟ್ಟಿದ ಕಾರ್ಮಿಕ ಸಂಘಟನೆಗಳು, ೧೮೮೬ರಲ್ಲಿ ಅಮೆರಿಕನ್ ಫೆಡರೇಶನ್ ಆಫ್ ಲೇಬರ್ ಅಡಿಯಲ್ಲಿ ಒಂದುಗೂಡಿ ಹೋರಾಟದ ಹೊಸ ಅಧ್ಯಾಯಕ್ಕೆ ನಾಂದಿಯಾದವು. ದಿನಕ್ಕೆ ಎಂಟು ಗಂಟೆ ದುಡಿಮೆಯ ಘೋಷಣೆ ಮೊಳಗಿತು. ಸಂಧಾನ-ಮಾತುಕತೆಯ ಮೂಲಕ ಬೇಡಿಕೆ ಈಡೇರದಿದ್ದಲ್ಲಿ ಮೇ ೧, ೧೮೮೬ರಂದು ಸಾರ್ವತ್ರಿಕ ಮುಷ್ಕರದ ತೀರ್ಮಾನ ಕೈಗೊಳ್ಳಲಾಯಿತು. ಮುಷ್ಕರವನ್ನು ಹತ್ತಿಕ್ಕಲು ಉದ್ದೇಶಿಸಿದ್ದ ಉಗ್ರ ಬಂಡವಾಳಶಾಹಿಗಳ ಯೋಜನೆಗಳು ಮತ್ತು ಪ್ರಯತ್ನಗಳು ತೀವ್ರಗೊಂಡಿದ್ದವು. ಸರಕಾರವು ಪೊಲೀಸ್ ಮತ್ತು ರಾಷ್ಟ್ರೀಯ ಭದ್ರತಾ ಸೇನೆಯನ್ನು ಸಜ್ಜುಗೊಳಿಸಿತು. ಬಂಡವಾಳಶಾಹಿ ಮಾಧ್ಯಮಗಳು ಕಾರ್ಮಿಕ ಸಂಘಟನೆಗಳನ್ನು ಮತ್ತು ಕಾರ್ಮಿಕ ನಾಯಕರನ್ನು ದೇಶದ್ರೋಹಿಗಳೆಂದು ಜರೆದು ಪ್ರಚಾರ ಮಾಡಿದವು. ಮುಷ್ಕರದಲ್ಲಿ ಭಾಗವಹಿಸಿದ ಕಾರ್ಮಿಕರನ್ನು ವಜಾ ಮಾಡುವುದಾಗಿ ಮಾಲೀಕರು ಬೆದರಿಕೆ ಹಾಕಿದರು. ಮುಷ್ಕರವನ್ನು ಸಂಘಟಿಸಿದ ಕಾರ್ಮಿಕ ನಾಯಕರಾದ ಆಲ್ಬರ್ಟ್ ಪಾರ್ಸನ್ಸ್ ಮತ್ತು ಅಗಸ್ಟ್ ಸ್ಪೈಸ್ ಇಬ್ಬರನ್ನೂ ಬಂಧಿಸಬೇಕೆಂದು ಮಾಲೀಕರು ಒತ್ತಾಯ ತಂದರು. ಯಾವುದಕ್ಕೂ ಬಾಗದ ಅಮೆರಿಕದ ಕಾರ್ಮಿಕರು ಸಹಸ್ರಾರು ಸಂಖ್ಯೆಯಲ್ಲಿ ಮೇ ದಿನದ ಮುಷ್ಕರದಲ್ಲಿ ಭಾಗವಹಿಸಿದರು. ಶಿಕಾಗೊ ನಗರ ಪೊಲೀಸ್ ಮತ್ತು ಭದ್ರತಾ ಸೈನಿಕರಿಂದ ತುಂಬಿದ್ದರೂ, ಕಾರ್ಮಿಕರು ಮುಷ್ಕರವನ್ನು ಶಾಂತಿಯುತವಾಗಿ ಆಚರಿಸಿ ಯಶಸ್ವಿಗೊಳಿಸಿದರು.

ಮೇ ದಿನ ಅಮೆರಿಕದ ಕಾರ್ಮಿಕರು ತಮ್ಮ ಐಕ್ಯತೆಯನ್ನು, ಅಗಾಧ ಶಕ್ತಿಯನ್ನು ಪ್ರದರ್ಶಿಸಿದ ದಿನ, ಶೋಷಣೆಯ ವಿರುದ್ಧ ಸಿಡಿದೆದ್ದ ದಿನ, ವರ್ಗ ಸಂಘರ್ಷಕ್ಕೆ ಕಹಳೆಯೂದಿದ ದಿನ, ಬಂಡವಾಳಶಾಹಿಗಳನ್ನು ಕಂಗೆಡಿಸಿದ ದಿನ. ಸುಮಾರು ಐದು ಲಕ್ಷ ಕಾರ್ಮಿಕರು ಮುಷ್ಕರದಲ್ಲಿ ಭಾಗವಹಿಸಿದ್ದರು. ಇದರಿಂದಾಗಿ ಕಾರ್ಮಿಕ ಸಂಘಟನೆಗಳು ಸಮಾಜದ ಪರ್ಯಾಯ ಶಕ್ತಿಕೇಂದ್ರವಾಗುವ ಸಂದರ್ಭ ಮೂಡಿ ಬಂದಿತು. ಕಾರ್ಮಿಕರಲ್ಲಿ ಹೊಸ ಚೈತನ್ಯ ಮೂಡಿತು. ಕಂಗೆಟ್ಟ ಬಂಡವಾಳಶಾಹಿಗಳು ಕಾರ್ಮಿಕ ಸಂಘಟನೆಗಳ ಮೇಲೆ ದಾಳಿ ನಡೆಸಲು ತೀರ್ಮಾನಿಸಿದರು. ೧೮೮೬, ಮೇ ೩ರಂದು ಶಿಕಾಗೊನ ಉದ್ಯೋಗಪತಿಗಳು ಸಹಸ್ರಾರು ಕಾರ್ಮಿಕರನ್ನು ಮೇ ೧ರ ಮುಷ್ಕರದಲ್ಲಿ ಭಾಗವಹಿಸಿದರೆಂಬ ಕಾರಣವೊಡ್ಡಿ ಕೆಲಸದಿಂದ ವಜಾ ಮಾಡಿದರು. ಇದನ್ನು ಪ್ರತಿಭಟಿಸಿದ ಶಿಕಾಗೊ ಕಾರ್ಮಿಕರ ಮೇಲೆ ಪೊಲೀಸರು ಗುಂಡು ಹಾರಿಸಿದ ಪರಿಣಾಮವಾಗಿ ನಾಲ್ಕು ಜನ ಮೃತರಾದರು. ಮರುದಿನ ಮತ್ತೆ ಜರುಗಿದ ಪೊಲೀಸ್ ದಾಳಿಯಲ್ಲಿ ಐದು ಜನ ಕಾರ್ಮಿಕರು ಮೃತರಾದರು. ನೂರಾರು ಕಾರ್ಮಿಕರು ಗಾಯಗೊಂಡರು. ನಂತರ ಕ್ರಿಮಿನಲ್ ಮೊಕದ್ದಮೆ ಹೂಡಿ, ೧೮೮೭ರಲ್ಲಿ ಆಲ್ಬರ್ಟ್ ಪಾರ್ಸನ್ಸ್, ಸ್ಪೈಸ್ ಹಾಗೂ ಮತ್ತಿಬ್ಬರು ಕಾರ್ಮಿಕ ನಾಯಕರನ್ನು ಗಲ್ಲಿಗೇರಿಸಲಾಯಿತು.

ಈ ಘಟನೆಗಳೊಂದಿಗೆ ಮೇ ೧, ೧೮೮೬ ಒಂದು ದೇಶದಲ್ಲಿ ನಡೆದ ಬೃಹತ್ ಕಾರ್ಮಿಕ ಹೋರಾಟದ ದಿನವಾಗಿ ಚರಿತ್ರೆಯಲ್ಲಿ ದಾಖಲಾಯಿತು. ಅಮೆರಿಕದ ಕಾರ್ಮಿಕರ ಈ ಹೋರಾಟವನ್ನು ಇತರೆ ದೇಶದ ಕಾರ್ಮಿಕರು ಬೆಂಬಲಿಸಿದರು. ಎಂಟು ಗಂಟೆ ದುಡಿಮೆ ಇಡೀ ವಿಶ್ವ ಕಾರ್ಮಿಕರ ಬೇಡಿಕೆಯಾಯಿತು. ಮೇ ದಿನವನ್ನು ಅಂತರರಾಷ್ಟ್ರೀಯ ಕಾರ್ಮಿಕ ದಿನ ಎಂಬುದಾಗಿ ಗುರುತಿಸಲಾಯಿತು. ಶಿಕಾಗೊನ ಕಾರ್ಮಿಕರು ಜಗತ್ತಿನ ಕಾರ್ಮಿಕರಿಗೆ ಮಾದರಿಯಾದರು. ನಂತರದ ಎಲ್ಲ ಹೋರಾಟಗಳಿಗೆ ಸ್ಫೂರ್ತಿಯ ಸೆಲೆಯಾದರು.

ಭಾರತದಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಆಡಳಿತ ಕೊನೆಗೊಂಡು, ನೇರ ಬ್ರಿಟಿಷ್ ಆಳ್ವಿಕೆ ಆರಂಭವಾದ ನಂತರ ಕೈಗಾರಿಕೀಕರಣದ ಪ್ರಕ್ರಿಯೆ ತೀವ್ರವಾಯಿತು. ಸೆಣಬು, ಹತ್ತಿ ಗಿರಣಿಗಳು, ಕಲ್ಲಿದ್ದಲು ಗಣಿಗಳು, ರೈಲು ಮತ್ತು ಹಡಗು ಸಂಚಾರ ವ್ಯವಸ್ಥೆ ಹೊಸಕಾರ್ಮಿಕ ವರ್ಗವನ್ನು ಸೃಷ್ಟಿಸಿತು. ಕಾರ್ಮಿಕರ ಶೋಷಣೆಯಲ್ಲಿ ಬ್ರಿಟಿಷ್ ಮತ್ತು ಭಾರತದ ಬಂಡವಾಳಶಾಹಿಗಳು ಸಮ ಪಾಲುದಾರರಾದರು. ೧೯೦೮ರಲ್ಲಿ ರಚಿಸಿದ ಇಂಡಿಯನ್ ಫ್ಯಾಕ್ಟರಿ ಲೇಬರ್ ಕಮಿಷನ್ ಪ್ರಕಾರ ಕಾರ್ಖಾನೆಗಳಲ್ಲಿ ದುಡಿಮೆಯ ಅವಧಿ ಗಂಡಸರಿಗೆ ೧೬-೨೦ ಗಂಟೆಗಳು, ಹೆಂಗಸರಿಗೆ ೧೪-೧೬ ಗಂಟೆಗಳು ಮತ್ತು ಬಾಲ ಕಾರ್ಮಿಕರಿಗೆ ೧೦ರಿಂದ ೧೪ ಗಂಟೆಗಳು ಎಂದು ನಿಗದಿ ಮಾಡಿದ್ದ ಕಾಲವದು. ಮಹಿಳಾ ಕಾರ್ಮಿಕರಂತೂ ಸಮಯದ ಮಿತಿಯಿಲ್ಲದೆ ಬೆಳಗಿನ ಜಾವ ೩ಗಂಟೆಗೆ ಕಾರ್ಖಾನೆಗೆ ಹೋಗಿ ಸೈರನ್ ಕೂಗುವವರೆಗೂ ಹೊರಗೆ ಕಾಯುತ್ತಿದ್ದರು ಎಂದು ಲೇಬರ್ ಕಮಿಷನ್ ವರದಿಯಲ್ಲಿ ತಿಳಿಸಲಾಗಿದೆ. ಇಂಥ ಪರಿಸ್ಥಿತಿಯಲ್ಲಿ ಭಾರತದಲ್ಲಿ ಬಂಡವಾಳ ಹೂಡಿದ ಬ್ರಿಟಿಷ್ ಕಂಪನಿಗಳು ಹೇರಳ ಲಾಭ ಗಳಿಸಿದವು.

ಶೋಷಣೆ ತೀವ್ರವಾದಂತೆ, ಪ್ರತಿಭಟನೆ ಹುಟ್ಟುವುದು ಸಹಜ. ಗಿರಣಿ ಕಾರ್ಮಿಕರು,

ಕಲ್ಲಿದ್ದಲು ಗಣಿ ಕಾರ್ಮಿಕರು, ರೈಲ್ವೆ ಕಾರ್ಮಿಕರು ಸಂಘಟಿತರಾದರು. ವಿಶೇಷವೆಂದರೆ, ೧೮೬೨ರ ಹೊತ್ತಿಗೇ ರೈಲ್ವೆ ಕಾರ್ಮಿಕರು ಎಂಟು ಗಂಟೆ ಕೆಲಸದ ಅವಧಿಯ ಬೇಡಿಕೆಯಿಟ್ಟು ತಮ್ಮ ಹೋರಾಟದ ಪ್ರಜ್ಞೆಯ ಸೂಚನೆ ಕೊಟ್ಟಿದ್ದರು. ೧೯೦೮ರಲ್ಲಿ ಬ್ರಿಟಿಷ್ ಸರ್ಕಾರ ಬಾಲಗಂಗಾಧರ ತಿಲಕ್‌ರನ್ನು ಬಂಧಿಸಿದಾಗ ಮುಂಬೈನ ಗಿರಣಿ ಕಾರ್ಮಿಕರು ಆರು ದಿನ ಮುಷ್ಕರ ನಡೆಸಿ, ತಮ್ಮ ರಾಜಕೀಯ ಪ್ರಜ್ಞೆಯನ್ನು ಮೆರೆದರು. ತಮ್ಮೆಲ್ಲ ಹೋರಾಟಗಳನ್ನು ಕ್ರೋಢೀಕರಿಸಿ, ಬ್ರಿಟಿಷ್ ಆಳ್ವಿಕೆಯನು ಕೊನೆಗೊಳಿಸಲು ೧೯೨೦ರಲಿ ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್ಸನ್ನು ಸ್ಥಾಪಿಸಿದರು. ಈ ಕೇಂದ್ರ ಸಂಘಟನೆಯಡಿಯಲ್ಲಿ ನಡೆಸಿದ ಅವಿರತ ಹೋರಾಟಗಳ ಪರಿಣಾಮವಾಗಿ ಫ್ಯಾಕ್ಟರಿ ಕಾನೂನು ಪರಿಷ್ಕರಣಗೊಂಡು ದಿನಕ್ಕೆ ಎಂಟು ಗಂಟೆಗಳ ಕೆಲಸ ನಿಗದಿತವಾಯಿತು.




ಅಮೆರಿಕ, ಯೂರೋಪ್, ಇಂಗ್ಲೆಂಡ್, ಭಾರತ, ಆಫ್ರಿಕಾ ಮತ್ತಿತರ ರಾಷ್ಟ್ರಗಳ ಬಂಡವಾಳಶಾಹಿಗಳ ಶೋಷಣೆಯ ವಿಧಾನಗಳು ಒಂದೇ ರೀತಿಯವು ಎಂಬುದು ಅಲ್ಲಿಯ ಘಟನೆಗಳಿಂದ ತಿಳಿದುಬರುತ್ತದೆ. ಎಂಟು ಗಂಟೆಗಳ ದುಡಿಮೆ ಅವಧಿಯ ಬೇಡಿಕೆ ಕೂಡ ಎಲ್ಲ ದೇಶದ ಕಾರ್ಮಿಕರನ್ನು ಒಂದುಗೂಡಿಸಿದ್ದು ಈ ಕಾರಣದಿಂದಲೇ ಎಂಬುದೂ ಅರಿವಾಗುತ್ತದೆ. ಎಲ್ಲ ಬಂಡವಾಳಶಾಹಿ ರಾಷ್ಟ್ರಗಳನ್ನೂ ಕಾಡುತ್ತಿರುವ ಬಡತನ, ನಿರುದ್ಯೋಗ, ಶೋಷಣೆ ಅಂತರರಾಷ್ಟ್ರೀಯ ಹೋರಾಟದಿಂದ ಮಾತ್ರ ಅಳಿಸಿಹಾಕಲು ಸಾಧ್ಯ.

ಈ ಹಿನ್ನೆಲೆಯಲ್ಲಿ ಬಂಡವಾಳಶಾಹಿಯ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಪ್ರಕ್ರಿಯೆ ಕಾರ್ಮಿಕ ವರ್ಗದ ಮೇಲೆ ಉಂಟುಮಾಡುತ್ತಿರುವ ಪರಿಣಾಮಗಳೇನು, ಅದನ್ನೆದುರಿಸುವ ಪ್ರಜ್ಞೆ ಮತ್ತು ಸಾಮರ್ಥ್ಯವನ್ನು ಈ ವರ್ಗ ತೋರಿಸುತ್ತಿದೆಯೇ ಎಂಬೆಲ್ಲ ಪ್ರಶ್ನೆಗಳು ಎದುರಾಗುತ್ತವೆ. ವಿಶ್ವವ್ಯಾಪಾರಿ ಸಂಸ್ಥೆ, ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ, ಅವುಗಳ ಹೆಸರೇ ಸೂಚಿಸುವಂತೆ ಪ್ರಪಂಚದ ಹಣಕಾಸು ವ್ಯಾಪಾರಗಳನ್ನು ನಿಯಂತ್ರಿಸುವ ಬಂಡವಾಳಶಾಹಿ ವ್ಯವಸ್ಥೆ. ಇವುಗಳ ಜಾಲಕ್ಕೆ ಸಿಲುಕದ ರಾಷ್ಟ್ರಗಳು ವಿರಳ. ಸಮಾಜವಾದಿ ಕ್ಯೂಬ ಇದಕ್ಕೆ ಹೊರತು. ಮುಕ್ತ ಮಾರುಕಟ್ಟೆ, ಪೈಪೋಟಿ, ಬಂಡವಾಳ ಹೂಡಲು ಹಿಂತೆಗೆಯಲು ಅನಿರ್ಬಂಧಿತ ಸ್ವಾತಂತ್ರ್ಯ, ಎಲ್ಲ ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳ ಖಾಸಗೀಕರಣ ಈ ಹೊಸ ಆರ್ಥಿಕ ನೀತಿಯ ಮೂಲಮಂತ್ರಗಳು. ಎಲ್ಲವೂ ಅಮೆರಿಕನ್ ಬಂಡವಾಳಶಾಹಿಗಳ ಹಿತಾಸಕ್ತಿಗಳಿಗನುಗುಣವಾಗಿ ಬದಲಾಗಬೇಕು. ಇದನ್ನು ವಿರೋಧಿಸುವ ಕ್ಯೂಬಾದ ಫಿಡೆಲ್ ಕ್ಯಾಸ್ಟ್ರೊ, ವೆನಿಜೂಲದ ಶಾವೇಜ್‌ಗೆ ಭಯೋತ್ಪಾದಕರೆಂಬ ಪಟ್ಟ ಕಟ್ಟಿ ಅವರ ಮೇಲೆ ದಾಳಿ ನಡೆಸುವ ತಯಾರಿ. ಇರಾಕ್‌ನ ಸದ್ದಾಂ ಹುಸೇನ್ ಸಮೂಹ ವಿನಾಶದ ಶಸ್ತ್ರಾಸ್ತ್ರಗಳನ್ನು ಹೊಂದಿದ್ದಾನೆಂದು ಅಮೆರಿಕ ಹೇಳಿದರೆ, ಬೇರೆಲ್ಲ ರಾಷ್ಟ್ರಗಳು ಅದಕ್ಕೆ ತಾಳ ಹಾಕಲೇಬೇಕು. ಇರಾಕ್ ಮೇಲೆ ಯುದ್ಧ ಮಾಡಿದರೆ ಬೇರೆಲ್ಲ ರಾಷ್ಟ್ರಗಳೂ ಬೆಂಬಲಿಸಲೇಬೇಕು. ಕ್ಯೂಬಾದ ಮೇಲೆ ಆರ್ಥಿಕ ದಿಗ್ಬಂಧನ ಹಾಕಿದರೆ, ಬೇರೆಲ್ಲ ರಾಷ್ಟ್ರಗಳೂ ಅದನ್ನು ಪರಿಪಾಲಿಸಲೇಬೇಕು. ಅಮೆರಿಕ ಸಾಮ್ರಾಜ್ಯಶಾಹಿಯ ವಂದಿಮಾಗಧರಾಗುವುದು, ಅದರ ಬಾಲಬಡುಕರಾಗುವುದೇ ಆಯಾ ರಾಷ್ಟ್ರಗಳ 'ಸಾರ್ವಭೌಮತೆ'ಯ ಸಂಕೇತ! ಆದರೆ ಈ ಎಲ್ಲ ದಮನಕಾರಿ ಕೆಲಸಕ್ಕೆ ಹಚ್ಚುವ ಪ್ರಜಾಪ್ರಭುತ್ವದ ಲೇಪ ಒಂದು ವಿಪರ್ಯಾಸ.

ಅಮೆರಿಕ ಆದೇಶದ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣವನ್ನು ಯಾವುದೇ ರಾಷ್ಟ್ರ ವಿರೋಧಿಸುವುದೇ ಒಂದು ಘೋರ ಅಪರಾಧವೆಂದು ನಿರ್ಣಯಿಸುವ ಇಂದಿನ ಸಂದರ್ಭದಲ್ಲಿ ಈ ಪ್ರಕ್ರಿಯೆಗಳ ವಿರುದ್ಧ ಪ್ರತಿಭಟಿಸುತ್ತಿರುವ ಕಾರ್ಮಿಕ ಸಂಘಟನೆಗಳು ಇವರ ಲೆಕ್ಕದಲ್ಲಿ ದೇಶದ್ರೋಹಿಗಳೆ ಸರಿ! ಭಾರತದಲ್ಲಾದದ್ದು ಇದೇ. ೧೯೯೦ರ ಸಮಯದಲ್ಲಿ ಕೇಂದ್ರದಲ್ಲಿ ಅಧಿಕಾರಾರೂಢ ಕಾಂಗ್ರೆಸ್ ಪಕ್ಷ ಹೊಸ ಆರ್ಥಿಕ ನೀತಿಯ ಹೆಸರಿನಲ್ಲಿ ಜಾರಿಗೊಳಿಸಿದ ಉದಾರೀಕರಣ, ಜಾಗತೀಕರಣ ಹಾಗೂ ಖಾಸಗೀಕರಣ ಪ್ರಕ್ರಿಯೆಗಳನ್ನು ಈ ದೇಶದ ಎಡ ಪಕ್ಷಗಳು ಮತ್ತು ಪ್ರಗತಿಶೀಲ ಕಾರ್ಮಿಕ ಸಂಘಟನೆಗಳು ಅತ್ಯಂತ ಪ್ರಬಲವಾಗಿ ವಿರೋಧಿಸಿದಾಗ ಅವುಗಳಿಗೆ ಸಿಕ್ಕ ಬೆಂಬಲ ಅತ್ಯಲ್ಪ. ಹೊಸ ಆರ್ಥಿಕ ನೀತಿಗಳು ಸಮಾಜದಲ್ಲಿ ಹಾಲು-ಜೇನಿನ ಹೊಳೆಯನ್ನೇ ಹರಿಸಲಿದೆ ಎಂದು ನಂಬಿದ ಜನರ ಸಂಖ್ಯೆಯೇ ಹೆಚ್ಚು. ಶ್ರೀಮಂತರ ಕೈಯಲ್ಲಿರುವ ಪ್ರಚಾರ ಮಾಧ್ಯಮ ಜಾಗತೀಕರಣದ ಗುಣಗಾನ ನಡೆಸುತ್ತಾ ಒಂದು ಭ್ರಮಾಲೋಕವನ್ನೇ ಸೃಷ್ಟಿಸಿತು. ಕಾರ್ಮಿಕ ಸಂಘಟನೆಗಳನ್ನು ಪ್ರಗತಿ ವಿರೋಧಿಗಳೆಂದು ಹೀಗಳೆಯ ಲಾಯಿತು. ಕಾರ್ಮಿಕ ಸಂಘಟನೆಗಳೇ ಅನಗತ್ಯವೆಂದು ಪ್ರಚಾರ ಮಾಡಲಾಯಿತು. ಕಾರ್ಮಿಕ ಕಾನೂನುಗಳು ಜಾಗತೀಕರಣದ ಪ್ರಕ್ರಿಯೆಗೆ ಅನುಕೂಲವಾಗುವ ರೀತಿಯಲ್ಲಿ ಆಮೂಲಾಗ್ರ ಮಾರ್ಪಾಡಾಗಬೇಕೆಂದು ಸರಕಾರದ ಮೇಲೆ ಒತ್ತಡ ಹೇರಲಾಯಿತು. ರೈತರಿಗೆ ಗೊಬ್ಬರ, ಬೀಜ, ವಿದ್ಯುಚ್ಛಕ್ತಿಗಳನ್ನು ರಿಯಾಯಿತಿಯಲ್ಲಿ ಕೊಡಕೂಡದೆಂದು ಆದೇಶಿಸಲಾಯಿತು.

ಕಾರ್ಮಿಕ ಕಾಯಿದೆಗಳನ್ನು ಬದಲಾವಣೆ ಮಾಡುವ ಸಲುವಾಗಿಯೆ ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗವನ್ನು ರಚಿಸಿ, ಉದ್ಯೋಗಪತಿಗಳ ಬೇಡಿಕೆಗನುಗುಣವಾದ ಶಿಫಾರಸ್ಸುಗಳನ್ನು ಪಡೆಯಲಾಯಿತು. ಸಂವಿಧಾನವನ್ನು ತಿರುಚುವ ಪ್ರಯತ್ನ ನಡೆಯಿತು. ವಾಜಪೇಯಿ ಸರ್ಕಾರ ಕಾಂಗ್ರೆಸ್ಸನ್ನು ನಾಚಿಸುವ ರೀತಿಯಲ್ಲಿ ಶ್ರೀಮಂತರ ಪರವಾಗಿ ನಿಂತಿತು. ಕಾರ್ಖಾನೆಗಳ ಮುಚ್ಚುವಿಕೆ, ಖಾಸಗೀಕರಣ, ಬಹುರಾಷ್ಟ್ರೀಯ ಸಂಸ್ಥೆಗಳ ಆಗಮನ, ಆಧುನಿಕ ತಂತ್ರಜ್ಞಾನದ ಆಮದು ಇತ್ಯಾದಿಗಳಿಂದಾಗಿ ಲಕ್ಷಾಂತರ ಕಾರ್ಮಿಕರು ಉದ್ಯೋಗ ಕಳೆದುಕೊಂಡರು. ಹೊಸ ಉದ್ಯೋಗ ಸೃಷ್ಟಿಯಾಗದೆ ಯುವಜನತೆ ಹತಾಶರಾದರು. ರೈತರು ಆತ್ಮಹತ್ಯೆಗೆ ಮೊರೆಹೋದರು.

ಸುಮಾರು ಹದಿನೈದು ವರ್ಷಗಳ ಜಾಗತೀಕರಣದ ದುಷ್ಪರಿಣಾಮ ನಿಚ್ಚಳವಾಗಿ ಕಾಣಲಾರಂಭಿಸಿತು. ಅಮೆರಿಕದ ಅಧ್ಯಕ್ಷ ಬಿಲ್ ಕ್ಲಿಂಟನ್‌ಗೆ ಆರ್ಥಿಕ ಸಲಹೆಗಾರರಾಗಿದ್ದ, ನಂತರ ವಿಶ್ವಬ್ಯಾಂಕ್‌ಗೆ ಮುಖ್ಯ ಆರ್ಥಿಕ ಸಲಹೆಗಾರರಾಗಿದ್ದ ನೊಬೆಲ್ ಪ್ರಶಸ್ತಿ ವಿಜೇತ ಜೋಸೆಫ್ ಸ್ಟಿಗ್ಲಿಟ್ಜ್ ಜಾಗತೀಕರಣ ಕೇವಲ ಅಮೆರಿಕಾದ ಹಿತಾಸಕ್ತಿಗಾಗಿದೆಯೆಂದು ಅಭಿಪ್ರಾಯಪಡುತ್ತಾ ಅಭಿವೃದ್ಧಿಶೀಲ ರಾಷ್ಟ್ರಗಳ ಮೇಲೆ ಆದ ದುಷ್ಪರಿಣಾಮಗಳ ಒಂದು ದೊಡ್ಡ ಪಟ್ಟಿ ಮಾಡಿದ್ದಾರೆ. ಮತ್ತೊಬ್ಬ ಆರ್ಥಿಕ ತಜ್ಞ ಪಾಲ್ ಸ್ಯಾಮುವೆಲ್‌ಸನ್ ಕೂಡ ಜಾಗತೀಕರಣದ ಪರಿಣಾಮಗಳ ಬಗ್ಗೆ ತಮ್ಮ ತೀವ್ರ ಸಂಶಯಗಳನ್ನು ವ್ಯಕ್ತಪಡಿಸುತ್ತಾ ಕಾರ್ಮಿಕ ಸಂಘಟನೆಗಳು ಜಾಗತೀಕರಣವನ್ನು ವಿರೋಧಿಸುತ್ತಿರುವುದಕ್ಕೆ ಕಾರಣವಿಲ್ಲದೆ ಇಲ್ಲ ಎಂದು ತಿಳಿಸಿದ್ದಾರೆ. ಪಿಲ್‌ಕೆಟ್ಟಿ - ಬ್ಯಾನರ್ಜಿ ಎಂಬ ಆರ್ಥಿಕ ಸಂಶೋಧಕರು ಹಾರ್ವರ್ಡ್ ಬಿಸಿನೆಸ್ ಸ್ಕೂಲ್‌ಗೆ ಬರೆದಿರುವ ಪ್ರಬಂಧದಲ್ಲಿ ಭಾರತದ ಶ್ರೀಮಂತರು ಸಲ್ಲಿಸಿದ ಆದಾಯ ಕರಪತ್ರಗಳನ್ನು ವಿಶ್ಲೇಷಿಸಿ, ಕಳೆದ ದಶಕದಲ್ಲಿ ಭಾರಿ ಶ್ರೀಮಂತರ ಆದಾಯ ೨೬೫ ಪಟ್ಟು ಹೆಚ್ಚಿರುವುದನ್ನು ಮತ್ತು ಮಧ್ಯಮ ಶ್ರೀಮಂತರ ಆದಾಯ ೭೦ ಪಟ್ಟು ಹೆಚ್ಚಿರುವುದನ್ನು, ಶ್ರೀಮಂತರ ಮತ್ತು ಬಡವರ ನಡುವಿನ ಕಂದಕ ಹೆಚ್ಚಿರುವುದನ್ನು ಗುರುತಿಸಿದ್ದಾರೆ. ಹೊಸ ಆರ್ಥಿಕ ನೀತಿಗಳ ವಿರುದ್ಧ ಅನೇಕ ರಾಷ್ಟ್ರಗಳಲ್ಲಿ ಪ್ರತಿಭಟನೆ ನಡೆಯುತ್ತಿದೆ. ವೆನಿಜೂವೆಲದ ಅಧ್ಯಕ್ಷ ಶಾವೇಜ್ ಮತ್ತು ಕ್ಯೂಬಾದ ಫಿಡೆಲ್ ಕ್ಯಾಸ್ಟ್ರೊ ಅಮೆರಿಕನ್ ಸಾಮ್ರಾಜ್ಯಶಾಹಿಯ ವಿರುದ್ಧ ಸೆಟೆದು ನಿಂತಿದ್ದಾರೆ. ಜಾಗತೀಕರಣದ ಅಪಸ್ವರದ ದನಿ ಹೆಚ್ಚುತ್ತಿದೆ.

೨೦೦೪ರ ಸಾರ್ವತ್ರಿಕ ಚುನಾವಣೆಯ ಫಲಿತಾಂಶವೆಂದರೆ, ಜನತೆ ವಿಶ್ವಬ್ಯಾಂಕ್, ವಿಶ್ವವ್ಯಾಪಾರಿ ಸಂಸ್ಥೆ ನಿರ್ದೇಶಿತ ಆರ್ಥಿಕ ನೀತಿಗಳ ಮತ್ತು ಕೋಮುವಾದದ ವಿರುದ್ಧ ನೀಡಿದ ತೀರ್ಪೆಂದರೆ ತಪ್ಪಲ್ಲ. ಹೊಸ ಆರ್ಥಿಕ ನೀತಿಯ ವಿರುದ್ಧ ಕಾರ್ಮಿಕ ಸಂಘಟನೆಗಳು ನಡೆಸುತ್ತಿರುವ ಹೋರಾಟವು ಜನರ ಗಮನ ಸೆಳೆದಿದೆ. ಸಂಸತ್ತಿನಲ್ಲಿ ಎಡಪಕ್ಷಗಳ ಸಂಖ್ಯಾಬಲ ಏರಿದೆ.

೧೮೮೬ರಲ್ಲಿ ಅಮೆರಿಕ ಮತ್ತು ಕೆನಡಾದ ಕಾರ್ಮಿಕರು ಒಗ್ಗೂಡಿ ಅಮೆರಿಕನ್ ಫೆಡರೇಶನ್ ಆಫ್ ಲೇಬರ್ ಸ್ಥಾಪಿಸಿದ್ದು, ೧೯೨೦ರಲ್ಲಿ ಭಾರತದ ಕಾರ್ಮಿಕರು ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್ ಸ್ಥಾಪಿಸಿದ್ದು, ಹಾಗೆಯೇ ಬ್ರಿಟನ್ನಿನ ಕಾರ್ಮಿಕರು ಟ್ರೇಡ್ ಯೂನಿಯನ್ ಕೌನ್ಸಿಲನ್ನು ಸ್ಥಾಪಿಸಿದ್ದು, ಸಂಯುಕ್ತ ಹೋರಾಟಕ್ಕಾಗಿ ಒಕ್ಕೂಟ ರಚಿಸಿದ್ದು ಅವರ ಪ್ರಜ್ಞೆಯನ್ನು ಪ್ರತಿಫಲಿಸುವುದರ ಜೊತೆ ಅಂದಿನ ಐತಿಹಾಸಿಕ ಅಗತ್ಯದ ಬಗ್ಗೆಯೂ ಅರಿವು ನೀಡುತ್ತದೆ. ಬಂಡವಾಳಶಾಹಿ ಜಾಗತೀಕರಣ ವರ್ಗ ಸಂಘರ್ಷವನ್ನು ಹೆಚ್ಚಿಸುತ್ತಿದೆ.

ಮೇ ದಿನದ ಇಂದಿನ ಸಂದರ್ಭದಲ್ಲಿ ಕಾರ್ಮಿಕ ಸಂಘಟನೆಗಳು, ಮುಂದಿನ ದಿನಗಳ ಸವಾಲುಗಳನ್ನು ಯಶಸ್ವಿಯಾಗಿ ಎದುರಿಸಲು ವರ್ಗ ಐಕ್ಯತೆಯ ಅಗತ್ಯವನ್ನು ಮನಗಂಡಲ್ಲಿ ಅಂತರರಾಷ್ಟ್ರೀಯ ಕಾರ್ಮಿಕ ದಿನ ಹೆಚ್ಚು ಅರ್ಥಪೂರ್ಣವಾದೀತು.

ಮುರಳೀಧರ್
ವಕೀಲರು, ಎ.ಐ.ಟಿ.ಯು.ಸಿ – ಕಾನೂನು ಘಟಕ

# ನೌಖಾಲಿಯತ್ತ ಗಾಂಧೀಜಿ



ಸ್ವಾತಂತ್ರ್ಯ ಪ್ರಾಪ್ತವಾಗುವುದಕ್ಕೆ ಕೆಲದಿನಗಳ ಮೊದಲು, ಪಾಕಿಸ್ತಾನ ರಚನೆಗೆ ಮೌಂಟ್‌ಬ್ಯಾಟನ್ ಚಾಲನೆ ಕೊಟ್ಟ ದಿನಗಳಲ್ಲಿ ಬಂಗಾಳದಲ್ಲಿ ಹಿಂದೂ-ಮುಸ್ಲಿಂ ಘರ್ಷಣೆ ಹಿಂದೆಂದೂ ಕೇಳರಿಯದ ಪ್ರಮಾಣದಲ್ಲಿ ಸಂಭವಿಸಿತು. ಬಂಗಾಳದಲ್ಲಿ ಆಗ ಸುಹ್ರವರ್ದಿಯವರ ನೇತೃತ್ವದಲ್ಲಿ ಸರ್ಕಾರ ನಡೆಯುತ್ತಿತ್ತು. ಅದು ಸಮ್ಮಿಶ್ರ ಸರ್ಕಾರವಾಗಿತ್ತು. ಬಂಗಾಳ ವಿಭಜನೆಯಾಗಿ, ಪೂರ್ವ ಬಂಗಾಳ ಪಾಕಿಸ್ತಾನದ ಒಂದು ಭಾಗವಾಗುವ ಸಂದರ್ಭ ಅದು. ಪೂರ್ವ ಬಂಗಾಳಕ್ಕೆ ಸೇರಲಿದ್ದ ನೌಖಾಲಿಯಲ್ಲಿ ಹಿಂದೂಗಳ ಮೇಲೆ ಮುಸ್ಲಿಮರ ದೌರ್ಜನ್ಯ ನಡೆಯಿತು. ಹಿಂದೂಗಳ ಮನೆಗಳನ್ನೆಲ್ಲ ದೋಚಲಾಯಿತು. ಮನೆಗಳನ್ನೂ ಸುಟ್ಟರು. ಹಿಂದೂಗಳ ಸಾಲ್ಗೊಲೆ ಮಾಡಿದರು. ಹಿಂದೂಗಳನ್ನು ಬೀದಿಪಾಲು ಮಾಡಿದರು. ಇದರ ಪ್ರತಿಧ್ವನಿಯಾಗಿ ಕಲ್ಕತ್ತದಲ್ಲಿ ಮುಸ್ಲಿಮರ ಮೇಲೆ ಹಿಂದುಗಳು ಪ್ರತೀಕಾರ ಮಾಡಿದರು. ಮುಸ್ಲಿಮರ ಮನೆಗಳನ್ನೂ ಸುಡಲಾಯಿತು. ಅವರ ಆಸ್ತಿಪಾಸ್ತಿ ದೋಚಲಾಯಿತು. ಹಿಂಸಾಕಾಂಡ ಎರಡೂ ಕಡೆ ನಡೆದುಹೋಯಿತು. ಈ ಸಂದರ್ಭದಲ್ಲಿ ಭಾರತ ಹಸ್ತಾಂತರಗೊಳ್ಳುವ ದಿನಕ್ಕೆ ಕೆಲದಿನಗಳ ಮೊದಲು ಗಾಂಧೀಜಿ ನೌಖಾಲಿಯಲ್ಲಿ ಶಾಂತಿಸ್ಥಾಪನೆ ಮಾಡುವ ಸಲುವಾಗಿ ಕಲ್ಕತ್ತೆಗೆ ಬಂದರು. ಅವರು ಬರುವ ವೇಳೆಗೆ ಕಲ್ಕತ್ತವೂ ಕೋಮುಜ್ವಾಲೆಯಿಂದ ಹತ್ತಿ ಉರಿಯುತ್ತಿತ್ತು.

ನೌಖಾಲಿ ಮತ್ತು ಕಲ್ಕತ್ತಾದಲ್ಲಿ ನಡೆದ ಈ ಘೋರವಾದ ಕೋಮು ಘರ್ಷಣೆಯ ಹಿನ್ನೆಲೆಯನ್ನು ತಿಳಿಯುವುದು ಅಗತ್ಯ. ಸಂಯುಕ್ತ ಬಂಗಾಳದ ಪ್ರಧಾನಿಯಾಗಿದ್ದ ಸುಹ್ರವರ್ದಿ ಮುಸ್ಲಿಂ ಲೀಗಿನ ಒಬ್ಬ ಪ್ರಮುಖ ನಾಯಕ. ಪಾಕಿಸ್ತಾನ ನಿರ್ಮಾತೃ ಎಂ. ಎ. ಜಿನ್ನಾರ ಭಂಟ. ಬಂಗಾಳ ವಿಭಜನೆಯಾಗುವುದಿದ್ದದ್ದರಿಂದ ಪೂರ್ವ ಪಾಕಿಸ್ತಾನದಲ್ಲಿರುವ ಹಿಂದೂಗಳನ್ನೆಲ್ಲ ಅಲ್ಲಿಂದ ಭಯೋತ್ಪಾದನೆ ಮಾಡಿ ಓಡಿಸಿಬಿಡಬೇಕೆಂದು ಸುಹ್ರವರ್ದಿಯ ಲೆಕ್ಕಾಚಾರ. ಅದಕ್ಕಾಗಿ ಆತ ನೌಖಾಲಿಯಲ್ಲಿ ಹಿಂದೂಗಳ ವಿರುದ್ಧ ಮುಸ್ಲಿಮರು ಕತ್ತಿ ಹಿರಿಯುವುದಕ್ಕೆ ಪ್ರೇರಣೆ ನೀಡಿದ್ದ. ನೌಖಾಲಿಯ ವಿದ್ಯಮಾನಗಳು ಹೊರಬೀಳುತ್ತಿದ್ದಂತೆಯೇ, ಕಲ್ಕತ್ತದಲ್ಲಿ ಹಿಂದೂಗಳು ಮುಸ್ಲಿಮರ ವಿರುದ್ಧ ಸಮರ ಸಾರಿದರು.

ಗಾಂಧೀಜಿ ನೌಖಾಲಿಗೆ ಹೋಗಲೆಂದು ತನ್ನ ಮಿತಪರಿವಾರದೊಡನೆ ಕಲ್ಕತ್ತಕ್ಕೆ ಬಂದಿಳಿದರು. ಕಲ್ಕತ್ತದಲ್ಲಿ ಎರಡು ದಿನ ಉಳಿದು ಅಲ್ಲಿಯ ವಿದ್ಯಮಾನಗಳನ್ನು ತಿಳಿದುಕೊಂಡರು. ಅಷ್ಟರಲ್ಲಿ ಅಲ್ಲಿಯ ಮುಸ್ಲಿಂ ಸಹೋದರರು ಗಾಂಧೀಜಿಯನ್ನು ಭೇಟಿ ಮಾಡಿ ಕಲ್ಕತ್ತಾದಲ್ಲಿ ಇದ್ದುಕೊಂಡು ತಮಗೆ ಒದಗಿರುವ ಗಂಡಾಂತರದಿಂದ ತಮ್ಮನ್ನು ಪಾರುಮಾಡಬೇಕೆಂದು ಪ್ರಾರ್ಥಿಸಿದರು. ಮಮ್ಮಲ ಮರುಗಿದ ಗಾಂಧೀಜಿ ತಮ್ಮ ನೌಖಾಲಿ ಪ್ರಯಾಣವನ್ನೂ ವಿಧಿ ಇಲ್ಲದೆ ಮುಂದೂಡಿ ಎರಡು ದಿನಗಳ ಮಟ್ಟಿಗೆ ಕಲ್ಕತ್ತದಲ್ಲಿರುವುದಾಗಿ ಮುಸ್ಲಿಮರಿಗೆ ಆಶ್ವಾಸನೆ ನೀಡಿದರು. ಕಲ್ಕತ್ತದಲ್ಲಿ ಘರ್ಷಣೆ ನಡೆದ ಕಡೆಗಳಲ್ಲೆಲ್ಲಾ ಅಡ್ಡಾಡಿ, ಪ್ರಾರ್ಥನಾ ಸಭೆ ಕೂಡಿಸಿ, ಹಿಂದೂ-ಮುಸ್ಲಿಂ ಸಖ್ಯಕ್ಕಾಗಿ ಕಳಕಳಿಯ ಪ್ರಾರ್ಥನೆ ಮಾಡಿದರು.

ಬಂಗಾಳ ಸರ್ಕಾರದ ಪ್ರಧಾನಿ ಸುಹ್ರವರ್ದಿ ಕಲ್ಕತ್ತ ಹತ್ತಿಕೊಂಡು ಉರಿಯುತ್ತಿದ್ದ ಈ ಸಮಯದಲ್ಲಿ ಕರಾಚಿಯಲ್ಲಿ ಪಾಕಿಸ್ತಾನ ರಾಜ್ಯಾಂಗ ಸಭೆಯ ಆರಂಭೋತ್ಸವದಲ್ಲಿ ಪಾಲ್ಗೊಳ್ಳಲು ಪಾಕಿಸ್ತಾನಕ್ಕೆ ತೆರಳಿದ್ದರು. ಗಾಂಧೀಜಿ ಕಲ್ಕತ್ತಕ್ಕೆ ಬಂದಿಳಿದಿದ್ದಾರೆ ಎಂಬ ಸುದ್ದಿ ತಿಳಿದೊಡನೆ, ಸುಹ್ರವರ್ದಿ ಕೂಡಲೇ ವಿಮಾನದಲ್ಲಿ ದೆಹಲಿಗೆ ವಾಪಸಾಗಿ, ಅಲ್ಲಿಂದ ಕಲ್ಕತ್ತೆಗೆ ಅವಸರವಸರವಾಗಿ ಬಂದಿಳಿದರು.

ಗಾಂಧೀಜಿಯನ್ನು ಸಂಧಿಸಿದೊಡನೆ ಸುಹ್ರವರ್ದಿ ಅವರನ್ನು ಕಲ್ಕತ್ತದಲ್ಲೇ ಉಳಿಯಲು ಕೇಳಿಕೊಂಡರು. ಅವರಿಗೆ ಗಾಂಧೀಜಿ ನೌಖಾಲಿಗೆ ಹೋಗುವುದು ಬೇಕಿರಲಿಲ್ಲ. ಗಾಂಧೀಜಿಗೆ ಅತಿ ಅಸಹನೆಯ ಸುಹ್ರವರ್ದಿಯವರನ್ನು ಅರ್ಥಮಾಡಿಕೊಳ್ಳಲು ಕಷ್ಟವಾಗಲಿಲ್ಲ. ಗಾಂಧೀಜಿ ಕೇಳಿದರು, 'ಸುಹ್ರವರ್ದಿ, ನೌಖಾಲಿಗೆ ಹೋಗಬೇಡ ಎಂದು ಹೇಳುವ ಸಲುವಾಗಿ ಇಲ್ಲಿಗೆ ಧಾವಿಸಿಬಂದಿರಾ ?'

ಗಾಂಧೀಜಿ, ತಾವು ಮತ್ತೂ ಎರಡು ದಿನ ಕಲ್ಕತ್ತದಲ್ಲಿರುತ್ತೇನೆಂದು ಆಶ್ವಾಸನೆಕೊಟ್ಟರು. ಆದರೆ ಒಂದು ಷರತ್ತಿನ ಮೇಲೆ.

ಮೊದಲನೆಯ ಷರತ್ತು : ನಾನೂ, ನೀವೂ ಕಲ್ಕತ್ತದಲ್ಲಿ ಹೆಚ್ಚು ಅನಾಹುತ ಸಂಭವಿಸಿರುವ ಮೊಹಲ್ಲಾದಲ್ಲಿ ಉಳಿಯಬೇಕು. ನೀವು ನಿಮ್ಮ ಹ್ಯಾಟು, ಬೂಟು, ಸೂಟು ಎಲ್ಲ ಕಿತ್ತುಹಾಕಿ ಸಾಮಾನ್ಯರಲ್ಲಿ ಸಾಮಾನ್ಯರಂತೆ ನನ್ನ ಜೊತೆಗೆ ಇರಬೇಕು. ಯಾವುದೇ ರಕ್ಷಣಾ ವ್ಯವಸ್ಥೆ ಕೂಡದು. ಕಲ್ಕತ್ತದಲ್ಲಿ ಶಾಂತಿ ನೆಲಸುವವರೆಗೆ ನಾವು ಕೂಡಿ ಕೆಲಸ ಮಾಡಬೇಕು.

ಎರಡನೆಯ ಷರತ್ತು : ನೌಖಾಲಿಯಲ್ಲಿ ಮುಸ್ಲಿಮರು ಹಿಂದೂಗಳ ಮೇಲೆ ಹಲ್ಲೆ ಮಾಡುತ್ತಿರುವುದನ್ನು ನಿಲ್ಲಿಸುವಂತೆ ಅಲ್ಲಿಯ ಮುಸ್ಲಿಂ ಮುಖಂಡರಿಗೆ ತಾಖೀತ್ ಮಾಡಿ ಅವರಿಂದ ಆಶ್ವಾಸನೆ ಪಡೆಯಬೇಕು.

— ಎಚ್. ಎಸ್. ದೊರೆಸ್ವಾಮಿ —

ನೌಖಾಲಿಯಲ್ಲಿ ಹಿಂದೂಗಳ ಮೇಲೆ ಮುಸ್ಲಿಮರ ದೌರ್ಜನ್ಯ ನಡೆಯಿತು. ಹಿಂದೂಗಳ ಮನೆಗಳನ್ನೆಲ್ಲ ದೋಚಲಾಯಿತು. ಮನೆಗಳನ್ನೂ ಸುಟ್ಟರು. ಹಿಂದೂಗಳ ಸಾಲ್ಗೊಲೆ ಮಾಡಿದರು. ಹಿಂದೂಗಳನ್ನು ಬೀದಿಪಾಲು ಮಾಡಿದರು. ಇದರ ಪ್ರತಿಧ್ವನಿಯಾಗಿ ಕಲ್ಕತ್ತದಲ್ಲಿ ಮುಸ್ಲಿಮರ ಮೇಲೆ ಹಿಂದುಗಳು ಪ್ರತೀಕಾರ ಮಾಡಿದರು. ಮುಸ್ಲಿಮರ ಮನೆಗಳನ್ನೂ ಸುಡಲಾಯಿತು. ಅವರ ಆಸ್ತಿಪಾಸ್ತಿ ದೋಚಲಾಯಿತು. ಹಿಂಸಾಕಾಂಡ ಎರಡೂ ಕಡೆ ನಡೆದುಹೋಯಿತು. ಈ ಸಂದರ್ಭದಲ್ಲಿ ಭಾರತ ಹಸ್ತಾಂತರಗೊಳ್ಳುವ ದಿನಕ್ಕೆ ಕೆಲದಿನಗಳ ಮೊದಲು ಗಾಂಧೀಜಿ ನೌಖಾಲಿಯಲ್ಲಿ ಶಾಂತಿಸ್ಥಾಪನೆ ಮಾಡುವ ಸಲುವಾಗಿ ಕಲ್ಕತ್ತೆಗೆ ಬಂದರು. ಅವರು ಬರುವ ವೇಳೆಗೆ ಕಲ್ಕತ್ತವೂ ಕೋಮುಜ್ವಾಲೆಯಿಂದ ಹತ್ತಿ ಉರಿಯುತ್ತಿತ್ತು.

ಗಾಂಧೀಜಿ ಶಾಂತಿ ನಿರ್ಮಾಣಕ್ಕಾಗಿ ಮೊದಲು ಆರಿಸಿಕೊಂಡಿದ್ದು ಬೆಲ್ಲಘಟಾ ಬಡಾವಣೆ. ಅಲ್ಲಿ ಅತಿ ಘೋರವಾಗಿ ಹಿಂದೂ-ಮುಸ್ಲಿಂ ಘರ್ಷಣೆ ನಡೆದಿತ್ತು. ಅಲ್ಲಿನ 'ಹೈದರಿ ಮ್ಯಾನ್ಷನ್'ನಲ್ಲಿ ವಾಸ್ತವ್ಯ ಮಾಡಲು ಗಾಂಧೀಜಿ ನಿರ್ಧರಿಸಿದರು. ಆ ಮನೆ ಅರ್ಧ ಉರಿದಿತ್ತು. ಧೂಳು, ಬೂದಿ ಆವರಿಸಿದ್ದ ಹಜಾರದಲ್ಲಿ ಚಾಪೆ ಹಾಸಿಕೊಂಡು ಇಬ್ಬರೂ ಮಲಗುವುದೆಂದು ನಿರ್ಧರಿಸಿದ್ದರು.

ಗಾಂಧೀಜಿ ಮೊದಲ ದಿನದ ಪ್ರಾರ್ಥನಾ ಸಭೆಯಲ್ಲಿ ಹೇಳಿದರು: ನಾವು ಸ್ವಾತಂತ್ರ್ಯದ ಹೊಸಲಲ್ಲಿ ಇರುವ ಸಂದರ್ಭದಲ್ಲಿ ಇಲ್ಲಿ ಹಿಂದೂ ಮುಸ್ಲಿಮರು ಉನ್ಮತ್ತರಾಗಿದ್ದಾರೆ. ಇದನ್ನು ಅಸಹಾಯಕನಾಗಿ ನೋಡುತ್ತಾ ಬದುಕಿರಲು ನಾನು ಆಶಿಸುವುದಿಲ್ಲ. ಈ ಘೋರ ಪರಿಸ್ಥಿತಿ ಮುಂದುವರೆಯುವುದಾದರೆ ನಮ್ಮ ದೇಶದ ಭವಿಷ್ಯ ನಿರಾಶಾದಾಯಕ. ಪೊಲೀಸರು ತಮ್ಮ ಕರ್ತವ್ಯವನ್ನು ನಿಸ್ಪೃಹತೆಯಿಂದ ಪಾಲಿಸುವರೆಂದು ಆಶಿಸುತ್ತೇನೆ.

ಗಾಂಧೀಜಿ ಮತ್ತು ಸುಹ್ರವರ್ದಿ ಕೂಡಿಕೊಂಡು ಕಲ್ಕತ್ತಾದಲ್ಲಿ ಶಾಂತಿ ಸ್ಥಾಪಿಸುವ ಕರಾರು ಮಾಡಿಕೊಂಡರು. ನೀವು ನನ್ನನ್ನು ಕೂಡಿಕೊಂಡು ಕೆಲಸ ಮಾಡುವುದಕ್ಕೆ ಮೊದಲು ಬಹಳ ಅಪಾಯಕಾರಿ ಸನ್ನಿವೇಶವನ್ನು ಎದುರಿಸಬೇಕಾಗುತ್ತದೆ. ನಾನಂತೂ ಸಾಯಲೂ ಸಿದ್ಧ. ನೀವು ನಿಮ್ಮ ವಯಸ್ಸಾದ ತಂದೆ ಮತ್ತು ಸಹೋದರಿಯ ಅನುಮತಿ ಪಡೆದು ಬನ್ನಿ ಎಂದೂ ಹೇಳಿದರು. ಅದರಂತೆ ಸುಹ್ರವರ್ದಿ ಮಾಡಿದರು. ಅನುಮತಿಯೂ ದೊರೆಯಿತು.

ಗಾಂಧೀಜಿ ಹೈದರಿ ಮ್ಯಾನ್ಷನ್‌ಗೆ ಬಂದಿಳಿದರು. ಅಷ್ಟು ಹೊತ್ತಿಗಾಗಲೇ ಹಿಂದೂಗಳ ಗುಂಪೊಂದು ಆ ಮನೆಯ ಮುಂದೆ ಜಮಾಯಿಸಿತ್ತು. ಕೆಲ ನಿಮಿಷಗಳಲ್ಲಿ ಸುಹ್ರವರ್ದಿ ಕೂಡ ಗಾಂಧೀಜಿಯ ಜೊತೆಗೂಳಿಯಲು ಬಂದರು.

ಗಾಂಧೀಜಿ ಜನತೆಯನ್ನು ಕುರಿತು ಬಿಚ್ಚು ಮನಸ್ಸಿನಿಂದ ಮಾತನಾಡಿ, 'ನನಗೆ ಜನ ಹೇಳಿದ್ದಾರೆ ಸುಹ್ರವರ್ದಿ ನಂಬಿಕೆಗೆ ಅರ್ಹರಲ್ಲ ಎಂದು. ಅದೇ ರೀತಿ ಅನೇಕರು ಗಾಂಧಿ ಅದಕ್ಕಿಂತ ಮೋಸಗಾರ ಎಂದು ಹೇಳಿರುವರೆಂದೂ ನನಗೆ ತಿಳಿದು ಬಂದಿದೆ. ನನ್ನನ್ನು ಜನ ಆಷಾಢಭೂತಿ ಎನ್ನುತ್ತಾರೆ. ಯಾರನ್ನೇ ಆಗಲಿ ನಿಸ್ಪೃಹ ಎಂದು ಹೇಗೆ ತೀರ್ಮಾನಿಸುವುದು? ದೇವರಿಗೆ ಮಾತ್ರ ನಮ್ಮೆಲ್ಲರ ಹೃದಯ ಪ್ರವೇಶ ಮಾಡಿ ತಿಳಿಯಲು ಸಾಧ್ಯ. ನನಗೆ ಷಹೀದ್ ಸಾಹೇಬರು ೨೦ ವರ್ಷದ ಪರಿಚಿತರು. ನಾನು ಷಹೀದ್ ಸಾಹೇಬರನ್ನೂ ನಂಬುತ್ತೇನೆ. ನೀವು ನನ್ನನ್ನೂ ನಂಬಬೇಕು. ನಾವು ಒಟ್ಟಿಗೇ ಇದ್ದು ಹಿಂದೂ-ಮುಸ್ಲಿಂ ಸಖ್ಯಕ್ಕೆ ಕೆಲಸ ಮಾಡಲು ನಿಶ್ಚಯಿಸಿದ್ದೇವೆ. ನಾವು ಒಬ್ಬರನ್ನು ಬಿಟ್ಟು ಇನ್ನೊಬ್ಬರು ರಹಸ್ಯದಲ್ಲಿ ಯಾರೊಡನೆಯೂ ಮಾತನಾಡಬಾರದೆಂದು ಒಪ್ಪಂದ ಮಾಡಿಕೊಂಡಿದ್ದೇವೆ. ಯಾರೇ ನಮ್ಮನ್ನು ಕಾಣಲು ಬಂದರೂ ನಾವು ಒಟ್ಟಿಗೆ ಕೂತು ಅವರೊಡನೆ ಚರ್ಚೆ ಮಾಡುತ್ತೇವೆ. ಸುಹ್ರವರ್ದಿ ಮತ್ತು ನಾನು ಕೈಗೊಂಡಿರುವ ಈ ಮಹತ್ಕಾರ್ಯದಲ್ಲಿ ನೀವೆಲ್ಲ ಸಹಕರಿಸುವಿರೆಂದು ನಾನು ನಂಬಿದ್ದೇನೆ.'

ಆವೇಶದಲ್ಲಿ ಜನ ಕೂಗಿದರು: 'ನೀವೇಕೆ ಇಲ್ಲಿಗೆ ಬಂದಿರಿ? ನಾವು ಹಿಂದೂಗಳು ತೊಂದರೆಯಲ್ಲಿದ್ದಾಗ ನೀವು ಬರಲಿಲ್ಲ. ಈಗ ಮುಸ್ಲಿಮರು ದೂರಿತ್ತಿದ್ದಾರೆಂದು ಓಡಿ ಬಂದಿದ್ದೀರಿ ಸಡಗರದಲ್ಲಿ! ಹಿಂದೂಗಳು ಮನೆಮಠ ಬಿಟ್ಟು ಜೀವಭಯದಿಂದ ಓಡಿಹೋಗಿರುವ ಸ್ಥಳಗಳಿಗೆ ನೀವೇಕೆ ಭೇಟಿಕೊಟ್ಟಿಲ್ಲ? ಗಾಂಧಿ, ನಿಮ್ಮ ಉಪದೇಶ ನಮಗೆ ಬೇಕಿಲ್ಲ. ಹೊರಡಿ.'

ಜನ ಸುಹ್ರವರ್ದಿ ಅವರ ಕಾರನ್ನೂ ಸುತ್ತುಗಟ್ಟಿದರು. ಅವರು ಗಾಂಧಿಯವರೊಡನೆ ತಾನು ಕೈಗೊಂಡಿರುವ ಈ ಮಹತ್ಕಾರ್ಯಕ್ಕೆ ಅಡ್ಡಿ ತರಬೇಡಿ ಎಂದು ಪ್ರಾರ್ಥಿಸಿದರು. ದೇವರ ದಯೆಯಿಂದ ಈ ಮಾತು ಆ ಜನಸಮೂಹಕ್ಕೆ ಹಿಡಿಸಿತು. ಪ್ರದರ್ಶನಕಾರರು ಶಾಂತರಾದರು. ಸುಹ್ರವರ್ದಿ ಹೇಳಿದರು – '೧೯೪೬ರಲ್ಲಿ ಮಹಮದೀಯರು ಮಾಡಿದ್ದು ಶುದ್ಧಾಂಗವಾಗಿ ತಪ್ಪು. ಅದಕ್ಕೆ ಪ್ರತಿಕಾರ ರೂಪದಲ್ಲಿ ಈಗ ಕಲ್ಕತ್ತದಲ್ಲಿ ಹಿಂದೂಗಳ ದಾಂಧಲೆ ನಡೆದಿದೆ.'

ಆ ಜನಜಂಗುಳಿಯನ್ನು ಕುರಿತು ಗಾಂಧೀಜಿ 'ನಾನು ನಿಮ್ಮ ರಕ್ಷಣೆಯಲ್ಲಿದ್ದೇನೆ. ನನಗೆ ನೀವು ಏನು ಮಾಡಿದರೂ ಅದಕ್ಕೆ ನನ್ನ ಒಪ್ಪಿಗೆ ಇದೆ. ನನ್ನ ಜೀವನದ ಕೊನೆಯ ಹಂತದಲ್ಲಿ ಇದ್ದೇನೆ. ಈಗಲೂ ಹೇಳುತ್ತೇನೆ. ಹಿಂದೂ-ಮುಸ್ಲಿಮರೇ ನಿಮ್ಮ ಉನ್ಮಾದವನ್ನು ಕೈಬಿಡಿ. ಅದನ್ನು ನೋಡಿಕೊಂಡು ನಾನು ಜೀವಿಸಲಾರೆ. ನಾನು ಇದೇ ರೀತಿಯಲ್ಲಿ ಕೊನೆಯ ಎಚ್ಚರಿಕೆಯನ್ನು ನೌಖಾಲಿಯಲ್ಲಿರುವ ಮುಸ್ಲಿಮ್ ಬಂಧುಗಳಿಗೆ ನೀಡಿದೆ. ಅವರು ಅದಕ್ಕೆ ಗಮನ ನೀಡಿದ್ದಾರೆ. ಆದ್ದರಿಂದ ನಾನು ನಿಮಗೂ ಈ ಕೊನೆಯ ಎಚ್ಚರಿಕೆಯನ್ನು ನೀಡುವ ಹಕ್ಕನ್ನು ಪಡೆದಿದ್ದೇನೆ.'

ಹೀಗೆ ಮಾತುಕತೆ ರಾತ್ರಿ ಎಂಟು ಘಂಟೆಯವರೆಗೆ ನಡೆಯಿತು. ಆ ಉನ್ಮಾದಪೀಡಿತ ಜನ ಗಾಂಧೀಜಿಯವರ ಮಾತಿಗೆ ತಮ್ಮ ಸಮ್ಮತಿ ನೀಡಲಿಲ್ಲ. ಆದರೆ ಅವರು ಬಹಳ ಆಯಾಸ ಗೊಂಡಿದ್ದರು. ಗಾಂಧೀಜಿ ಹೇಳಿದರು : 'ಈಗ ಹೊತ್ತಾಗಿದೆ. ಮತ್ತೆ ನಾಳೆ ಬನ್ನಿ' ಎಂದು. ಅಲ್ಲಿ ನೆರೆದಿದ್ದ ಯುವಕರೆಲ್ಲ ತೆರಳಿದರು. ಮೂರನೇ ದಿನ ಮತ್ತೆ ಗುರ್ರನ್ನುತ್ತಲೇ ಬಂದರು.

ಗಾಂಧೀಜಿ ಸುಹ್ರವರ್ದಿ ಸಮ್ಮುಖದಲ್ಲಿ ಹೇಳಿದರು: 'ನಾನೀಗ ಮುಸ್ಲಿಮರ ಬಡಾವಣೆಯಲ್ಲಿ ಮುಸ್ಲಿಮರೊಬ್ಬರ ಮನೆಯಲ್ಲಿದ್ದೇನೆ. ನಾವೆಲ್ಲ ದೇವರ ಕೈಲಿದ್ದೇವೆ. ಆಗ ಆ ತಂಡದಲ್ಲಿದ್ದವರು 'ನಿಮ್ಮ ಉಪದೇಶ ನಮಗೆ ಹಿಡಿಸದು. ಇಲ್ಲಿಂದ ಹೊರಡಿ. ಮುಸ್ಲಿಮರನ್ನು ಇಲ್ಲಿ ವಾಸಿಸಲು ನಾವು ಬಿಡುವುದಿಲ್ಲ' ಎಂದು ಒಕ್ಕೊರಲಿನಿಂದ ಹೇಳಿದರು. ಅದಕ್ಕೆ ಉತ್ತರವಾಗಿ ಗಾಂಧೀಜಿ ಹೇಳಿದರು 'ಇದರರ್ಥ ನಿಮಗೆ ನನ್ನ ಸೇವೆಯ ಅವಶ್ಯಕತೆ ಇಲ್ಲ ಎಂದು ನಾನು ಭಾವಿಸಲೇ? ನನ್ನ ಕೆಲಸದಲ್ಲಿ ನೀವು ಸಹಕರಿಸುವಿರಾದರೆ ಓಡಿಸಲ್ಪಟ್ಟ ಹಿಂದೂಗಳು ಮರಳಿ ತಮ್ಮ ಮನೆಗಳಿಗೆ ಹಿಂತಿರುಗಬಹುದು. ನೀವು ಹಳೇ ದ್ವೇಷ, ಹಳೇ ಹಗೆತನವನ್ನು ಮುಂದುವರೆಸುವಿರಾದರೆ, ನಿಮಗೆ ಅವರಿಂದ ಏನು ಲಾಭ? ಹೈದರಿ ಹಾಲ್‌ಗೆ ನಾನು ಬಂದಿಳಿದಿರುವುದು ನನ್ನ ಮೊದಲ ಹೆಜ್ಜೆ. ಇಲ್ಲಿಯ ಹಿಂದೂಗಳು ಮುಸ್ಲಿಂ ನಿರಾಶ್ರಿತರನ್ನು ತಮ್ಮ ಮನೆಗಳಿಗೆ ಹಿಂದಿರುಗಲು ಅವಕಾಶ ಮಾಡಿಕೊಟ್ಟೊಡನೆ, ಷಹೀದ್ ಸಾಹೇಬರೂ ನಾನೂ ಇನ್ನೊಂದು ಮುಸ್ಲಿಮರ ಬೀದಿಗೆ ಹೋಗುತ್ತೇವೆ. ಅಲ್ಲಿ ಅವರ ಹೃದಯ ಪರಿವರ್ತನೆ ಮಾಡಿ, ಎಂದಿನ ಮಾಮೂಲು ಸ್ಥಿತಿಗೆ ತರುತ್ತೇವೆ.

'ಹೀಗೆಯೇ ಮನಸ್ಸಿನ ಗಾಯವನ್ನು ವಾಸಿ ಮಾಡುವ ಕೆಲಸ ಮುಂದುವರೆಸುತ್ತೇವೆ. ಈ ಕೆಲಸ ಎಲ್ಲ ಕಡೆಗಳಲ್ಲೂ ಶಾಂತಿ ನೆಲೆಸುವವರೆಗೆ ಮುಂದುವರೆಯುತ್ತದೆ.' ಈ ಮಾತುಗಳಿಗೆ ಕೆಲವರು ವಿರೋಧ ಮಾಡಿದರು, ಮತ್ತೆ ಕೆಲವರು ಸುಹ್ರವರ್ದಿಯ ಕಡೆಗೆ ಕೆಂಗಣ್ಣಿನ ನೋಡ ಬೀರಿದರು. ಸುಹ್ರವರ್ದಿ ಮೌನದಿಂದಿದ್ದರು. ಇನ್ನೂ ಕೆಲವರು ಗಾಂಧೀಜಿ ಮಾತಿಗೆ ಒಪ್ಪಿಗೆ ಸೂಚಿಸುವ ಭಂಗಿಯಲ್ಲಿ ಆಗಾಗ ತಲೆಯಲ್ಲಾಡಿಸಿದರು. ಕೊನೆಗೆ ಎಲ್ಲರೂ ಶಾಂತರಾದರು.

ಹಿಂದಿನ ದಿನ ಪ್ರಾರ್ಥನಾ ಸಭೆ ನಡೆಸಲು ಅವಕಾಶ ಕೊಟ್ಟಿರಲಿಲ್ಲ. ನೆರೆದಿದ್ದ ಜನ ಇಂದು ಪ್ರಾರ್ಥನಾ ಸಭೆ ನಡೆಸಲು ಸಮ್ಮತಿಸಿದರು. ಗಾಂಧೀಜಿ ಹೀಗೆ ಹೇಳಿದರು, 'ನಾಳೆ ಭಾರತ ಸ್ವತಂತ್ರ ರಾಷ್ಟ್ರವಾಗಲಿದೆ. ಅದು ಮಹತ್ವದ ದಿನ. ನಾಳೆ ಭಾರತ ಮತ್ತು ಪಾಕಿಸ್ತಾನ ಸರ್ಕಾರಗಳು ಆಡಳಿತ ನಡೆಸುವ ಹೊಣೆಗಾರಿಕೆ ಹೊರುವ ದಿನ. ನಾಳೆ ನಾವೆಲ್ಲ ಉಪವಾಸ ಆಚರಿಸಿ ಭಗವಂತನಿಗೆ ಪ್ರಾರ್ಥನೆ ಸಲ್ಲಿಸೋಣ.' ಅವರು ಮುಂದುವರಿದು 'ನಾನು ಈ ದಿನ ನೌಖಾಲಿಯಲ್ಲಿರಬೇಕೆಂದಿದ್ದೆ. ಸುಹ್ರವರ್ದಿಯವರು ನನ್ನನ್ನು ಇಲ್ಲಿರಲು ಕೋರಿದ್ದಾರೆ. ಉರಿಯುತ್ತಿರುವ ಕಲ್ಕತ್ತದಲ್ಲಿ ಶಾಂತಿ ತರಲು ನಾನು ನನ್ನ ಅಳಿಲ ಸೇವೆ ಮಾಡಿದ್ದೇನೆ. ೧೯೪೬ರಲ್ಲಿ ಹಿಂದೂಗಳ ಕೊಲೆಯಾದುದಕ್ಕೆ ತಾವು ಜವಾಬ್ದಾರರೆಂದು ಸುಹ್ರವರ್ದಿ ಒಪ್ಪಿಕೊಂಡಿದ್ದಾರೆ. ಅದಕ್ಕಾಗಿ ಅವರು ತಾವು ಆ ಪಾತ್ರ ವಹಿಸಿದ್ದಕ್ಕೆ



## ಕೊನೆಗೆ

ಕಡಲ ಮೇಲೆ
ಬೆಸ್ತನಿಗೆ ಧ್ಯಾನಸ್ಥ ಭಾವ
ಮೀನಿಗೆ

* * *

ಕಡಲ ಒಳಗೆ
ಮೀನಿಗೆ ಚಂಚಲ ಸ್ವಭಾವ
ಈಜಿಗೆ

* * *

ಕೊನೆಗೆ
ಮೀನು ಸಿಕ್ಕಿತು ಸಾವಿಗೆ
ಬೆಸ್ತ ಹರವಿದ ಬದುಕಿಗೆ

ರವಿಶಂಕರ ಒಡ್ಡಂಬೆಟ್ಟು
ಅಭ್ಯುದಯ ಪ್ರೆಸ್ ಬಳಿ, ಅಂಚೆ - ಕನ್ಯಾನ - ೫೭೪ ೨೭೯
ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ

ನಿಸ್ಪೃಹತೆಯಿಂದ ತಮ್ಮ ತಪ್ಪೊಪ್ಪಿಗೆ ಸೂಚಿಸಿದ್ದಾರೆ' ಎಂದರು. ಸುಹ್ರವರ್ದಿ ವಿಷಾದದಿಂದ ತಲೆತಗ್ಗಿಸಿ ನಿಂತರು. 'ಇದೊಂದು ಸಂಧಿಕಾಲ. ಈಗ ವಾತಾವರಣ ತಿಳಿಗೊಳ್ಳುವ ಲಕ್ಷಣಗಳು ಕಾಣುತ್ತಿದೆ' ಎಂದು ಗಾಂಧೀಜಿ ಉದ್ಗಾರ ತೆಗೆದರು.

ಮಾರನೇ ದಿನ (೧೫.೮.೪೭) ಭಾರತದ ಸ್ವಾತಂತ್ರ್ಯ ಪ್ರಾಪ್ತವಾದ ದಿನ. ಅಂದು ನಡೆದ ಗಾಂಧೀಜಿಯವರ ಪ್ರಾರ್ಥನಾ ಸಭೆಗೆ ೩೦ ಸಾವಿರ ಜನ ಬಂದಿದ್ದರು.

ಈ ಸಡಗರದ ದಿನ ಇಷ್ಟೊಂದು ಜನ ಬಂದಿದ್ದರೆಂದು ಪರಿಸ್ಥಿತಿ ಪೂರ್ತಿ ತಿಳಿಯಾಯಿತೆಂದು ಗಾಂಧೀಜಿ ಭಾವಿಸುವ ಸ್ಥಿತಿಯಲ್ಲಿರಲಿಲ್ಲ. ಅದಕ್ಕಾಗಿ ಅವರು ತಮ್ಮ ಪ್ರವಾಸವನ್ನು ಮತ್ತೆ ಮುಂದಕ್ಕೆ ಹಾಕಿ, ಜನತೆಯ ಮನಃಸ್ಥಿತಿಯನ್ನು ಅರಿಯಲು ನಿರ್ಧರಿಸಿದರು.

ಹಿಂದು ಮುಸ್ಲಿಮರು ತಮ್ಮ ಹಿಂದಿನ ಹಗೆತನ ಮರೆತು ಆತ್ಮೀಯತೆಯಿಂದ ಸ್ವಾತಂತ್ರ್ಯವನ್ನು ಬರಮಾಡಿಕೊಂಡದ್ದನ್ನು ಕಂಡು ಹರ್ಷಿತರಾದರು.

ಮಾರನೆಯ ದಿನ ಮಹಮಡನ್ ಸ್ಪೋರ್ಟ್ಸ್ ಕ್ಲಬ್ ಮೈದಾನದಲ್ಲಿ ಸೇರಿದ್ದ ಪ್ರಾರ್ಥನಾ ಸಭೆಗೆ ೫ ಲಕ್ಷ ಜನ ಬಂದಿದ್ದರು. ಬಾಪು ಪ್ರಾರ್ಥನಾ ಸಭೆಯಲ್ಲಿ ಮಾತನಾಡುತ್ತಾ 'ಮಾನವ ಜನಾಂಗ ಎಂದೆಂದೂ ಹಿಂಸೆಯನ್ನು ಎತ್ತಿ ಹಿಡಿದಿದೆ. ತಮ್ಮ ಆತ್ಮರಕ್ಷಣೆಗಾಗಿಯಾದರೂ ಹಿಂಸೆಯಲ್ಲಿ ತೊಡಗುವುದು ಅನಿವಾರ್ಯ ಎಂದು ಜನ ಹೇಳುತ್ತಾರೆ. ದಾಳಿಕೋರನ ಹಿಂಸಾಚಾರವನ್ನು ಅದಕ್ಕಿಂತ ಬಲವಾದ ಹಿಂಸಾಚಾರದಿಂದ ಮಾತ್ರ ಹತ್ತಿಕ್ಕಲು ಸಾಧ್ಯ ಎಂಬುದು ಜನತೆಯ ಅಭಿಮತ. ಅದರಿಂದಲೇ ಎಲ್ಲ ರಾಷ್ಟ್ರಗಳೂ ಆಯುಧಗಳನ್ನು ಸಂಗ್ರಹಿಸಲು ತೊಡಗುತ್ತವೆ. ಪರಿಸ್ಥಿತಿ ಇದಾಗಿರುವುದರಿಂದ ವಿಶ್ವ ಸುರಕ್ಷಿತ ಸ್ಥಳವೆಂದು ಹೇಳುವುದಕ್ಕೆ ಸಾಧ್ಯವಿಲ್ಲವಾಗಿದೆ. ಭಗವಾನ್ ಏಸುಕ್ರಿಸ್ತ 'ಮನುಷ್ಯನ ನೈಜರಕ್ಷಣೆ, ಪ್ರತೀಕಾರ ಮನೋಭಾವ ತೊಲಗಿದಾಗ ಮಾತ್ರ ಕೈಗೂಡೀತು' ಎನ್ನುತ್ತಾರೆ. ಜೀಸಸ್ ಕ್ರೈಸ್ಟ್ ಇದನ್ನೇ ಮಾಡಿದ್ದು. ಅವರನ್ನೇನೋ ಶಿಲುಬೆಗೆ ಏರಿಸಲಾಯಿತು. ಆದರೆ ಅವರ ತತ್ವಗಳು ವಿಶ್ವವ್ಯಾಪಿ ಬೆಳೆಯಿತು.'

ಜನ ಸುಹ್ರವರ್ದಿಯವರನ್ನು ಗುಮಾನಿಯಿಂದಲೇ ನೋಡುತ್ತಿದ್ದರು. ಗಾಂಧಿಯವರ ಜೊತೆ ಶಾಂತಿ ಸ್ಥಾಪನೆಯಾಗುವವರೆಗೆ ಮಹಾತ್ಮಾಜಿ ಅವರ ಜೊತೆಯಲ್ಲೇ ಇರುವುದಾಗಿ ಹೇಳಿ ಕರಾರು ಮಾಡಿಕೊಂಡಿದ್ದ ಸುಹ್ರವರ್ದಿ ಎರಡು ದಿವಸ ಇದ್ದ ಹಾಗೆ ಮಾಡಿ ಮೂರನೇ ದಿನದಿಂದ ಮಲಗಲು ಮನೆಗೆ ಹೋದರು. ಅವರಿಗೆ ಕಷ್ಟ ಸಹಿಸಿ ಅನುಭವವಿರಲಿಲ್ಲ. ಜನ ಪ್ರಾರ್ಥನಾ ಸಭೆಯಲ್ಲಿ ಬಾಪುಗೆ ಪ್ರಶ್ನೆ ಹಾಕಿದರು. 'ನೀವು ನಂಬಿದ್ದ ಆಸಾಮಿ ನಂಬಿಕೆಗೆ ಎಷ್ಟು ಯೋಗ್ಯ? ಮಾಡಿಕೊಂಡ ಒಂದು ಮುಖ್ಯ ಒಪ್ಪಂದವನ್ನು ಸುಹ್ರವರ್ದಿ ಮುರಿದಿದ್ದಾರೆ.' ಗಾಂಧೀಜಿಯವರು ಸುಹ್ರವರ್ದಿ ಒಪ್ಪಂದವನ್ನು ಮುರಿದಿದ್ದಾರೆ ಎಂದು ಒಪ್ಪಿಕೊಂಡರು. 'ಅವರು ಯಾವಾಗಲೂ ನುಣುಚಿಕೊಳ್ಳುವ ಸ್ವಭಾವದವರು. ಬಂಗಾಳ ವಿಭಜನೆಯಾಗುವ ಮೊದಲು ಹಿಂದೂಗಳ ಮೇಲೆ ಅತಿಭಯಂಕರ ಹೇಯಕೃತ್ಯಗಳನ್ನು ಮಾಡಿಸಿದವರು' ಎಂದು ಜನ ಕೂಗಿ ಹೇಳಿದರು.

ಗಾಂಧೀಜಿ ಹೇಳಿದರು : 'ನಾನು ಈ ವಿಚಾರದಲ್ಲಿ ನನ್ನ ತೀರ್ಮಾನ ತೆಗೆದುಕೊಳ್ಳುವ ಆತುರದಲ್ಲಿಲ್ಲ. ಜನಗಳನ್ನು ನಂಬುವುದು ನನ್ನ ಸ್ವಭಾವ. ಯಾರು ಮಾತಿಗೆ ತಪ್ಪುತ್ತಾನೋ ಸತ್ಯಕ್ಕೆ ದ್ರೋಹ ಬಗೆಯುತ್ತಾನೋ ಅವನು ಜನರ ವಿಶ್ವಾಸ ಕಳೆದುಕೊಳ್ಳುತ್ತಾನೆ. ಆದರೆ ನಿಮಗೊಂದು ವಿಚಾರ ಹೇಳಲೇಬೇಕು. ಸುಹ್ರವರ್ದಿಯವರ ನೆರವಿದ್ದುದರಿಂದ ಮಾತ್ರ ಕಲ್ಕತ್ತಾದಲ್ಲಿ ಶಾಂತಿ ಮೂಡಿಸಲು ನನಗೆ ಸಾಧ್ಯವಾಯಿತು.'

ಈ ಸಭೆ ನಡೆದ ಕೆಲವು ದಿನಗಳಲ್ಲೇ ಕಲ್ಕತ್ತಾದಲ್ಲಿ ಮತ್ತೆ ಕೋಮುಗಲಭೆ ಭುಗಿಲೆದ್ದಿತು. ಗಾಂಧೀಜಿಯವರನ್ನು ಭೇಟಿ ಮಾಡಲು ಬಂದ ಶರತ್‌ಚಂದ್ರ ಬೋಸರು 'ಹಿಂದೂ ಮಹಾಸಭೆಯವರು ಈ ಗಲಭೆಯನ್ನು ಪ್ರಚೋದನೆ ಮಾಡುತ್ತಿರುವವರು' ಎಂದು ತಿಳಿಸಿ, 'ಜನರ ಸಹಕಾರ ಪಡೆದು ಶಾಂತಿ ಸ್ಥಾಪನೆಗೆ ತಾವು ಪ್ರಯತ್ನಿಸುವುದಾಗಿ' ಆಶ್ವಾಸನೆ ನೀಡಿದರು.

ಆ ಸಂದರ್ಭದಲ್ಲಿ ಗಾಂಧೀಜಿ ಒಂದು ಕಠೋರ ನಿರ್ಧಾರ ತೆಗೆದುಕೊಂಡರು. ಕಲ್ಕತ್ತದಲ್ಲಿ ಶಾಂತಿ ನೆಲಸುವವರೆಗೆ ತಾವು ಉಪವಾಸ ಕೈಗೊಳ್ಳುವುದಾಗಿ ಘೋಷಿಸಿದರು. ಕಲ್ಕತ್ತದ ಎಲ್ಲ ಸಾರ್ವಜನಿಕ ಮುಖಂಡರೂ ಕೂಡಿಕೊಂಡು ಹಿಂದೂ-ಮುಸ್ಲಿಂ ಐಕ್ಯತೆಗಾಗಿ ಕೆಲಸ ಮಾಡಲು ನಿರ್ಧಾರ ಕೈಗೊಂಡರು. ಶಾಂತಿ ಸೈನಿಕರು ಗಲ್ಲಿಗಲ್ಲಿಗೂ ಹೋಗಿ ಶಾಂತಿ ಸಂದೇಶ ಸಾರಿದರು. ಮೂರು ದಿನಗಳ ಕಾಲ ಗಾಂಧಿಯವರ ಉಪವಾಸ ಮುಂದುವರೆಯಿತು. ಅವರ ದೇಹಸ್ಥಿತಿಯನ್ನು ಪರೀಕ್ಷಿಸುತ್ತಿದ್ದ ವೈದ್ಯರ ತಂಡ 'ಗಾಂಧಿಯವರು ಶಾಂತಿಯ ಕಾರಣದಿಂದ ನೀರು ಕುಡಿಯುತ್ತಿಲ್ಲ. ಯಥೇಚ್ಛವಾಗಿ ನೀರು ಕುಡಿಯದೆ ಹೋದರೆ ಅವರು ಆ್ಯಸಿಡಿಟಿಯಿಂದ ನರಳಬೇಕಾಗುತ್ತದೆ. ಇದರಿಂದ ದೇಹಕ್ಕೆ ಅಪಾಯ ಒದಗಲಿದೆ' ಎಂದು ತಮ್ಮ ಬುಲೆಟಿನ್‌ನಲ್ಲಿ ಜಾಹೀರುಗೊಳಿಸಿದರು. ಕಲ್ಕತ್ತ ನಗರದಲ್ಲಿ ಶಾಂತಿ ತರುವ ಪ್ರಯತ್ನ ಮುಂದುವರೆಯುತ್ತಿತ್ತಾದರೂ ಜನತೆಯ ಮನಸ್ಸಿನಲ್ಲಿ ತಳಮಳ ಹೆಚ್ಚುತ್ತಾ ಬಂತು. ಸೆಪ್ಟೆಂಬರ್ ೬ನೇ ತಾರೀಖು (೧೯೪೭) ಪ್ರಾರ್ಥನಾ ಸಭೆ ನಡೆಯುತ್ತಿರುವಾಗ ವಿವಿಧ ಗುಂಪುಗಳಲ್ಲಿ ಬಂದ ಜನ ತಾವು ತಂದಿದ್ದ ಕತ್ತಿ, ಚಾಕು, ಕೊಡಲಿ, ಸ್ಟೆನ್‌ಗನ್, ಬಂದೂಕು, ಹಾರೆ, ಪಿಸ್ತೂಲು, ಹ್ಯಾಂಡ್‌ಗ್ರೆನೇಡ್, ಲಾಠಿಗಳು, ಕಬ್ಬಿಣದ ಬಡಿಗೆಗಳು ಎಲ್ಲವನ್ನೂ ಗಾಂಧಿಯವರ ಮುಂದೆ ಇಟ್ಟು ಕೈ ಮುಗಿದರು. ಗಾಂಧೀಜಿ ಉಪವಾಸವನ್ನು ಕೊನೆಗಾಣಿಸಿದರು.

ಗಾಂಧೀಜಿ ಮಾತನಾಡುತ್ತಾ ಜನ ಮತ್ತೆ ಗಲಭೆ ನಡೆಸುವುದಿಲ್ಲವೆಂದು ನನಗೆ ಆಶ್ವಾಸನೆ ಇತ್ತಿದ್ದಾರೆ. ಕಲ್ಕತ್ತದಲ್ಲಿ ಶಾಶ್ವತವಾಗಿ ಶಾಂತಿ ನೆಲೆಸುವಂತೆ ನೋಡಿಕೊಳ್ಳುವುದಾಗಿ ಜನನಾಯಕರು ಪಣತೊಟ್ಟಿದ್ದಾರೆ. ಆದರೆ ಕಲ್ಕತ್ತದಲ್ಲಿ ಮತ್ತೆ ಕೋಮು ಗಲಭೆ ನಡೆಯುವುದಾದರೆ ನಾನು ಅದನ್ನು ಅಸಹಾಯಕನಂತೆ ನೋಡಿಕೊಂಡು ಇರಲಾರೆ. ನಾನು ಆಮರಣಾಂತ ಉಪವಾಸ ಕೈಗೊಂಡು, ಅದನ್ನು ಕೊನೆಗಾಣಿಸಲು ಪ್ರಯತ್ನಿಸುತ್ತೇನೆ. ಆ ಪ್ರಯತ್ನದಲ್ಲಿ ನನ್ನ ಅಸು ನೀಗಲೂ ನಾನು ಹಿಂಜರಿಯುವುದಿಲ್ಲ ಎಂದರು. ಈ ಘಟನೆಯ ನಂತರ ಕಲ್ಕತ್ತದಲ್ಲಿ ಈ ಪ್ರಮಾಣದ ಕೋಮುಗಲಭೆ ಮತ್ತೆ ಮರುಕಳಿಸಲಿಲ್ಲ.

**ಎಚ್. ಎಸ್. ದೊರೆಸ್ವಾಮಿ**
ನಂ. ೧೫೬೩, ೩೯ನೇ 'ಎಫ್' ಕ್ರಾಸ್, 'ಟಿ' ಬ್ಲಾಕ್, ಜಯನಗರ,
ಬೆಂಗಳೂರು - ೫೬೦ ೦೪೧

# ದಾಮ-ದೂಮ

**ನಾ**ಲ್ಕು ದಶಕಗಳ ಹಿಂದೆ ಸಂಪರ್ಕ ಸಾಧನಗಳೇ ಇಲ್ಲದ ಕಾಲದಲ್ಲಿ ಮಲೆನಾಡಿನ ಅಜ್ಜನ ಮನೆ ಹೂವಿನಹಳ್ಳಿ ಒಂಟಿ ದ್ವೀಪದಂತೆ ಇತ್ತು. ಶಿರ್ಶಿ ಪೇಟೆಯಿಂದ ಬಹಳ ದೂರವಿರದಿದ್ದರೂ ಕಾಡಿನ ಮಧ್ಯ ಹಾದುಬರುತ್ತಿದ್ದ ಅಂಕು-ಡೊಂಕು, ಏರು-ತಗ್ಗಿನ ರಸ್ತೆಯಿಂದಾಗಿ ಜನ ಸಂಪರ್ಕವೂ ಕಡಿಮೆಯೇ! ಈ ಕಗ್ಗಾಡಿನ ಮಧ್ಯದ ಹೂವಿನಹಳ್ಳಿಯ ಅಜ್ಜನ ಮನೆಯಲ್ಲಿ ನಮಗೆ ಮನರಂಜನೆ ಒದಗಿಸುತ್ತಿದ್ದವರು ಮುಕ್ರಿ ಆಳುಗಳು.

ಅಜ್ಜನ ಮನೆಯ ಗೇರು-ಮಾವಿನ ಮಧ್ಯದಲ್ಲಿ ದೊಡ್ಡದಾದ ಮುಕ್ರಿ ಆಳುಗಳ ಗುಡಿಸಲು ಇತ್ತು. ಐವತ್ತಕ್ಕೂ ಹೆಚ್ಚು ಮುಕ್ರಿ ಆಳುಗಳು, ಅವರ ಯಜಮಾನ ಗಿಡ್ಡಗೌಡ ಅದರಲ್ಲಿ ವಾಸಿಸುತ್ತಿದ್ದರು. ಮುಕ್ರಿ ಆಳುಗಳೆಂದರೆ ಹಾಲಕ್ಕಿ ಗೌಡರ ಹಾಗಿನ ಒಂದು ಜನಾಂಗ. ಇವರ ಮೂಲ ಊರು ಕುಮಟಾ, ಹೊನ್ನಾವರ ಅಂದರೆ ಘಟ್ಟದ ಕೆಳಗಿನವರು. ಘಟ್ಟ ಎಂದರೆ ದೇವಿಮನೆ ಘಟ್ಟ, ಶಿರ್ಶಿ-ಕುಮಟಾ ಮಧ್ಯದ ಕಡಿದಾದ ಪರ್ವತ ಭಾಗ. ಇರುವೆಯಂತೆ ಹರಿಯುವ ಲಟಕಾಸಿ ಬಸ್ಸಿನಲ್ಲಿ ಕುಮಟಾದಿಂದ ಶಿರ್ಶಿಗೆ ಬರುವುದು ಭಾರೀ ಸಾಹಸದ ಕೆಲಸವೇ! ಮಧ್ಯ ಮಣ್ಕೆ ಹೊಳೆ ದಾಟಬೇಕು.

ಈ ಮುಕ್ರಿ ಆಳುಗಳು ಮುಗ್ಧರು, ಬಡವರು, ಅಶಿಕ್ಷಿತರು. ಗಂಡಸರು ಒಂದು ಲಂಗೋಟಿ ಹಾಕಿಕೊಂಡು, ಚಳಿ-ಮಳೆಗೆ ಕಂಬಳಿ ಕೊಪ್ಪೆ ಹಾಕಿಕೊಂಡು, ಸೊಂಟಕ್ಕೆ ಕತ್ತಿ ಸಿಕ್ಕಿಸಿಕೊಂಡು ಸದಾ ಎಲೆ-ಅಡಿಕೆ-ತಂಬಾಕು ತಿಂದು, ಕಪ್ಪು-ಕೆಂಪು ಬಣ್ಣದ ಹಲ್ಲು-ಬಾಯಿ ಬಿಟ್ಟು ನಗುತ್ತಾ ಇರುವವರು. ಹೆಂಗಸರು ಕೆಂಪು-ಕಪ್ಪು-ಕಂದು ಚೌಕಳಿ ಸೀರೆಯನ್ನು ಉಡುತ್ತಿದ್ದರು. ಅದರ ಸೆರಗು ಕುತ್ತಿಗೆ ಹಾಯ್ದು ಎದೆ ಮುಚ್ಚಬೇಕಷ್ಟೆ. ರವಿಕೆ ತೊಡುತ್ತಿರಲಿಲ್ಲ. ಆದರೆ ರಾಶಿ-ರಾಶಿ ಕೆಂಪು-ಕಪ್ಪು-ಹಳದಿ-ನೀಲಿ ಮಣಿಗಳ ರಾಶಿ ರಾಶಿ ಸರಗಳು ಅವರ ಸೌಂದರ್ಯವನ್ನು ಹೆಚ್ಚಿಸುತ್ತಿತ್ತು. ಮರ್ಯಾದೆಯನ್ನೂ ಮುಚ್ಚುತ್ತಿತ್ತು. ತಲೆಕೂದಲ ಗಂಟು ಹಾಕಿಕೊಂಡು ಅದಕ್ಕೆ ಮಲ್ಲಿಗೆ, ಅಬ್ಬಲಿಗೆ ಹೂವು ಮುಡಿಯಲೇಬೇಕು. ಯಾವ ಹೂವೂ ಸಿಗದಿದ್ದರೆ ಕೊನೆಗೆ ಚೆಂಡು ಹೂವಾದರೂ ಸರಿ. ಆದರೆ ಈ ಮುಕ್ರಿ ಹೆಂಗಸರು ಹೆಚ್ಚಾಗಿ ಘಟ್ಟದ ಕೆಳಗಿನ ತಮ್ಮ ಬಿಡಾರದಲ್ಲೇ ಮಕ್ಕಳ ಜೊತೆ ಇರುತ್ತಿದ್ದರು. ಅವರ ಗಂಡಂದಿರು ಮಾತ್ರ ಮಲೆನಾಡಿನ ಹಳ್ಳಿಗಳಲ್ಲಿ ಕೆಲಸ ಮಾಡುತ್ತ ೩-೪ ತಿಂಗಳಿಗೊಮ್ಮೆ ಊರಿಗೆ ಹೋಗಿಬರುತ್ತಿದ್ದರು.

ಶಿರ್ಶಿ ಮಾರಿಕಾಂಬಾ ಜಾತ್ರೆಗೆ ಹೆಚ್ಚಾಗಿ ಈ ಹೆಂಗಸರು ಬರುತ್ತಿದ್ದರು. ಹೊಸದಾಗಿ ಮದುವೆಯಾದ ಆಳುಗಳು ಗಿಡ್ಡಗೌಡನ ದೊಡ್ಡ ಬಿಡಾರದ ಸ್ವಲ್ಪ ದೂರದಲ್ಲಿ ಪುಟ್ಟ ಗುಡಿಸಲು ಹಾಕಿಕೊಂಡು ಒಂದೆರಡು ವರ್ಷ ಇರುತ್ತಿದ್ದರು. 'ಹನಿಮೂನ್' ಮುಗಿದ ಮೇಲೆ ಹೆಂಡತಿ ಘಟ್ಟದ ಕೆಳಗೆ, ಗಂಡ ಗೌಡನ ದೊಡ್ಡ ಬಿಡಾರ ಸೇರುತ್ತಿದ್ದರು.

ಈ ಮುಗ್ಧ ಜನರ ಹೆಸರು ಇವು- ಕಾಳ, ಬೀರ, ಮಾರ, ಜಟ್ಟಿ, ಗಣಪ, ದುಗ್ಗ, ತಿಮ್ಮ, ಪಟ್ಣ, ನಾಗ, ದಾಮ-ದೂಮ... ಗಂಡಸರಾದರೆ. ಹೆಂಗಸರ ಹೆಸರುಗಳು ನಾಗಿ, ತಿಮ್ಮಿ, ದುಗ್ಗಿ, ಬೀರಿ, ಕಾಳಿ, ಕನ್ನೆ, ಮಾರಿ, ದೇವಿ.... ಈ ಆಳುಗಳು ಮತ್ತು ನಮ್ಮ ಅಜ್ಜ-ಅಜ್ಜಿಯರ ನಡುವೆ ನಡೆದ ಘಟನೆಗಳು ಎಷ್ಟು ಮಜವಾಗಿರುತ್ತಿತ್ತು ಎಂದರೆ...

ಒಂದು ದಿನ ದಾಮ ಬಂದು ಅಜ್ಜಿಯ ಬಳಿ 'ಚಾ' ಬೇಡಿದ. ಅಜ್ಜಿ ''ಕೊಡುತ್ತೇನೆ. ಸ್ವಲ್ಪ ಅಟ್ಟಕ್ಕೆ ಏಣಿ ಹಾಕು'' ಎಂದರು. ಅಟ್ಟ ಅಂದರೆ ಅಂಗಳದಲ್ಲಿ ಅಡಿಕೆ ಒಣಗಿಸಲು ಮಾಡಿದ, ಮರದ ಕಂಬಗಳ ಮೇಲೆ ಹಾಕಿದ ಅಡಿಕೆ ದಬ್ಬೆಗಳ ಚಪ್ಪರ. ಅರ್ಧ ಗಂಟೆಯ ನಂತರ ಬೆವರು ಸುರಿಸುತ್ತಾ ಮನೆಯ ಹಿಂದೆ ಬಂದ. ಅಜ್ಜಿ ಚಾ ಕೊಡುವ ಮೊದಲು ಈ ದಾಮ ಸುಳ್ಳು ಹೇಳುತ್ತಿಲ್ಲ ಅಂತ ಖಾತ್ರಿಮಾಡಿಕೊಳ್ಳಲು ಹೊರಬಂದು ನೋಡಿದರೆ ಏಣೀನೇ ಕಾಣುತ್ತಿಲ್ಲ. ''ಏ ದಾಮ, ಏಣಿ ಎಲ್ಲೋ ?'' ಅಂದರೆ ''ಅಟ್ಟದ ಮೇಲೆ'' ಅಂದ ಮುಗ್ಧವಾಗಿ. ''ಯಾಕೋ ಅಲ್ಲಿ ಹಾಕಿದೆ ?'' ಅಂದರೆ ''ನೀವೇ ಅಟ್ಟಕ್ಕೆ ಏಣಿ ಹಾಕು ಅಂದ್ರಲ್ಲಾ'' ಅನ್ನಬೇಕೇ ? ಅಜ್ಜಿ ಹೇಳಿದ್ದು ಅಟ್ಟ ಹತ್ತಲು ಏಣಿ ಹಾಕು ಅಂತ. ''ಏಣಿ ಚಾಚು'' ಅನ್ನಬೇಕಾಗಿತ್ತಂತೆ. ಯಾರಾದರೂ ಏಣಿ ಕದ್ದುಕೊಂಡು ಹೋದಾರು ಅಂತ ಅಜ್ಜಿ ಹೀಗೇ ಹೇಳಿದ್ದಾರೆ ಅಂತ ಈ ದಾಮ ಅಂದುಕೊಂಡನಂತೆ. ಹೇಗೋ ಕಂಬ ಹತ್ತಿ ಅಟ್ಟದ ಮೇಲೆ ಹೋಗಿ ಈ ಏಣಿಯನ್ನು ಮೇಲೆ ಎಳೆದುಕೊಂಡಿದ್ದ. ಮತ್ತೆ ಏಣಿ ಅಟ್ಟದಿಂದ ಇಳಿಸಿ, ಅಟ್ಟಕ್ಕೆ ಚಾಚು ಅಂತ ಹೇಳಿ ಚಾ ತಿಂಡಿ ಕೊಟ್ಟು ಕಳಿಸಿದಾಗ ದಾಮ - ಅಜ್ಜಿ ಇಬ್ಬರಿಗೂ ಸುಸ್ತು.

ಇನ್ನೊಮ್ಮೆ ಮಳೆಗಾಲದ ನಡುರಾತ್ರಿ ದೂಮ ಬಂದು 'ಹೆಗಡೇರೆs' ಅಂತ ಕೂಗುತ್ತಿದ್ದಾನೆ. ಏನಾಯ್ತೋ ? ಅಂತ ಅಜ್ಜ-ಅಜ್ಜಿ ಗಾಬರಿಯಿಂದ ಬಂದು ನೋಡಿದರೆ ಕೈಯಲ್ಲಿ ಒಂದು ಹಳೆಯ ಲಾಂಟೀನು ಹಿಡಿದು ನಿಂತಿದ್ದಾನೆ. ''ಏನು ಬೇಕು ?'' ಅಂದರೆ ''ನಾಲ್ಕು ಬೆಂಕಿಕಡ್ಡಿ ಕೊಡಿ. ಚಳಿ, ಒಲೆಗೆ ಬೆಂಕಿ ಹಾಕಲು'' ಅನ್ನುತ್ತಿದ್ದಾನೆ. ''ಅದಕ್ಕಾಗಿ ಈ ಮಳೆ ಸುರಿಯುವ ನಡುರಾತ್ರಿಯಲ್ಲಿ ಬಿಡಾರದಿಂದ ಬಂದ್ಯಾ ? ಈ ಲ್ಯಾಂಟೀನು ದೀಪದಿಂದಲೇ ಬೆಂಕಿ ಹತ್ತಿಸಬಹುದಾಗಿತ್ತಲ್ಲ!'' ಅಂದರೆ ಮುಗ್ಧವಾಗಿ ನಗುತ್ತ ''ಹೌದ್ರಾ ! ದೀಪ ಅಂದ್ರೆ ಬೆಂಕಿ ಅಲ್ರಾ ?'' ಅನ್ನಬೇಕೇ ?

ಒಮ್ಮೆ ಅಜ್ಜ ಬೆಟ್ಟದಿಂದ ಹುಲ್ಲು ಹೊರೆ ತರಲು ದಾಮ-ದೂಮರನ್ನು ಕಳಿಸಿದ. ಎರಡು ಗಂಟೆ ಆದ್ರೂ ಅವರು ತಿರುಗಿ ಬರಲೇ ಇಲ್ಲ. ಅಜ್ಜ ಹೋಗಿ ನೋಡಿದರೆ ಇಬ್ಬರೂ ಒಂದು ಕಡೆ ಕೂತಿದ್ದಾರೆ. ಹಳ್ಳಿಗೆ ಬಯಲಾಟಕ್ಕೆ ಬಂದವರು ಒಡೆದ ಮೃದಂಗವನ್ನು ಅಲ್ಲಿ ಬಿಸಾಕಿ ಹೋಗಿದ್ದರು. ದಾಮ ಮೃದಂಗದ ಒಂದು ಕಡೆಯಿಂದ, ದೂಮ ಇನ್ನೊಂದು ಕಡೆಯಿಂದ ಅದರೊಳಗೆ ಏನಿದೆ ಅಂತ ನೋಡಲು ಕೈ ಹಾಕಿದ್ದಾರೆ. ಒಬ್ಬರಿಗೆ ಇನ್ನೊಬ್ಬರ ಕೈ ಸಿಕ್ಕಿದೆ. ದಾಮ ''ದೂಮ, ಯಾರೋ ನನ್ನ ಕೈ ಹಿಡ್ಕೊಂಡಿದ್ದಾರೆ ಕಾಣ್ಲಾ'' ಅಂತ, ದೂಮ ''ಹೌದೋ, ನನ್ನ ಕೈಯನ್ನೂ ಯಾರೋ ಹಿಡ್ಕೊಂಡಿದ್ದಾರೆ'' ಅಂತ ಅಲ್ಲೇ ಕುಳಿತಿದ್ದಾರೆ. ಇಬ್ಬರೂ ಬಹಳ ವಿಚಾರ ಮಾಡಿ ಹೆಗಡೇರ ತೋಟಕ್ಕೆ

೨೫ನೇ ಪುಟಕ್ಕೆ

ವಿಜಯಾ ಶ್ರೀಧರ್



# ಕರ್ನಾಟಕದ ಮಧ್ಯಮಗತಿ ಬಜೆಟ್

ಡಾ|| ಟಿ. ಆರ್. ಚಂದ್ರಶೇಖರ

**ಬಜೆಟ್ಟಿನ ಸಾತ್ವಿಕ ಗುಣಗಳು**

ಪ್ರಥಮದಲ್ಲಿ ಪ್ರಸ್ತುತ ಬಜೆಟ್ಟಿನ ಕೆಲವು ವಿಶಿಷ್ಟ ಸಂಗತಿಗಳನ್ನು ಗುರುತಿಸಲಾಗಿದೆ.

* ಈ ಬಜೆಟ್ಟಿನ ಗಾತ್ರ ರೂ. ೩೪, ೬೧೫ ಕೋಟಿ.
* ರಾಜಸ್ವ ಖಾತೆಯಲ್ಲಿ ಸತತವಾಗಿ ಎರಡನೆಯ ವರ್ಷ ಕೊರತೆಯನ್ನು ನೀಗಿ ಆಧಿಕ್ಯವನ್ನು ಸಾಧಿಸಲಾಗಿದೆ.
* ವೇತನ ಮತ್ತು ಪಿಂಚಣಿಗಳನ್ನು ಒಳಗೊಂಡ ಅಭಿವೃದ್ಧಿಯೇತರ ವೆಚ್ಚದ ಪ್ರಮಾಣವು ರಾಜಸ್ವ ಖಾತೆಯ ಒಟ್ಟು ವೆಚ್ಚದ ಶೇ. ೬೨ ರಷ್ಟಿದ್ದುದು ೨೦೦೪-೦೫ರಲ್ಲಿ ಶೇ. ೪೫ಕ್ಕೆ ಇಳಿದಿದೆ.
* ಈ ಬಜೆಟ್ಟಿನ ಒಟ್ಟು ಜಮೆಯಲ್ಲಿ (ರೂ. ೩೪,೫೯೨ ಕೋಟಿ) ರಾಜ್ಯವು ಸ್ವಂತ ಸಂಗ್ರಹಿಸಿದ ತೆರಿಗೆ ಪ್ರಮಾಣ ಶೇ. ೫೨.
* ನಾಲ್ಕು ವರ್ಷಗಳ ಬರಗಾಲದ ನಂತರ ೨೦೦೪-೦೫ರಲ್ಲಿ ರಾಜ್ಯದ ಆಹಾರೋತ್ಪನ್ನವು ೧೦೮ ಲಕ್ಷ ಟನ್ ದಾಖಲೆ ಪ್ರಮಾಣಕ್ಕೇರಿದೆ.

ಸಾರ್ವಜನಿಕ ಹಣಕಾಸು ನಿರ್ವಹಣೆಯಲ್ಲಿ ರಾಜ್ಯ ಸರ್ಕಾರವು ಕಟ್ಟುನಿಟ್ಟಿನ ಶಿಸ್ತನ್ನು ಅನುಸರಿಸಿರುವುದು ಸ್ಪಷ್ಟವಾಗಿದೆ. ರಾಜಸ್ವ ಖಾತೆಯಲ್ಲಿ ಕೊರತೆಯನ್ನು ಅಳಿಸಿಹಾಕಿರುವುದು ದೊಡ್ಡ ಸಾಧನೆಯಾಗಿದೆ. ಸಾಲದ ನಿರ್ವಹಣೆಯಲ್ಲೂ ಸಿದ್ಧರಾಮಯ್ಯ ಅವರು ಶಿಸ್ತನ್ನು ಮೆರೆದಿದ್ದಾರೆ.

**ಸುಭದ್ರ-ಸದೃಢ ಆರ್ಥಿಕತೆ**

ಸರ್ಕಾರ ಮಂಡಿಸಿರುವ ೨೦೦೪-೦೫ನೆಯ ಸಾಲಿನ ಆರ್ಥಿಕ ಸಮೀಕ್ಷೆಯಿಂದ ರಾಜ್ಯದ ಆರ್ಥಿಕತೆಯು ಸದೃಢವಾಗಿರುವುದು ಮತ್ತು ಸುಭದ್ರವಾಗಿರುವುದು ತಿಳಿದುಬರುತ್ತದೆ. ರಾಜ್ಯದ ಒಟ್ಟು ದೇಶೀಯ ಉತ್ಪನ್ನದ ನೈಜ ಬೆಳವಣಿಗೆ ಪ್ರಮಾಣ ೨೦೦೪-೦೫ರಲ್ಲಿ ಶೇ. ೭.೮ ಎಂದು ಅಂದಾಜು ಮಾಡಲಾಗಿದೆ. ಕೃಷಿಯನ್ನು ಒಳಗೊಂಡಂತೆ ಪ್ರಾಥಮಿಕ ವಲಯದ ಬೆಳವಣಿಗೆ ಗತಿ ವಾರ್ಷಿಕ ಶೇ. ೧೧.೨ರಷ್ಟಾಗಿದೆ. ಸತತವಾಗಿ ನಾಲ್ಕು ವರ್ಷ ಬರವನ್ನು ಅನುಭವಿಸಿದ ಕರ್ನಾಟಕದ ಆಹಾರ ಉತ್ಪಾದನೆಯಲ್ಲಿ ೨೦೦೪-೦೫ರಲ್ಲಿ ಸ್ವಲ್ಪ ಚೇತರಿಕೆ ಕಂಡುಬಂದಿದೆ. ಕರ್ನಾಟಕದ ಆಹಾರೋತ್ಪನ್ನವು ೨೦೦೨-೦೩ನೆಯ ಸಾಲಿನಲ್ಲಿ ೧೦೦ ಲಕ್ಷ ಟನ್ ಗಡಿ ದಾಟಿತ್ತು. ಆದರೆ ಆ ನಂತರ ಬರಗಾಲದಿಂದಾಗಿ ಅದು ೧೦೦ ಲಕ್ಷ ಟನ್‌ಗಳಷ್ಟೂ ಆಗಲಿಲ್ಲ. ಸಂತೋಷದ ಸಂಗತಿಯೆಂದರೆ, ಅದು ೨೦೦೪-೦೫ರಲ್ಲಿ ೧೦೮ ಲಕ್ಷ ಟನ್‌ಗೇರಿದೆ.

> ಉಪ ಮುಖ್ಯಮಂತ್ರಿಗಳೂ ಹಣಕಾಸು ಸಚಿವರೂ ಆಗಿರುವ ಸಿದ್ಧರಾಮಯ್ಯ ಅವರು ೨೦೦೫-೦೬ನೆಯ ಸಾಲಿನ ಬಜೆಟ್ಟು ಮಂಡಿಸುತ್ತಾ ಇದೊಂದು ಚಾರಿತ್ರಿಕ ಬಜೆಟ್ಟೆಂದು ಕರೆದಿದ್ದಾರೆ. ನಮ್ಮ ರಾಜ್ಯದಲ್ಲಿ ಅತಿ ಹೆಚ್ಚಿನ ಬಜೆಟ್ಟುಗಳನ್ನು (ಏಳು) ಮಂಡಿಸಿದ ಹಣಕಾಸು ಮಂತ್ರಿಗಳೆಂಬ ಕೀರ್ತಿಗೂ ಅವರು ಭಾಜನರಾಗಿದ್ದಾರೆ. ಸಮ್ಮಿಶ್ರ ಸರ್ಕಾರದ ಎರಡನೆಯ ಬಜೆಟ್ಟು ಇದಾಗಿದೆ. ಈ ಬಜೆಟ್ಟಿನ ಚಾರಿತ್ರಿಕತನವು ಇಲ್ಲಿಗೆ ಮುಗಿದು ಹೋಗುತ್ತದೆ. ಏಕೆಂದರೆ ಅಂತರಂಗದಲ್ಲಿ ಅದೊಂದು ಮಧ್ಯಮಗತಿ-ಮಾಮೂಲಿ ಬಜೆಟ್ಟಾಗಿದೆ. ಪ್ರಸ್ತುತ ಪ್ರಬಂಧದಲ್ಲಿ ೨೦೦೫-೦೬ನೆಯ ಸಾಲಿನ ಬಜೆಟ್ಟು ಹೇಗೆ ಮಧ್ಯಮಗತಿ-ಹೇಗೆ ಮಾಮೂಲಿ ಎಂಬುದನ್ನು ಕುರಿತಂತೆ ಚರ್ಚಿಸಲಾಗಿದೆ.

ಕರ್ನಾಟಕವು ೨೦೦೪-೦೫ನೆಯ ಸಾಲಿನಲ್ಲಿ ಕೃಷಿಗೆ ಸಂಬಂಧಿಸಿದಂತೆ ಅದ್ಭುತವನ್ನೇ ಸಾಧಿಸಿದೆ. ಬರಗಾಲದ ದವಡೆಯಿಂದ ಹೊರಬಂದಿರುವುದನ್ನು ಇದು ಸೂಚಿಸುತ್ತದೆ.

ಕರ್ನಾಟಕವು ೨೦೦೦-೦೧ನೆಯ ಸಾಲಿನಲ್ಲಿ ಆಹಾರ ಉತ್ಪನ್ನದಲ್ಲಿ ೧೦೦ ಲಕ್ಷ ಟನ್‌ಗಳ ಗಡಿ ದಾಟಿ ೧೦೬ ಲಕ್ಷ ಟನ್‌ಗಳಷ್ಟು ಉತ್ಪಾದಿಸಿತ್ತು. ಆದರೆ ತದನಂತರ ಅದು ೨೦೦೧-೦೨ರಲ್ಲಿ ೮೬.೯೭ ಲಕ್ಷ ಟನ್‌ಗಳಿಗೆ, ೨೦೦೨-೦೩ರಲ್ಲಿ ೬೩.೩೧ ಲಕ್ಷ ಟನ್‌ಗಳಿಗೆ ಮತ್ತು ೨೦೦೩-೦೪ರಲ್ಲಿ ೬೭.೧೭ ಲಕ್ಷ ಟನ್‌ಗಳಿಗೆ ಕುಸಿದಿತ್ತು. ಬರಗಾಲವು ಕೃಷಿಯ ಮೇಲೆ ಉಂಟುಮಾಡಿದ್ದ ದುಷ್ಪರಿಣಾಮವನ್ನು ಇದರಿಂದ ಊಹಿಸಿಕೊಳ್ಳಬಹುದು. ಆದರೆ ೨೦೦೪-೦೫ರಲ್ಲಿ ಅದು ೧೦೮.೨೮ ಲಕ್ಷ ಟನ್‌ಗಳನ್ನು ಉತ್ಪಾದಿಸಿ ಒಂದು ರೀತಿಯಲ್ಲಿ ದಾಖಲೆ ನಿರ್ಮಿಸಿದೆ. ಕಬ್ಬನ್ನು ಬಿಟ್ಟರೆ ಕರ್ನಾಟಕವು ಹತ್ತಿ ಮತ್ತು ಎಣ್ಣೆಕಾಳುಗಳಿಗೆ ಸಂಬಂಧಿಸಿದಂತೆಯೂ ಅಧಿಕ ಉತ್ಪಾದನೆ ಮಾಡಿದೆ. ಕರ್ನಾಟಕದ ಆರ್ಥಿಕತೆ ಸದೃಢ-ಸುಭದ್ರವಾಗಿರುವುದಕ್ಕೆ ಇದಕ್ಕಿಂತ ಮತ್ತೇನು ಸಾಕ್ಷಿ ಬೇಕು ? ಆಹಾರೋತ್ಪನ್ನವು ೨೦೦೩-೦೪ ಮತ್ತು ೨೦೦೪-೦೫ರ ಅವಧಿಯಲ್ಲಿ ಶೇ. ೩೭.೯೭ರಷ್ಟು ಏರಿಕೆಯಾಗಿದೆ. ಕೈಗಾರಿಕಾ ರಂಗದ ಬೆಳವಣಿಗೆ ಪ್ರಮಾಣವೂ ಉತ್ತಮವಾಗಿದೆ.

**ಅಭಿವೃದ್ಧಿ ಚಿಂತನೆ**

ಈ ಬಜೆಟ್ಟಿನಲ್ಲಿ ಎಸ್. ಸಿದ್ಧರಾಮಯ್ಯ ಅವರು

ಅಭಿವೃದ್ಧಿ ಕುರಿತಂತೆ ಕೆಲವು ಸೈದ್ಧಾಂತಿಕ ಸಂಗತಿಗಳನ್ನು ಚರ್ಚಿಸಿದ್ದಾರೆ. ಅಭಿವೃದ್ಧಿಯನ್ನು ನಾವು ಪರಿಭಾವಿಸಿಕೊಂಡಿರುವ ಪರಿಯನ್ನು ಇಲ್ಲಿ ವಿವರಿಸಿದ್ದಾರೆ. ಕರ್ನಾಟಕ ರಾಜಕಾರಣದ ಕೆಲವು ಸೂಕ್ಷ್ಮ ಹಾಗೂ ವಿಶಿಷ್ಟ ಸಂಗತಿಗಳನ್ನು ಇಲ್ಲಿ ಗುರುತಿಸಬಹುದಾಗಿದೆ. ದುರ್ಬಲರ, ದಲಿತರ, ಕೆಳವರ್ಗಗಳ ಪದತಲದಿಂದ ಅಭಿವೃದ್ಧಿಯ ಆರಂಭ ನಡೆಯಬೇಕೆಂಬುದು ಅವರ ಅಭಿವೃದ್ಧಿ ಮೀಮಾಂಸೆಯಾಗಿದೆ. ಅವರ ಪ್ರಕಾರ ''ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ದುರ್ಬಲರಾಗಿರುವ ಜನಸಮುದಾಯಗಳು ಗೌರವಯುತವಾಗಿ ಜೀವನ ಸಾಗಿಸಲು ಸಾಧ್ಯವಾಗುವ ಪರಿಯೆ ಅಭಿವೃದ್ಧಿ'' ಮುಂದುವರಿದು ಅವರು ಹೀಗೆ ಹೇಳಿದ್ದಾರೆ: ''ಕೃಷಿ ಆಧರಿತ ಕೆಳವರ್ಗದ ಜನತೆಯ ಆದಾಯ ಹೆಚ್ಚಾಗುವ ಪ್ರಕ್ರಿಯೆಯೇ ಅಭಿವೃದ್ಧಿ.''

ಅಭಿವೃದ್ಧಿಯೆಂದರೆ ವರಮಾನವು ಅಖಂಡವಾಗಿ ವರ್ಧನೆಯಾಗುವುದಲ್ಲ. ಅವರ ಪ್ರಕಾರ ಕೆಳವರ್ಗದ ಆದಾಯವು ವರ್ಧಿಸುವ ಪರಿಯು ಅಭಿವೃದ್ಧಿ. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ದುರ್ಬಲರಾಗಿರುವ ಜನಸಮುದಾಯಗಳೆಂದರೆ ಅದರಲ್ಲಿ ಹಿಂದುಳಿದ ವರ್ಗಗಳು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಜನತೆ ಸೇರುತ್ತಾರೆ. ಈ ವರ್ಗಗಳ ನೆಲೆಯಿಂದ ಅಭಿವೃದ್ಧಿಯನ್ನು ಪರಿಭಾವಿಕೊಳ್ಳಬೇಕೆಂಬುದು ಅವರ ವಿಚಾರ ಪ್ರಣಾಳಿಕೆಯಾಗಿದೆ.

ಇತ್ತೀಚೆಗೆ ಮಂಗಳೂರಿನಲ್ಲಿ ನಡೆದ ಸಂಘಪರಿವಾರದ ಪ್ರತಿನಿಧಿಗಳ ಸಭೆಯಲ್ಲಿ ತೆಗೆದುಕೊಂಡ ಪರಮಾರ್ಥವಾದಿ ರಾಜಕಾರಣದ ನಿರ್ಣಯಗಳ ಹಿನ್ನೆಲೆಯಲ್ಲಿ ಸಿದ್ಧರಾಮಯ್ಯ ಅವರ ಅಭಿವೃದ್ಧಿ ಮೀಮಾಂಸೆಯ ಮಹತ್ವವನ್ನು ನಾವು ಪರಿಗಣಿಸಬೇಕಾಗುತ್ತದೆ. ಪರಮಾರ್ಥ ರಾಜಕಾರಣವು ಯಾವ ವರ್ಗಗಳ ಹಿತವನ್ನು ಪ್ರತಿನಿಧಿಸುತ್ತದೆ ಮತ್ತು ಸಿದ್ಧರಾಮಯ್ಯ ಅವರ ಅಭಿವೃದ್ಧಿ ಮೀಮಾಂಸೆಯು ಯಾವ ಜನ ಸಮುದಾಯಗಳ ಹಿತಾಸಕ್ತಿಯನ್ನು ಪ್ರತಿನಿಧಿಸುತ್ತದೆ ಎಂಬುದರ ಭಿನ್ನತೆಯನ್ನು ನಾವು ಗುರುತಿಸಬೇಕಾಗುತ್ತದೆ. ಪರಮಾರ್ಥವಾದಿ ರಾಜಕಾರಣ ಮತ್ತು ಪದಾರ್ಥವಾದಿ ರಾಜಕಾರಣಗಳ ನಡುವಿನ ಸಂಘರ್ಷದ ನೆಲೆಯಲ್ಲಿ ನಾವು ಪ್ರಸ್ತುತ ಬಜೆಟ್ಟು ಮಂಡಿಸುತ್ತಿರುವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ತಮ್ಮ ಬಜೆಟ್ಟು ಭಾಷಣದಲ್ಲಿ ಇಂತಹ ಮಹತ್ವದ ಪ್ರಶ್ನೆಗಳನ್ನೆತ್ತಿರುವ ಸಿದ್ಧರಾಮಯ್ಯ ಅವರು ಅಭಿನಂದನೆಗೆ ಅರ್ಹರಾಗಿದ್ದಾರೆ.

**ಮಧ್ಯಮಗತಿ - ಶ್ರುತಿ**

ಅಭಿವೃದ್ಧಿಯನ್ನು ಸೈದ್ಧಾಂತಿಕವಾಗಿ ಜನಪರ ನೆಲೆಯಲ್ಲಿ ಸಿದ್ಧರಾಮಯ್ಯ ಅವರು ಪರಿಭಾವಿಸಿಕೊಂಡಿದ್ದಾರೆ. ಅವರಿಗೆ ಅಭಿನಂದನೆಗಳು ಸಲ್ಲಲೇಬೇಕು. ಕೃಷಿಯ ಬಗ್ಗೆ ಮಾತನಾಡುತ್ತ ಅವರು ತಮ್ಮ ಬಜೆಟ್ಟು ಭಾಷಣದಲ್ಲಿ ಒಣ ಭೂಮಿ ಬೇಸಾಯದ ಪ್ರಶ್ನೆ ಎತ್ತಿದ್ದಾರೆ. ಅವಕಾಶ ಸಿಕ್ಕಿದಾಗಲೆಲ್ಲ ಡಿ. ಎಂ. ನಂಜುಂಡಪ್ಪ ವರದಿ ಬಗ್ಗೆ ಮಾತನಾಡಿದ್ದಾರೆ. ಹಿಂದುಳಿದ ಹಾಗೂ ದಲಿತ ವರ್ಗಗಳ ಕಲ್ಯಾಣದ ಬಗ್ಗೆ ಕಾರ್ಯಕ್ರಮಗಳನ್ನು ಬಜೆಟ್ಟಿನಲ್ಲಿ ಹಮ್ಮಿಕೊಂಡಿದ್ದಾರೆ. ಆದರೆ ಅಭಿವೃದ್ಧಿಯನ್ನು ಅವರು ನಿರ್ವಚಿಸಿರುವ ನೆಲೆಯಲ್ಲಿ ಕಂಡು ಬರುವ ಹರಿತ ಹಾಗೂ ಮೊನಚು ಬಜೆಟ್ಟಿನ ಅಂತರಂಗದಲ್ಲಿ ಕಂಡುಬರುವುದಿಲ್ಲ. ರಾಜ್ಯದ ಒಟ್ಟು ಸಾಗುವಳಿ ಭೂಮಿಯಲ್ಲಿ ಒಣಭೂಮಿ ಬೇಸಾಯದ ಪ್ರಮಾಣ ಶೇ. ೭೦ ಎಂಬುದನ್ನು ಅವರು ಗುರುತಿಸಿದ್ದಾರೆ. ಒಣ ಭೂಮಿ ಬೇಸಾಯವೆಂದಾಕ್ಷಣವೇ ಅದು ದುರ್ಬಲರನ್ನು, ದಲಿತರನ್ನು, ಹಿಂದುಳಿದ ಪ್ರದೇಶವನ್ನು ಒಳಗೊಳ್ಳಲೇಬೇಕಾಗುತ್ತದೆ. ಈ ಬಜೆಟ್ಟಿನಲ್ಲಿ ಒಣ ಭೂಮಿ ಬೇಸಾಯದ ಬಗ್ಗೆ ನಿರ್ದಿಷ್ಟ ಕಾರ್ಯಕ್ರಮವಿಲ್ಲ. ಜಲಾನಯನ ಪ್ರದೇಶ ಅಭಿವೃದ್ಧಿಯ ಬಗ್ಗೆ ಉಲ್ಲೇಖಿಸಲಾಗಿದೆ. ಅದು ಕೇವಲ ಮಾಮೂಲಿ ಸಂಗತಿ.

ರಾಜ್ಯದಲ್ಲಿ ೬೨ಲಕ್ಷ ಭೂರಹಿತ ದಿನಗೂಲಿ ದುಡಿಮೆಗಾರರಿದ್ದಾರೆ. ಇವರಲ್ಲಿ ಶೇ. ೫೮.೧೯ರಷ್ಟು (೩೬.೧೩ ಲಕ್ಷ) ಮಹಿಳಾ ದಿನಗೂಲಿ ದುಡಿಮೆಗಾರರಿದ್ದಾರೆ. ಇವರಲ್ಲಿ

| ಕೃಷಿ ಉತ್ಪನ್ನ : ೨೦೦೦-೨೦೦೫<br>ಕೋಷ್ಟಕ-೧ | | | | | |
|---|---|---|---|---|---|
| ಬೆಳೆಗಳು | ೨೦೦೦-೦೧ | ೨೦೦೧-೦೨ | ೨೦೦೨-೦೩ | ೨೦೦೩-೦೪ | ೨೦೦೪-೦೫ |
| | (ಲಕ್ಷ ಟನ್‌ಗಳಲ್ಲಿ) | | | | |
| ಏಕದಳ ಧಾನ್ಯ | --- | ೭೯.೪೫ | ೬೦.೩೧ | ೬೦.೦೬ | ೯೯.೮೪ |
| ದ್ವಿದಳ ಧಾನ್ಯ | --- | ೭.೫೨ | ೭.೦೦ | ೭.೧೧ | ೮.೪೪ |
| ಆಹಾರ ಧಾನ್ಯ | ೧೦೬ | ೮೬.೯೭ | ೬೩.೩೧ | ೬೭.೧೭ | ೧೦೮.೨೮ |
| ಎಣ್ಣೆಕಾಳು | --- | ೧೦.೨೦ | ೧೧.೧೨ | ೧೧.೧೨ | ೧೮.೨೨ |
| ಕಬ್ಬು | --- | ೩೩೦.೧೭ | ೩೨೪.೭೯ | ೨೬೮.೦೦ | ೨೭೦.೦೦ |
| ಹತ್ತಿ (ಲಕ್ಷ ಬೇಲ್‌ಗಳಲ್ಲಿ) | --- | ೬.೧೨ | ೩.೬೭ | ೪.೯೬ | ೧೦.೪೧ |

ದುಡಿಮೆಯನ್ನು ಅರಸಿಕೊಂಡು ವಲಸೆ ಹೋಗುವವರಿದ್ದಾರೆ. ಸಿದ್ಧರಾಮಯ್ಯ ಅವರು ಮಂಡಿಸಿರುವ ಅಭಿವೃದ್ಧಿ ಮೀಮಾಂಸೆಯ ಕೇಂದ್ರಬಿಂದು ಇವರಾಗಿದ್ದಾರೆ. ಆದರೆ ಬಜೆಟ್ಟಿನಲ್ಲಿ ಇವರ ಬಗ್ಗೆ ನಿರ್ದಿಷ್ಟವಾದ ಕಾರ್ಯಕ್ರಮಗಳಿಲ್ಲ. ಆಂದೋಳನವಾದಿ-ಸಹ ಭಾಗಿತ್ವವಾದಿ ಯೋಜನೆಗಳು ಬಜೆಟ್ಟಿನಲ್ಲಿ ಇಲ್ಲ. ಬಜೆಟ್ಟು ಜನಪರವಾಗಿದೆ. ಆದರೆ ಅದು ಜನರನ್ನು ಒಳಗೊಳ್ಳುವ ರೀತಿಯಲ್ಲಿಲ್ಲ. ಈ ಕಾರಣದಿಂದಾಗಿಯೇ ಅದು ಮಧ್ಯಮಗತಿ ಬಜೆಟ್ಟು.

ಈ ಬಜೆಟ್ಟಿನಲ್ಲಿರುವ ತುಂಡು ತುಂಡಾದ, ಬಿಡಿ ಬಿಡಿಯಾದ, ಹರಿದು ಹಂಚಿ ಹೋಗಿರುವ ಕಾರ್ಯಕ್ರಮಗಳು ಗಣನೀಯವಾದ ರೀತಿಯಲ್ಲಿ ಸಿದ್ಧರಾಮಯ್ಯ ಅವರು ಯಾರನ್ನು ಗುರಿಯಿಟ್ಟುಕೊಂಡು ಅಭಿವೃದ್ಧಿಯನ್ನು ನಿರ್ವಚಿಸಿದ್ದಾರೋ ಅವರ ಬದುಕನ್ನು ಉತ್ತಮಪಡಿಸುವುದು ಸಾಧ್ಯವಿಲ್ಲ. ಸಿದ್ಧರಾಮಯ್ಯ ಅವರ ವಿಚಾರ ಪ್ರಣಾಳಿಕೆಯ ಆಶಯಗಳನ್ನು ಮೀರಿ ಬಜೆಟ್ಟು ಸಮಾಜದ ಪ್ರತಿಷ್ಠಿತ ಮೇಲುವರ್ಗಗಳ ಹಿತಗಳನ್ನು ಪೂರೈಸುವ ಸಾಧ್ಯತೆಯಿದೆ. ಬಜೆಟ್ಟಿನಲ್ಲಿನ ಆಶಯಗಳು ಕೂಲಿಕಾರರ, ದುಡಿಮೆಗಾರರ, ಮಹಿಳೆಯರ ಬದುಕಾಗಿ ಪರಿವರ್ತನೆಯಾಗುವಂತೆ ಕಾರ್ಯಕ್ರಮಗಳು ರೂಪು ತಳೆದಿಲ್ಲ.

**ಪ್ರಾದೇಶಿಕ ಅಸಮಾನತೆ**

ತಮ್ಮ ಬಜೆಟ್ ಭಾಷಣದಲ್ಲಿ ಹಣಕಾಸು ಮಂತ್ರಿಗಳು ಪ್ರಾದೇಶಿಕ ಅಸಮಾನತೆಗೆ ಸಂಬಂಧಿಸಿದ ಡಿ. ಎಂ. ನಂಜುಂಡಪ್ಪ ವರದಿಯನ್ನು ನಾಲ್ಕಾರು ಕಡೆ ಉಲ್ಲೇಖಿಸಿದ್ದಾರೆ. ಸಿದ್ಧರಾಮಯ್ಯ ಅವರು ಪರಿಭಾವಿಸಿಕೊಂಡಿರುವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯು ಪ್ರಸ್ತುತ ಬಜೆಟ್ಟನ್ನು ನಿರ್ದೇಶಿಸಿದ್ದರೆ, ಒಣ ಭೂಮಿ ಬೇಸಾಯದ ಬಗೆಗಿನ ಅವರ ಮಾತುಗಳು ಬಜೆಟ್ಟನ್ನು ರೂಪಿಸಲು ಮಾನದಂಡವಾಗಿದ್ದಿದ್ದರೆ ಹೈದರಾಬಾದ್-ಕರ್ನಾಟಕ ಪ್ರದೇಶದ ದುರ್ಬಲ ವರ್ಗಗಳ, ದಲಿತರ, ದುಡಿಮೆಗಾರರ ಹಿತಾಸಕ್ತಿಗಳನ್ನು ಕುರಿತಂತೆ ಕಾರ್ಯಕ್ರಮಗಳು ಬಜೆಟ್ಟಿನಲ್ಲಿ ಅಂತರ್ಗತವಾಗಬೇಕಾಗಿತ್ತು. ನಿಜ, ಹಣಕಾಸು ಮಂತ್ರಿಗಳು ಹೈದರಾಬಾದ್-ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಗೆ ಹೆಚ್ಚಿನ ಅನುದಾನವನ್ನು ೨೦೦೫-೦೬ನೆಯ ಸಾಲಿಗೆ ನೀಡಿದ್ದಾರೆ. ಆದರೆ ಸಮಸ್ಯೆಯೆಲ್ಲಿದೆಯೆಂದರೆ ಸಿದ್ಧರಾಮಯ್ಯ ಅವರು ಬಜೆಟ್ಟಿನಲ್ಲಿ ಮಂಡಿಸಿರುವ ಅಭಿವೃದ್ಧಿ ಮೀಮಾಂಸೆಯು ಮಂಡಳಿಗೆ ಅರ್ಥವಾಗುವುದಿಲ್ಲ. ಕಳೆದ ೧೪ ವರ್ಷಗಳ ಅದರ ಕಾರ್ಯವೈಖರಿಯಿಂದ ಇದು ಸ್ಪಷ್ಟವಾಗುತ್ತದೆ. ಕನಿಷ್ಠ ತೋರಿಕೆಗಾದರೂ ಮಂಡಳಿಯು ಕಳೆದ ೧೪ ವರ್ಷಗಳ ಕಾಲಾವಧಿಯಲ್ಲಿ ಒಮ್ಮೆಯಾದರೂ ಹೈದರಾಬಾದ್-ಕರ್ನಾಟಕ ಪ್ರದೇಶದ ದಿನಗೂಲಿ ದುಡಿಮೆಗಾರರ ಬಗ್ಗೆ, ಭೂರಹಿತ ಕೃಷಿ ದುಡಿಮೆಗಾರರ ಬಗ್ಗೆ, ಅವರ ವಲಸೆ ಬಗ್ಗೆ, ಶಾಲೆಯಿಂದ ಹೊರಗಿರುವ ಮಕ್ಕಳ ಬಗ್ಗೆ, ಕಾರ್ಯಕ್ರಮಗಳಿರಲಿ, ಒಂದು ಮಾತನ್ನೂ ಆಡಿಲ್ಲ! ಜನರ ಬಗ್ಗೆ ಅದು ಮಾತಾಡಿದ್ದು ಕಡಿಮೆ. ರಸ್ತೆ, ಸೇತುವೆ, ಶಾದಿಮಹಲುಗಳು, ಸಮುದಾಯ ಭವನಗಳ ನಿರ್ಮಾಣವನ್ನೇ ಅದು ಅಭಿವೃದ್ಧಿಯೆಂದು ಭಾವಿಸಿದೆ. ಈ ಪ್ರದೇಶದ ಮೂರು ಅತ್ಯಂತ ಹಿಂದುಳಿದ ತಾಲ್ಲೂಕುಗಳ ಸ್ಥಿತಿಯನ್ನು ಕುತೂಹಲಕ್ಕಾಗಿ ಕೋಷ್ಟಕ-೨ರಲ್ಲಿ ನೀಡಲಾಗಿದೆ.

ರಾಜ್ಯಮಟ್ಟದ ಅಭಿವೃದ್ಧಿ ಸೂಚಿಗಳಿಂದ ದೇವದುರ್ಗ (೧೭೫ನೆಯ ಸ್ಥಾನ), ಜೇವರ್ಗಿ (೧೭೪ನೆಯ ಸ್ಥಾನ) ಮತ್ತು ಯಾದಗಿರಿ (೧೬೨ನೆಯ ಸ್ಥಾನ) ತಾಲ್ಲೂಕುಗಳು ಎಷ್ಟು ದೂರದಲ್ಲಿವೆ, ಎಷ್ಟು ಪಾತಾಳದಲ್ಲಿವೆ ಎಂಬುದು ಕೋಷ್ಟಕದಿಂದ ಸ್ಪಷ್ಟವಾಗುತ್ತದೆ. ನಮ್ಮ ರಾಜ್ಯದಲ್ಲಿ ೨೦೦೧ರಲ್ಲಿ ಶೇ. ೪೦ಕ್ಕಿಂತ ಕಡಿಮೆ ಸಾಕ್ಷರತೆಯ ತಾಲ್ಲೂಕುಗಳೆಂದರೆ ದೇವದುರ್ಗ ಮತ್ತು ಯಾದಗಿರಿ. ಇವುಗಳನ್ನು 'ಶೈಕ್ಷಣಿಕ ದುಃಸ್ಥಿತಿಯ ಕೂಪ'ಗಳೆಂದು ಕರೆಯಬಹುದು. ಒಟ್ಟು ದುಡಿಮೆಗಾರರಲ್ಲಿ ದಿನಗೂಲಿ ಕಾರ್ಮಿಕರ ಪ್ರಮಾಣ ರಾಜ್ಯ ಮಟ್ಟದಲ್ಲಿ ಶೇ. ೨೬.೪ರಷ್ಟಿದ್ದರೆ ದೇವದುರ್ಗ ಮತ್ತು ಜೇವರ್ಗಿ ತಾಲ್ಲೂಕುಗಳಲ್ಲಿ ಅದರ ಪ್ರಮಾಣ ಶೇ. ೫೦ರಷ್ಟಿದೆ. ಯಾದಗಿರಿನಲ್ಲಿ ಅದು ಶೇ. ೩೭.೦೯ರಷ್ಟಿದೆ. ಹೈದರಾಬಾದ್-ಕರ್ನಾಟಕ ಪ್ರದೇಶದ ಐದು ಜಿಲ್ಲೆಗಳಲ್ಲಿ ಅವರ ಪ್ರಮಾಣ ಶೇ. ೪೦.೫೯. ರಾಜ್ಯ ಮಟ್ಟದ ಒಟ್ಟು ದಿನಗೂಲಿ ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ ಶೇ. ೫೮.೧೯ರಷ್ಟಿದ್ದರೆ ಹೈದರಾಬಾದ್-ಕರ್ನಾಟಕ ಪ್ರದೇಶದ ಐದು ಜಿಲ್ಲೆಗಳಲ್ಲಿನ ಒಟ್ಟು ದಿನಗೂಲಿ ದುಡಿಮೆಗಾರರಲ್ಲಿ ದಿನಗೂಲಿ ಮಾಡಿಕೊಂಡು ಬದುಕುತ್ತಿರುವ ಮಹಿಳೆಯರ ಪ್ರಮಾಣ ಶೇ. ೬೧.೭೪.

ರಸ್ತೆಗಳ ಅಭಿವೃದ್ಧಿಯೆಂದು ಬೀಗುವ ಮಂದಿಗೆ ಕೋಷ್ಟಕದಲ್ಲಿನ ಮೂರು ತಾಲ್ಲೂಕುಗಳ ಜನರು ಅನುಭವಿಸುತ್ತಿರುವ ಯಾತನೆ-ದುಸ್ಥಿತಿ ಯಾಕೆ ಕಾಣುವುದಿಲ್ಲ? ತಮ್ಮ ಸರ್ಕಾರಕ್ಕೆ ೮ ತಿಂಗಳು ತುಂಬಿದ ಸಂದರ್ಭದಲ್ಲಿ ಪ್ರಜಾವಾಣಿಗೆ ಸಂದರ್ಶನ ನೀಡಿರುವ ಮಾನ್ಯ ಮುಖ್ಯಮಂತ್ರಿ ಧರ್ಮಸಿಂಗ್ ಅವರು ''ಜೇವರ್ಗಿ ರಾಜ್ಯದಲ್ಲಿಯೇ ಅತಿ ಹಿಂದುಳಿದ ತಾಲ್ಲೂಕು ಎಂದು ನಂಜುಂಡಪ್ಪ ವರದಿಯಲ್ಲಿ ಯಾವ ಅರ್ಥದಲ್ಲಿ ಹೇಳಿದ್ದಾರೋ ಗೊತ್ತಿಲ್ಲ. ನೀವು ಒಮ್ಮೆ ಜೇವರ್ಗಿಗೆ ಬನ್ನಿ. ನಿಮಗೆಲ್ಲ ಅಲ್ಲಿ

ನಿರ್ಮಾಣವಾಗಿರುವ ಮಜಬೂತು ರಸ್ತೆಗಳನ್ನು ತೋರಿಸುವೆ'' ಎಂದು ತಮ್ಮ ಅಭಿವೃದ್ಧಿ ಮೀಮಾಂಸೆಯನ್ನು ಬಹಿರಂಗಪಡಿಸಿದ್ದಾರೆ. ಅವರಿಗೆ ರಸ್ತೆಗಳೇ ಅಭಿವೃದ್ಧಿ ಸೂಚಿಗಳಾಗಿರುವಂತೆ ಕಾಣುತ್ತದೆ. (ನೋಡಿ : ಪ್ರಜಾವಾಣಿ - ಫೆಬ್ರವರಿ ೪, ೨೦೦೫.) ಜೇವರ್ಗಿ ತಾಲ್ಲೂಕಿನ ಅಭಿವೃದ್ಧಿಗೆ ಏನೆಲ್ಲ ಮಾಡಬೇಕೋ ಅದನ್ನೆಲ್ಲ ಮಾಡಿಯಾಗಿದೆ ಅನ್ನುತ್ತಾರೆ ಅಲ್ಲಿನ ಶಾಸಕರು ! ಹಾಗಾದರೆ ಯಾಕೆ ಅಲ್ಲಿನ ಸ್ಥಿತಿ – ಸಾಕ್ಷರತೆ, ಶಾಲೆಯಿಂದ ಹೊರಗಿರುವ ಮಕ್ಕಳ ಪ್ರಮಾಣ ಹಾಗೂ ದಿನಗೂಲಿ ದುಡಿಮೆಗಾರರ ಪ್ರಮಾಣ ಶೋಚನೀಯವಾಗಿದೆ ?

ಡಿ. ಎಂ. ನಂಜುಂಡಪ್ಪ ವರದಿ ಬಗ್ಗೆ ಹಣಕಾಸು ಮಂತ್ರಿಗಳು ಬಜೆಟ್ಟಿನ ಭಾಷಣದಲ್ಲಿ ಅನೇಕ ಬಾರಿ ಉಲ್ಲೇಖ ಮಾಡಿದ್ದಾರೆ. ಈ ವರದಿಯ ಒಂದು ಮುಖ್ಯ ಶಿಫಾರಸ್ಸು ಎಂದರೆ ಅಭಿವೃದ್ಧಿಗಾಗಿರುವ ಪ್ರದೇಶ ಮಂಡಳಿಗಳನ್ನು ರದ್ದುಪಡಿಸುವುದಾಗಿದೆ. ಸಮಿತಿಯ ವರದಿಯಲ್ಲಿನ ಶಿಫಾರಸ್ಸಿಗೆ ಪ್ರತಿಯಾಗಿ ೨೦೦೫-೦೬ನೆಯ ಸಾಲಿಗೆ ಹಣಕಾಸು ಮಂತ್ರಿಗಳು ಹೈದರಾಬಾದ್-ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಗೆ ಅನುದಾನ ಹೆಚ್ಚಿಸಿದ್ದಾರೆ. ಮಂಡಳಿಯನ್ನು ರದ್ದು ಮಾಡಬೇಕೆಂಬ ಸಮಿತಿಯ ಶಿಫಾರಸ್ಸನ್ನು ಒಪ್ಪಬೇಕೆಂಬುದು ಇಲ್ಲಿನ ಅಭಿಪ್ರಾಯವಲ್ಲ. ಏಕೆಂದರೆ ಅದನ್ನು ರದ್ದುಪಡಿಸುವುದರ ವಿರುದ್ಧ ೧೯೬೦ರಿಂದಲೂ ನನ್ನ ವಿಚಾರವನ್ನು ಮಂಡಿಸುತ್ತಾ ಬಂದಿದ್ದೇನೆ. ಆದರೆ ಮಂಡಳಿಯ ಕಾರ್ಯವೈಖರಿ ಬದಲಾಗಬೇಕಾದ ಅಗತ್ಯದ ಬಗ್ಗೆಯೂ ನಾನು ಗಮನ ಸೆಳೆದಿದ್ದೇನೆ. ಹೈದರಾಬಾದ್-ಕರ್ನಾಟಕ ಪ್ರದೇಶದ ಶಾಸಕರ ಇಷ್ಟಾನಿಷ್ಟದಂತೆ ಸರಿಸುಮಾರು ರೂ. ೬೦ ಕೋಟಿ ಹಣವನ್ನು ವ್ಯಯಿಸುವುದರಿಂದ ಯಾವುದೇ ಉಪಯುಕ್ತ ಕೆಲಸ ಸಾಧ್ಯವಿಲ್ಲ. ಆದರೆ ದುರದೃಷ್ಟದ ಸಂಗತಿಯೆಂದರೆ ಶಾಸಕರ ಇಷ್ಟಾನಿಷ್ಟದಂತೆ ಬಂಡವಾಳ ವಿನಿಯೋಗ ಮಾಡುವ ಕ್ರಮದ ವ್ಯಾಪ್ತಿಯನ್ನು ೨೦೦೫-೦೬ನೆಯ ಸಾಲಿನಲ್ಲಿ ವಿಸ್ತೃತಗೊಳಿಸಲಾಗಿದೆ.

**ರೂ. ೧೫೦ ಕೋಟಿ ಹಣ ಶಾಸಕರಿಗೆ !**

ಶಾಸಕರ ಮತಕ್ಷೇತ್ರ ಅಭಿವೃದ್ಧಿ ನಿಧಿಯೆಂಬ ಕಾರ್ಯಕ್ರಮವೊಂದನ್ನು ಆರಂಭ ಮಾಡಿರುವ ಸಿದ್ಧರಾಮಯ್ಯ ಅವರು ಇದಕ್ಕಾಗಿ ೨೦೦೪-೨೦೦೬ರಲ್ಲಿ ೩೦೦ಕ್ಕೂ ಮಿಕ್ಕು ಶಾಸಕರಿಗೆ ೧೫೦ ಕೋಟಿಗೂ ಮಿಕ್ಕು ಹಣಕಾಸನ್ನು ಒದಗಿಸಿದ್ದಾರೆ. ಈ ಬಂಡವಾಳ ಯಾವುದೇ ಬಗೆಯ ಅಭಿವೃದ್ಧಿ ಯೋಜನೆ ಚೌಕಟ್ಟಿಗೂ ಒಳಗಾಗದೆ ವ್ಯಯವಾಗುತ್ತದೆ. ರಾಜ್ಯಮಟ್ಟದ ಯೋಜನೆ, ಜಿಲ್ಲಾಮಟ್ಟದ ಯೋಜನೆ, ಜಿಲ್ಲಾ ಯೋಜನಾ ಸಮಿತಿ, ಗ್ರಾಮ ಪಂಚಾಯಿತಿ ಯೋಜನೆ – ಹೀಗೆ ಯಾವುದರ ವ್ಯಾಪ್ತಿಗೂ ಇದು ಒಳಗಾಗುವುದಿಲ್ಲ. ಶಾಸಕರ ವಿವೇಚನೆಯಂತೆ ಇದು ವ್ಯಯವಾಗುತ್ತದೆ. ಇದರಿಂದ ಏನನ್ನೂ ಸಾಧಿಸುವುದು ಸಾಧ್ಯವಿಲ್ಲವೆಂಬುದು ಈಗಾಗಲೆ ಸಿದ್ಧವಾಗಿದೆ.

ಈ ಬಗೆಯ ಕ್ರಮಗಳು ವಿಕೇಂದ್ರೀಕರಣಕ್ಕೆ ಕುತ್ತಾಗಿ ಪರಿಣಮಿಸುತ್ತವೆ. ಈಗಾಗಲೇ ಪಂಚಾಯತ್‌ರಾಜ್ ಸಂಸ್ಥೆಗಳ ಸ್ವಾಯತ್ತತೆಗೆ ತಿಲಾಂಜಲಿ ನೀಡಲಾಗಿದೆ. ಆಶ್ರಯ ಸಮಿತಿಗೆ ಅಧ್ಯಕ್ಷರು ಶಾಸಕರು, ಕುಡಿಯುವ ನೀರಿಗೆ ಸಂಬಂಧಿಸಿದ ಕಾರ್ಯಪಡೆಗೆ ಅಧ್ಯಕ್ಷರು ಶಾಸಕರು. ಈಗ ರೂ. ೫೦ ಲಕ್ಷ ವಾರ್ಷಿಕವಾಗಿ ವೈಯಕ್ತಿಕ ವಿವೇಚನೆಗನುಗುಣವಾಗಿ ವ್ಯಯಿಸುವ ಅಧಿಕಾರ ಶಾಸಕರಿಗೆ! ಜಿಲ್ಲಾ ಯೋಜನಾ ಸಮಿತಿಯಂತಹ ಸಂವಿಧಾನಾತ್ಮಕ ಸಂಸ್ಥೆಗೆ ಇಲ್ಲಿ ಅರ್ಥವಿಲ್ಲದಂತಾಗಿದೆ. ಪ್ರಸ್ತುತ ಬಜೆಟ್ಟಿನಲ್ಲಿ ವಿಕೇಂದ್ರೀಕರಣ, ಜನರ ಯೋಜನೆ (ಪೀಪಲ್ಸ್ ಪ್ಲಾನ್), ಸ್ವಯಮಾಡಳಿತ ಮುಂತಾದ ಸಂಗತಿಗಳ ಬಗ್ಗೆ ಮೌನ ತಳೆದಿರುವುದು ಆಶ್ಚರ್ಯ ಹುಟ್ಟಿಸುತ್ತದೆ.

**ಲಿಂಗ ಸಂಬಂಧಗಳು**

ಈ ಬಜೆಟ್ಟಿನ ಬಹುದೊಡ್ಡ ವೈಫಲ್ಯವೆಂದರೆ ಲಿಂಗ ಸಂಬಂಧಗಳ ಬಗ್ಗೆ ತಳೆದಿರುವ ಮೌನ. ಲಿಂಗ ಸಂಬಂಧಿ ಬಜೆಟ್ಟಿನ ಬಗ್ಗೆ ಇಂದು ತೀವ್ರ ಚರ್ಚೆಗಳಾಗುತ್ತಿವೆ. ಲಿಂಗ ಸಂಬಂಧಿ ಬಜೆಟ್ಟನ್ನು ರೂಪಿಸುವ ದಿಶೆಯಲ್ಲಿ ಪಿ. ಚಿದಂಬರಂ ಅವರು ೨೦೦೫-೦೬ನೆಯ ಸಾಲಿನ ಕೇಂದ್ರ ಬಜೆಟ್ಟಿನಲ್ಲಿ ಸ್ಪಷ್ಟ ಸೂಚನೆ ನೀಡಿದ್ದಾರೆ. ವಿದ್ಯಾರ್ಥಿನಿಯರಿಗೆ ಹಾಸ್ಟಲ್ ಸೌಲಭ್ಯ ವಿಸ್ತರಣೆ, ಯಶಸ್ವಿನಿ, ಆರೋಗ್ಯ ಮುಂತಾದ ವಿಷಯಗಳನ್ನು ಬಿಟ್ಟರೆ ಪ್ರಸ್ತುತ ಬಜೆಟ್ಟಿನಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ಏನೂ ಇಲ್ಲ. ಈಗಾಗಲೆ ಹೇಳಿರುವಂತೆ ರಾಜ್ಯದಲ್ಲಿನ ದಿನಗೂಲಿ ದುಡಿಮೆಗಾರರಲ್ಲಿ (೬೨.೦೯ ಲಕ್ಷ) ೩೬.೧೩ ಲಕ್ಷ ಮಹಿಳೆಯರಿದ್ದಾರೆ. ಇವರಲ್ಲಿ ಶೇ. ೨೮.೫೪ರಷ್ಟು (೧೦.೩೧ ಲಕ್ಷ) ದಿನಗೂಲಿ ಮಹಿಳಾ ದುಡಿಮೆಗಾರರು ಹೈದರಾಬಾದ್-ಕರ್ನಾಟಕ ಪ್ರದೇಶದ ಜಿಲ್ಲೆಗಳಲ್ಲಿದ್ದಾರೆ. ಯಾದಗಿರಿ ತಾಲ್ಲೂಕಿನ ಗ್ರಾಮೀಣ ಮಹಿಳೆಯರ ಸಾಕ್ಷರತೆ ಇಂದಿಗೂ ಶೇ. ೧೮.೬೭. ಲಿಂಗ ಸಂವೇದನೆಯನ್ನು ವಿಚಾರ ಪ್ರಣಾಳಿಕೆಯಂತೆ ಒಳಗೊಳ್ಳಬೇಕಾದ ಸಂದರ್ಭದಲ್ಲಿ ಅದರ ಬಗ್ಗೆ ದಿವ್ಯಮೌನ ತಳೆದಿರುವುದು ಪ್ರಸ್ತುತ ಬಜೆಟ್ಟಿನ ಅತಿ ದೊಡ್ಡ ವೈಫಲ್ಯವಾಗಿದೆ. ಈ ಬಜೆಟ್ಟಿನಲ್ಲಿ ಮಹಿಳೆಯರ ಅಭಿವೃದ್ಧಿಯನ್ನು ಕಲ್ಯಾಣವಾದಿ ನೆಲೆಯಲ್ಲಿ ಪರಿಭಾವಿಸಿಕೊಳ್ಳಲಾಗಿದೆ. ಮಹಿಳೆ ಆದರ್ಶ ತಾಯಿಯಾಗಿ, ಆದರ್ಶ ಗೃಹಿಣಿಯಾಗಿ, ಆದರ್ಶ ಹೆಂಡತಿಯಾಗಿ ರೂಪುಗೊಳ್ಳುವುದೆ ಮಹಿಳಾ ಅಭಿವೃದ್ಧಿ ಎಂಬ ನಿರ್ವಚನವು ಪ್ರಸ್ತುತ ಬಜೆಟ್ಟನ್ನು ನಿರ್ದೇಶಿಸಿದಂತೆ ಕಾಣುತ್ತದೆ. ಈ ಬಜೆಟ್ಟಿನಲ್ಲಿ ಮಹಿಳೆಯರಿಗೆ ಸಂಬಂಧಿಸಿದ ಸಂಘರ್ಷವಾದಿ-ಪರಿವರ್ತನ ಶೀಲ ಸಂಗತಿಗಳ ಬಗ್ಗೆ ಯಾವುದೇ ಪ್ರಸ್ತಾಪ ಕಂಡು ಬರುವುದಿಲ್ಲ. ಹೆಣ್ಣು ಶಿಶು ಭ್ರೂಣಹತ್ಯೆಯಂತಹ ಸಮಸ್ಯೆ ನಾಡನ್ನು ಕಾಡುತ್ತಿದೆ. ಇಂತಹ ಸಂಗತಿಗಳ ಬಗ್ಗೆ ಉಲ್ಲೇಖವನ್ನಾದರೂ ಮಾಡಬಹುದಿತ್ತು. ಮಹಿಳೆಯರ ಆಸ್ತಿ ಹಕ್ಕಿನ ಬಗ್ಗೆ, ಲಿಂಗ ಸಂಬಂಧಿ ಶ್ರಮ ವಿಭಜನೆ ಬಗ್ಗೆ, ಗೃಹವಾರ್ತೆಯನ್ನು ಪುರುಷರು ನಿರ್ವಹಿಸುವ ಬಗ್ಗೆ ಹಣಕಾಸು ಮಂತ್ರಿಗಳು ಚರ್ಚೆ ಮಾಡಬಹುದಿತ್ತು. ಮಹಿಳೆಯರ ಗೃಹವಾರ್ತೆ ದುಡಿಮೆಯನ್ನು ಕುರಿತಂತೆ ಮಾತನಾಡಬಹುದಿತ್ತು.

ಒಟ್ಟಾರೆ ಈ ಬಜೆಟ್ಟು ಮಹತ್ವಾಕಾಂಕ್ಷೆಯಿಂದ ಕೂಡಿದೆ. ಸಿದ್ಧರಾಮಯ್ಯ ಅವರು ನಮ್ಮ ನಿರೀಕ್ಷೆಯನ್ನು ಉದ್ದೀಪನಗೊಳಿಸುತ್ತಾರೆ. ಆದರೆ ಮಾತ್ರ ಬಜೆಟ್ಟಿನಲ್ಲಿ ನಿರ್ದಿಷ್ಟವಾಗಿ ಏನನ್ನು ಮಾಡುವುದೂ ಅವರಿಗೆ ಸಾಧ್ಯವಾಗಿಲ್ಲ. ತಾವೇ ರೂಪಿಸಿಕೊಂಡಿರುವ ಅಭಿವೃದ್ಧಿ ಮಾನದಂಡದಲ್ಲಿ ಮಾಪನ ಮಾಡಿದಾಗಲೂ ಅವರ ಬಜೆಟ್ಟು ನಿರೀಕ್ಷೆಗನುಗುಣವಾಗಿಲ್ಲ. ಎಲ್ಲೋ ತಾಳ ತಪ್ಪಿದಂತಿದೆ. ಸಿದ್ಧರಾಮಯ್ಯ ಅವರು ಅಭಿವೃದ್ಧಿಯನ್ನು ಅತ್ಯಂತ ಖಚಿತವಾಗಿ ಹಾಗೂ ಸರಿಯಾಗಿ ನಿರ್ವಚಿಸಿದ್ದಾರೆ. ಹಣಕಾಸು ಸಚಿವಾಲಯದ ಅಧಿಕಾರಿಗಳು ಬಜೆಟ್ಟಿನಲ್ಲಿ ಕಾರ್ಯಕ್ರಮಗಳನ್ನು ರೂಪಿಸುವಾಗ ಸಿದ್ಧರಾಮಯ್ಯ ಅವರು ಸ್ಪಷ್ಟವಾಗಿ ರೂಪಿಸಿಕೊಂಡಿರುವ ಮಾನದಂಡಕ್ಕೆ ಅನುಗುಣವಾಗಿ ರೂಪಿಸಬೇಕಾಗಿತ್ತು. ಇದು ಅಧಿಕಾರಿಗಳ ವೈಫಲ್ಯದಂತೆ ಕಾಣುತ್ತದೆ.

ರಾಜಕಾರಣವನ್ನು – ತಮ್ಮ ರಾಜಕೀಯ ಹಿತಾಸಕ್ತಿಗಳು ಯಾವುವು ಎಂಬುದನ್ನು ಹಣಕಾಸು ಮಂತ್ರಿಗಳು ಸರಿಯಾಗಿ ಗುರುತಿಸಿದ್ದಾರೆ. ಆದರೆ ಅಧಿಕಾರಿಗಳು ಅದರ ಎಳೆಗಳನ್ನು ಹಿಡಿದುಕೊಂಡು ಕಾರ್ಯಕ್ರಮಗಳನ್ನು ಅದೇ ರೀತಿ ರೂಪಿಸಬೇಕಾಗಿತ್ತು. ಅದು ಸಾಧ್ಯವಾಗಿಲ್ಲ. ಇದು ರಾಜಕಾರಣದ ವೈಫಲ್ಯವಲ್ಲ, ಅಧಿಕಾರಶಾಹಿಯ ವೈಫಲ್ಯವೆಂದು ಹೇಳದೆ ವಿಧಿಯಿಲ್ಲ.

**ಡಾ|| ಟಿ. ಆರ್. ಚಂದ್ರಶೇಖರ**
ಪ್ರಾಧ್ಯಾಪಕ, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ, ವಿದ್ಯಾರಣ್ಯ - ೫೮೩ ೨೭೬

**ಅತಿ ಹಿಂದುಳಿದ ಮೂರು ತಾಲ್ಲೂಕುಗಳಲ್ಲಿನ ಸ್ಥಿತಿಗತಿಗಳು**
ಕೋಷ್ಟಕ-೨

| ಕ್ರ. ಸಂ. | ವಿವರಗಳು | ಕರ್ನಾಟಕ ರಾಜ್ಯ | ದೇವದುರ್ಗ ತಾಲ್ಲೂಕು | ಜೇವರ್ಗಿ ತಾಲ್ಲೂಕು | ಯಾದಗಿರಿ ತಾಲ್ಲೂಕು |
|---|---|---|---|---|---|
| ೧. | ಸಾಕ್ಷರತೆ ೨೦೦೧ | | | | |
| | ಒಟ್ಟು ಸಾಕ್ಷರತೆ | ಶೇ. ೬೭.೦೪ | ಶೇ. ೩೯.೫೬ | ಶೇ. ೪೪.೨೬ | ಶೇ. ೩೭.೪೩ |
| | ಗ್ರಾಮೀಣ ಮಹಿಳೆ | ಶೇ. ೪೮.೫೦ | ಶೇ. ೨೫.೨೨ | ಶೇ. ೨೭.೮೬ | ಶೇ. ೧೮.೬೭ |
| ೨. | ಒಟ್ಟು ದುಡಿಮೆಗಾರರು | ೨೩೫೨೨ (ಲಕ್ಷ) | ೮೨೭೨೪ | ೧೦೯೩೮೫ | ೧೬೭೯೩೦ |
| ೩. | ದಿನಗೂಲಿ ದುಡಿಮೆಗಾರರು | ೬೨.೦೯ (ಲಕ್ಷ) (ಶೇ. ೨೬.೪) | ೩೯೯೩೬ (ಶೇ. ೪೮.೨೮) | ೫೭೬೪೮ (ಶೇ. ೫೨.೭೦) | ೬೨೨೮೭ (ಶೇ. ೩೭.೦೯) |
| ೪. | ಶಾಲೆಯಿಂದ ಹೊರಗಿರುವ ೬-೧೪ ವಯೋಮಾನದ ಮಕ್ಕಳ ಪ್ರಮಾಣ (೨೦೦೧) | ಶೇ. ೧೧.೦೩ | ಶೇ. ೩೫.೦೨ | ಶೇ. ೨೫.೦೮ | ಶೇ. ೩೫.೬೭ |

ಮೂಲ : ಸೆನ್ಸಸ್ ಆಫ್ ಇಂಡಿಯಾ-೨೦೦೧. ದುಡಿಮೆಗಾರರ ವಿವರಣೆ. ಡೈರೆಕ್ಟರ್ ಆಫ್ ಸೆನ್ಸಸ್ ಆಪರೇಶನ್, ಕರ್ನಾಟಕ.



"ಎಲ್ಲೀ ತನಕ ಇಷ್ಟೊಂದು ದೇವರಿರುತ್ತಾರೋ ಅಲ್ಲಿಯವರೆಗೆ ಅಷ್ಟೊಂದು ಪಂಗಡಗಳಿರುತ್ತವೆ. ಆದರೆ ಇದು ಆಗದ ಕೆಲಸ. ಅಂದರೆ ದೇಶ ಒಂದಾಗುತ್ತೆ ಅನ್ನೋ ಭ್ರಮೆ ಇದೆಯಲ್ಲ, ಅದು ನನಗಿಲ್ಲ. ಅಷ್ಟೊಂದು ಧರ್ಮಗಳಿರುವಾಗ ಅದು ಸಾಧ್ಯವಿಲ್ಲ. ಹೋಗ್ಲಿ, ನಷ್ಟವನ್ನು ಕಡಿಮೆ ಮಾಡಬೇಕು ಅಂತಂದ್ರೆ, ಮಕ್ಕಳಿಗೆ ದೇವರಿಲ್ಲದ ಹಾಗೆ ಮಾಡಬೇಕು. ಹಾಗಂತ atheism ಪಾಠ ಹೇಳಿಕೊಡಿ ಅಂತ ಹೇಳುತ್ತಿಲ್ಲ, ದೇವರನ್ನು ಸ್ಕೂಲಿನೊಳಗೆ ಬಿಡಬೇಡಿ ಅಂತ ಹೇಳ್ತಾಯಿದ್ದೇನೆ."

"ಧರ್ಮ ಇಲ್ಲದೆ ಒಂದು ಮೌಲ್ಯ ವ್ಯವಸ್ಥೆ ಮಾಡಿದರೆ ಆಗ ಮನುಷ್ಯನಿಗೆ ಒಂದು ಭವಿಷ್ಯ ಇದೆ ಅಂತ. ನನ್ನನ್ನೇ ನೋಡಿ – ನಾನು ಕೆಟ್ಟ ಮನುಷ್ಯ ಅಂದುಕೊಂಡರೆ ನಾನು ಕೆಟ್ಟ ಮನುಷ್ಯನೂ ಅಲ್ಲ. ಅಲ್ಲಿ ಕೂಡ ವೈಯಕ್ತಿಕವಾಗಿ ನಾನು ಒಂದು ಸಣ್ಣ ನಿಯಮವನ್ನು ಹಾಕಿಕೊಂಡಿದ್ದೇನೆ: ನಾವು ಒಳ್ಳೆಯವರಾಗಿರಬೇಕು ಅಂತ ಆಸೆ. ಒಳ್ಳೆಯದನ್ನು ಮಾಡಬೇಕಂತಲ್ಲ; ಇನ್ನೊಬ್ಬರಿಗೆ ಕೆಡುಕಾಗದ ಹಾಗೆ ನಾನು ಬದುಕಿದರೆ ಅದು ಒಳ್ಳೆಯತನ. ಬುದ್ಧಿಪೂರ್ವಕವಾಗಿ ನಾನು ಇನ್ನೊಬ್ಬನಿಗೆ ಅನ್ಯಾಯ ಮಾಡಬಾರದು. ಮಾಡಿದರೆ ಅವನ ಕ್ಷಮೆ ಕೇಳುವ ದೊಡ್ಡಸ್ತಿಕೆ ನನಗಿರಬೇಕು."

*ಪ್ರೊ|| ಬಿ. ಸಿ. ರಾಮಚಂದ್ರ ಶರ್ಮ ('ಹೊಸತು'ಗೆ ನೀಡಿದ್ದ ಸಂದರ್ಶನದಿಂದ; ಜನವರಿ ೨೦೦೪ರ ಸಂಚಿಕೆ)*

# ಸುದೀರ್ಘ ಪ್ರಯಾಣದ ಕೊನೆ

ನಮ್ಮ ಕವಿ ಬೊಗಾದಿ ಚಂದ್ರಶೇಖರ ಶರ್ಮ ರಾಮಚಂದ್ರ ಶರ್ಮ (೭೯) ೧೮ ಏಪ್ರಿಲ್ ೨೦೦೫ರಂದು ಮುಂಜಾನೆ ನಿಧನರಾದರು. ಮೂತ್ರಪಿಂಡ ಹಾಗೂ ಹೃದ್ರೋಗದಿಂದ ಕೆಲವು ದಿನಗಳಿಂದ ಅಸ್ವಸ್ಥರಾಗಿದ್ದ ಶರ್ಮರು ಸಾಗರ ಅಪೋಲೋ ಆಸ್ಪತ್ರೆಯಲ್ಲಿ ಕೊನೆಯುಸಿರನ್ನೆಳೆದರು. ಶರ್ಮರು ಕನ್ನಡ ಮತ್ತು ಇಂಗ್ಲಿಷಿನಲ್ಲಿ ಕೃತಿ ರಚನೆ ಮಾಡಿದ್ದರು. ಇವರು ಕನ್ನಡ ನವ್ಯಕಾವ್ಯ ಪ್ರವರ್ತಕರಲ್ಲಿ ಒಬ್ಬರು. ನಾಲ್ಕು ಕಥಾಸಂಕಲನಗಳನ್ನು, ಕೆಲವು ನಾಟಕಗಳನ್ನು ಶರ್ಮರು ರಚಿಸಿದ್ದಾರೆ. ಕುವೆಂಪು ಅವರ ಕಾನೂರು ಹೆಗ್ಗಡತಿ, ಮಾಸ್ತಿಯವರ ಚಿಕವೀರ ರಾಜೇಂದ್ರ, ಯಶವಂತ ಚಿತ್ತಾಲರ ಕಥೆಗಳನ್ನು ಮತ್ತು ಕೆಲವು ಕವನಗಳನ್ನು ಇಂಗ್ಲಿಷಿಗೆ ಅನುವಾದಿಸಿದ್ದಾರೆ.

ವೃತ್ತಿಜೀವನದಲ್ಲಿ ಶಿಕ್ಷಣ ಮನಃಶಾಸ್ತ್ರ ಪ್ರಾಧ್ಯಾಪಕರಾಗಿದ್ದ ಶರ್ಮರು, ಕೆಲವು ವರ್ಷಗಳು ಯುನೆಸ್ಕೊದಲ್ಲಿ ಸಲಹೆಗಾರರಾಗಿದ್ದರು. ಇಂಗ್ಲೆಂಡ್, ಇಥಿಯೊಪಿಯಾ, ಜಾಂಬಿಯಾ, ಮಲಾವಿ ದೇಶಗಳಲ್ಲಿ ಶಿಕ್ಷಣದ ಸಲಹೆಗಾರರಾಗಿ ಕಾರ್ಯ ನಿರ್ವಹಿಸಿದ್ದರು. ಇವರ ಶಿಕ್ಷಣ ಕ್ಷೇತ್ರದ ಅಪಾರ ಅನುಭವವನ್ನು ಕರ್ನಾಟಕ ಸರ್ಕಾರ ಬಳಸಿಕೊಳ್ಳಲಿಲ್ಲ. ನಮ್ಮ ಸರ್ಕಾರದವರಿಗೆ ಬಿಳಿ ತೊಗಲಿನ ಪರಿಣತರು ಬೇಕೆಂದು ತೋರುತ್ತದೆ; ಅಥವಾ ಅಧಿಕಾರಿಗಳೇ ಸ್ವತಃ ಪರಿಣತರಂತೆ ಮೆರೆಯುತ್ತಾರೆ.

ನವ್ಯಕಾವ್ಯವನ್ನು ಗೋಪಾಲಕೃಷ್ಣ ಅಡಿಗರ ಜೊತೆಜೊತೆಯಲ್ಲಿ ಪ್ರಾರಂಭಿಸಿದರೂ, ಶರ್ಮರು ಅವರಿಗಿಂತ ಭಿನ್ನರಾಗಿ ಸಮಾನಾಂತರವಾಗಿ ಬೆಳೆದರು. ಕೊನೆಯುಸಿರಿನ ತನಕ ಜನಪ್ರಿಯತೆಯ ಸೆಳೆತಕ್ಕೆ ಸಿಕ್ಕದೆ ಶುದ್ಧಕಾವ್ಯ ಶ್ರದ್ಧೆಯನ್ನು, ಅಪಾರ ಏಕಾಗ್ರತೆಯನ್ನು ಕಾಪಾಡಿಕೊಂಡರು. ತಮಗೆ ಅನಿಸಿದ್ದನ್ನು ನೇರವಾಗಿ, ಸ್ಪಷ್ಟವಾಗಿ ಯಾವ ಮುಲಾಜಿಲ್ಲದೆ ಲವಲವಿಕೆಯಿಂದ ಹೇಳಿಬಿಡುತ್ತಿದ್ದರು. ಬಾಲ್ಯದ ದಿನಗಳನ್ನು ಕಷ್ಟದಲ್ಲಿ ಕಳೆದ ಶರ್ಮರು ಬದುಕಿನುದ್ದಕ್ಕೂ ಪ್ರಾಮಾಣಿಕರಾಗಿ, ಜಾತ್ಯತೀತರಾಗಿ ಹಾಗೂ ನಾಸ್ತಿಕರಾಗಿ ನೆಮ್ಮದಿಯ ಜೀವನ ನಡೆಸಿದರು.

೧೯೫೨ರಲ್ಲಿ 'ಹೃದಯಗೀತೆ' ಕವನ ಸಂಕಲನದಿಂದ ಪ್ರಾರಂಭವಾದ ಇವರ ಕಾವ್ಯಜೀವನ ೧೯೯೬ರ 'ಸಪ್ತಪದಿ'ಯವರೆಗೂ ಮುಂದುವರೆಯಿತು. 'ಸಪ್ತಪದಿ'ಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ. ಜೊತೆಗೆ ಮಾನ್ಯ ಶರ್ಮರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಶಿವರಾಮಕಾರಂತ ಪ್ರಶಸ್ತಿ ಮತ್ತು ಕಥಾ ಪ್ರಶಸ್ತಿಗಳು ಬಂದಿವೆ.

ಶರ್ಮರು ಬಾಳಸಂಗಾತಿ ಲೇಖಕಿ ಪದ್ಮಾ ಅವರನ್ನು, ಇಬ್ಬರು ಹೆಣ್ಣುಮಕ್ಕಳನ್ನು ಹಾಗೂ ಒಬ್ಬ ಕಲಾವಿದ ಮಗನನ್ನು ಬಿಟ್ಟು ಅಗಲಿದ್ದಾರೆ. 'ಪರಾಶರ'ದಿಂದ ಅವರ ಅಂತಿಮಯಾತ್ರೆ ಯಾವ ಅಬ್ಬರ, ವೈಭವಗಳಿಲ್ಲದೆ ಅತ್ಯಂತ ಸರಳವಾಗಿ, ಶಾಂತವಾಗಿ, ಆತ್ಮೀಯವಾಗಿ ಧಾರ್ಮಿಕ ಆಚರಣೆಗಳ ಗೋಜಿಲ್ಲದೆ, ಬನಶಂಕರಿ ಚಿತಾಗಾರದಲ್ಲಿ ನಡೆಯಿತು. ಅದೊಂದು ಹೃದಯಸ್ಪರ್ಶಿಯಾದ ವಿದಾಯ.

'ಹೊಸತು' ಪತ್ರಿಕೆಯೊಡನೆ ಪ್ರೊ|| ಶರ್ಮರು ಆತ್ಮೀಯತೆಯ ಸಂಪರ್ಕ ಬೆಳೆಸಿಕೊಂಡು ಅದರ ಬೆಳವಣಿಗೆಯ ಬಗ್ಗೆ ಕುತೂಹಲದಿಂದಿರುತ್ತಿದ್ದರು, ಸೂಕ್ತ ಸಲಹೆಗಳನ್ನು ನೀಡುತ್ತಿದ್ದರು. ಒಬ್ಬ ಆಪ್ತರನ್ನು, ಹಿತೈಷಿಯನ್ನು ಕಳೆದುಕೊಂಡಿರುವ 'ಹೊಸತು' ಪ್ರೊ|| ಶರ್ಮರಿಗೆ ವಿನಯದ ಗೌರವವನ್ನು ಸೂಚಿಸುತ್ತದೆ, ಅವರ ವೈಜ್ಞಾನಿಕ ಮನೋಭಾವವನ್ನು ತನ್ನದಾಗಿಸಿಕೊಳ್ಳಲು ಯತ್ನಿಸುತ್ತದೆ.

## ನೆನಪು, ನೆನಪಿಗೆ ಮಾತು

ನೀನಂದು ಉಟ್ಟಿದ್ದ ಆರು ಗಜದಾಕಾಶ
ನೆನಪಿದೆ, ಉರಿದುರಿದು ಬಿರಿದ ನೆಲವಾದ ನನ್ನ
ಹಲುಬು ಹಾಹಾಕಾರಕ್ಕೆ ಮಳೆಯಾಗಿ ಬಂದು
ಹತ್ತು ಕಡೆಗೂ ಹಸಿ ಮಣ್ಣ ಸುಗಂಧ ಸೂಸಿ
ಕೈಯೆತ್ತಿ ಮುಖವೆತ್ತಿ ನಿಂತಿದ್ದವನ ಕಣ್ಣ
ನೆಲಕ್ಕೆಳೆದು ಕಟ್ಟಿದ್ದೆ. ಮುತ್ತು ಹವಳದ ರಾಶಿ
ಕಡಲ ಬಣ್ಣದ ನಿನ್ನ ಕಣ್ಣ ತಳಕ್ಕೆ ಕಂಡು
ಮುಳುಗಿದ್ದು ನೆನಪಿದೆ. ನಿನ್ನ ಕೈಯಿನ ಸ್ಪರ್ಶ
ಮಿಂಚಾಗಿ ಬೆನ್ನಹುರಿಯುದ್ದಕ್ಕು ಹರಿದಿತ್ತು.
ಮರ್ಮರಿಸಿತ್ತು ನೀನು ಪಿಸುಗುಟ್ಟಿದ್ದ ಮಾತು.

ನೆನಪಿರದ ಮರಕ್ಕೆ ಪುನರ್ಜನ್ಮದುತ್ಕರ್ಷ,
ಪ್ರತಿವರ್ಷ ಉಕ್ಕುವ ಧಾತು, ಕಂಪನದ ಹರ್ಷ.
ಕಾಲ ವರ್ತುಲವೆಂದೆ ಮತ್ತೆ ಬಂದಿದೆ ಧಾತು.
ನೆನಪಾಗಿ ಕಾಡುವುದು ಒಲವು, ಜೊತೆಗೆ ಮಾತು.

'ಸಪ್ತಪದಿ' ಕವನ ಸಂಕಲನದಿಂದ



# ಸಿಡಿಎನ್ ನೆನಪು

ಎಂ. ಸತ್ಯನಾರಾಯಣ ರಾವ್

ಇದೇ ಏಪ್ರಿಲ್ ೧೨ರಂದು ನಿಧನರಾದಾಗ ಸಿ.ಡಿ.ಎನ್. ಅವರಿಗೆ ಎಂಬತ್ತನಾಲ್ಕರ ಪ್ರಾಯ. ನೆರೆಯ ಶ್ರೀಲಂಕೆಯಲ್ಲಿ ಉಪನ್ಯಾಸವೊಂದನ್ನು ನೀಡಲು ಅವರು ಸದ್ಯದಲ್ಲೇ ಆ ದೇಶಕ್ಕೆ ಹೋಗಬೇಕಾಗಿದ್ದು, ಪಾಸ್‌ಪೋರ್ಟ್ ನವೀಕರಣದ ಸಲುವಾಗಿ ಮುನ್ನಾದಿನ ಬೆಂಗಳೂರಿಗೆ ತೆರಳಿದ್ದರು; ಮಗಳು ರಾಗಿಣಿಯ ಮನೆಯಲ್ಲಿ ಸರಿರಾತ್ರಿಯ ವೇಳೆಗೆ ಮಲಗಿದ ಅವರು ನಿದ್ರೆಯಿಂದ ಮೇಲೇಳಲಿಲ್ಲ. ಅವರೀಗ ಒಂದು ಮಧುರ ನೆನಪು !

ಶತಮಾನ ಸಮೀಪಿಸುತ್ತಿರುವ ಮೈಸೂರು ವಿಶ್ವವಿದ್ಯಾನಿಲಯವು (ಸ್ಥಾಪನೆ, ೧೯೧೬) ಪ್ರಾರಂಭಿಸಿ ವರ್ಷಗಳಿಂದಲೇ ತನ್ನಲ್ಲಿಯ ಮೇಲ್ತರದ ಶಿಕ್ಷಣದಿಂದ, ಉಚ್ಚತಮ ವಿದ್ವತ್ತು ಮತ್ತು ಸಂಶೋಧನಾ ಶ್ರೀಮಂತಿಕೆಯಿಂದಾಗಿ ದೇಶದಲ್ಲಿ ಮಾತ್ರವಲ್ಲದೆ ದೇಶದಿಂದಾಚೆಗೂ ಬೆಳಗಿತಾದರೂ, ನಾಲ್ಕು ದಶಕಗಳಿಂದೀಚೆಗೆ ಅದು ನಮ್ಮದೇ ವಿಶ್ವವಿದ್ಯಾನಿಲಯಗಳಲ್ಲಿ ಹಾಗೂ ಇಂಗ್ಲೆಂಡ್-ಆಸ್ಟ್ರೇಲಿಯ-ನ್ಯೂಜಿಲೆಂಡ್, ಅನೇಕ ಐರೋಪ್ಯ ರಾಷ್ಟ್ರಗಳು ಮತ್ತು ಅಮೆರಿಕೆಯ ಉನ್ನತ ಶಿಕ್ಷಣಕ್ಷೇತ್ರದಲ್ಲಿ ಗುರುತಿಸಲ್ಪಡುತ್ತಿದ್ದುದು ಸಿ.ಡಿ.ಎನ್. ಅವರ ಅಂತರರಾಷ್ಟ್ರೀಯ ಖ್ಯಾತಿಯಿಂದಾಗಿ.

ಮೈಸೂರು-ಬೆಂಗಳೂರು ಹೆದ್ದಾರಿಯ ಕ್ಲೋಸ್‌ಪೇಟೆಯಲ್ಲಿ – ಅದೀಗ ರಾಮನಗರ – ಅನಕ್ಷರಸ್ಥ ಎನ್ನಬಹುದಾದ ಬಡ ಕುಟುಂಬವೊಂದರಲ್ಲಿ ಜನಿಸಿದ (ಮೇ ೧೯೨೧) ನರಸಿಂಹಯ್ಯ ಆದರ್ಶ ಶಿಕ್ಷಕರಾಗಿ, 'ಪ್ರಾಧ್ಯಾಪಕರ ಪ್ರಾಧ್ಯಾಪಕ'ರಾಗಿ, ಅಂತರರಾಷ್ಟ್ರೀಯ ಮಟ್ಟದ ಸಾಹಿತ್ಯ ವಿಮರ್ಶಕರಾಗಿ, ಸಾಂಸ್ಕೃತಿಕ ಲೋಕದಲ್ಲಿ ಮೈಸೂರಿಗೆ ಒಂದು ವಿಶಿಷ್ಟ ಸ್ಥಾನ ದೊರಕಿಸಿ ಕೊಟ್ಟು, ತಮ್ಮ ಸಹಸ್ರಾರು ವಿದ್ಯಾರ್ಥಿಗಳಿಗೆ, ನೂರಾರು ಸಹ-ಶಿಕ್ಷಕರಿಗೆ, ಸಾಹಿತಿಗಳಿಗೆ, ಅಪಾರ ಸಂಖ್ಯೆ ನಾಗರಿಕರಿಗೆ ಸಿ.ಡಿ.ಎನ್. ಎಂದೇ ಅಚ್ಚುಮೆಚ್ಚಾದುದು ಪವಾಡಸದೃಶ.

ಗ್ರಾಮಾಂತರ ಪ್ರದೇಶದ ಅಂದಿನ ಶಾಲಾ ಶಿಕ್ಷಣದ ಇತಿಮಿತಿಗಳನ್ನು ದಾಟಿ, ಮೈಸೂರಿನ ಮಹಾರಾಜ ಕಾಲೇಜು ಸೇರಿ ಬಿ.ಎ. (ಆನರ್ಸ್) ಮತ್ತು ಎಂ.ಎ. ಪದವಿಗಳನ್ನು ನರಸಿಂಹಯ್ಯ ಪಡೆದುದು ಅಂದಿನ ಸಾಮಾಜಿಕ-ಶೈಕ್ಷಣಿಕ ಪರಿಸರದಲ್ಲಿ ದೊಡ್ಡ ಸಾಧನೆಯೇ. ನಂತರ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಉಪನ್ಯಾಸಕರಾಗಿ ಅವರು ನೇಮಕಗೊಂಡರು (೧೯೪೨).

ವೇತನ, ಬಡ್ತಿ ಮತ್ತಿತರ ಸವಲತ್ತುಗಳ ದೃಷ್ಟಿಯಿಂದ ವಿದ್ಯಾವಂತ ಯುವಕರಿಗೆ ಕಾಲೇಜು ಮೇಷ್ಟರ ಕೆಲಸ ಆಕರ್ಷಕವಾಗಿದ್ದ ಕಾಲವಲ್ಲ ಅದು; ಪ್ರತಿಭಾವಂತರನೇಕರು ಆಕರ್ಷಿತರಾಗುತ್ತಿದ್ದುದು 'ಸಿವಿಲ್ ಸರ್ವಿಸಸ್' ಹುದ್ದೆಗಳ ಕಡೆ. ಇಪ್ಪತ್ತೈದು-ಇಪ್ಪತ್ತಾರರ ಪ್ರಾಯದ ನರಸಿಂಹಯ್ಯನವರ ಆಕರ್ಷಕ ವ್ಯಕ್ತಿತ್ವ; ವಿದ್ಯೆಗೆ ತಕ್ಕ ಗಾಂಭೀರ್ಯದ ನಡೆ-ನುಡಿಗಳು; ಹಿರಿಯ ಪ್ರಾಧ್ಯಾಪಕರ ಮೆಚ್ಚುಗೆ; ಅವರನ್ನು ಬಾಲ್ಯದಿಂದಲೂ ನೋಡುತ್ತಾ ಬಂದಿದ್ದು, ಹಳ್ಳಿಯ ಹುಡುಗ ಒಳ್ಳೆಯ ವಿದ್ಯಾವಂತನಾಗಿ ಠಾಕುಠೀಕು ಡ್ರೆಸ್ಸಿನ ಮೆಲುನಗೆಯ ಕಾಲೇಜು ಲೆಕ್ಚರರ್ ಆಗಿ ಬೀಗುತ್ತಿದ್ದುದರ ಬಗ್ಗೆ ಅಭಿಮಾನ ತಳೆದ ಒಬ್ಬಿಬ್ಬರು ದೊಡ್ಡ ಮನುಷ್ಯರ ಶಿಫಾರಸು; ಜೊತೆಗೆ ಹಿಂದುಳಿದ ವರ್ಗದ ಅಭ್ಯರ್ಥಿಗಳಿಗೆ ನೇಮಕಾತಿಯಲ್ಲಿ ಸರ್ಕಾರದ ಸಾಮಾಜಿಕ ನ್ಯಾಯದ ರೀತಿನೀತಿಗಳನ್ವಯ ದೊರಕುತ್ತಿದ್ದ ಅಲ್ಪ ಪ್ರಮಾಣದ ಮೀಸಲಾತಿ – ಹೀಗಾಗಿ ಅವರು ನಾಲ್ಕೈದು ವರ್ಷಗಳಲ್ಲೇ ಅಸಿಸ್ಟೆಂಟ್ ಪ್ರೊಫೆಸರ್ ಹುದ್ದೆಗೆ ಬಡ್ತಿ ಪಡೆದರು.

ನರಸಿಂಹಯ್ಯನವರ ಗುರುಗಳಲ್ಲೊಬ್ಬರಾಗಿದ್ದ ಪ್ರೊಫೆಸರ್ ಈಗಲ್‌ಟನ್‌ರ ಶಿಫಾರಸು ಅವರಿಗೆ ಮೈಸೂರು ಸರ್ಕಾರ ಕೊಡಮಾಡುತ್ತಿದ್ದ ವಿದೇಶೀ ಅಧ್ಯಯನದ ದಾಮೋದರ ದಾಸ್ ವಿದ್ಯಾರ್ಥಿವೇತನ ದೊರಕಿಸಿಕೊಟ್ಟಿತು. ಉನ್ನತ ಅಧ್ಯಯನಕ್ಕಾಗಿ ಅವರು ಇಂಗ್ಲೆಂಡಿಗೆ ತೆರಳಿ, ಕೇಂಬ್ರಿಜ್ ವಿಶ್ವವಿದ್ಯಾನಿಲಯದ ಕ್ರೈಸ್ಟ್ ಕಾಲೇಜು ಸೇರಿದರು.

ಪ್ರಾಯಶಃ ನರಸಿಂಹಯ್ಯನವರ ಜೀವನದ ಮಹತ್ವದ ಘಟನೆಯೆಂದರೆ ಕೇಂಬ್ರಿಜ್‌ನಲ್ಲಿ ಅವರಿಗೆ ಎಫ್.ಆರ್. ಲೀವಿಸ್ ಟ್ಯೂಟರ್‌ಆಗಿ ಗೊತ್ತಾದುದು ಮತ್ತು ಅವರಿಂದ ದೊರಕಿದ ಸಾಹಿತ್ಯದ ಅಧ್ಯಯನ-ವಿಮರ್ಶೆಗಳ ಬಗೆಗಿನ ಅನನ್ಯ ಎನ್ನಬಹುದಾದ ಮಾರ್ಗದರ್ಶನ. ಇಂಗ್ಲಿಷ್ ಸಾಹಿತ್ಯದ ಅಧ್ಯಯನ ಮತ್ತು ಸಂಶೋಧನಾ ಕ್ಷೇತ್ರದಲ್ಲಿ ನಗಣ್ಯವೆನ್ನಬಹುದಾಗಿದ್ದ ಭಾರತದ ವಿಶ್ವವಿದ್ಯಾನಿಲಯಗಳಿರಲಿ, ಇಂಗ್ಲೆಂಡ್‌ನ ಬಹುತೇಕ ವಿಶ್ವವಿದ್ಯಾನಿಲಯಗಳೂ ಪರಂಪರಾಗತ ರೊಮ್ಯಾಂಟಿಕ್ ಮತ್ತು ವಿಕ್ಟೋರಿಯನ್ ಸಾಹಿತ್ಯ-ಶ್ರೀಮಂತಿಕೆಯಲ್ಲೇ ಮುಳುಗೇಳುತ್ತಿದ್ದ ಆ ಕಾಲದಲ್ಲಿ, ಇಪ್ಪತ್ತನೆಯ ಶತಮಾನದ, ಯುದ್ಧೋತ್ತರ ಇಂಗ್ಲಿಷ್ ಸಾಹಿತ್ಯದಲ್ಲಿ ಹೊಸ ಪ್ರತಿಭೆಗಳನ್ನು ಗುರುತಿಸಿ, ಸಾಹಿತ್ಯ ಲೋಕದಲ್ಲಿ ಕಂಪನ-ಕ್ರಾಂತಿಗಳನ್ನುಂಟು ಮಾಡಿದ್ದವರು ಲೀವಿಸ್.

ದಿಗ್ಗಜ ಲೀವಿಸರ ಅಚ್ಚುಮೆಚ್ಚಿನ ಶಿಷ್ಯ ನರಸಿಂಹಯ್ಯ ಕೇಂಬ್ರಿಜ್ ಟ್ರೈಪಾಸ್ ಡಿಗ್ರಿ ಗಳಿಸಿದರು. ತಾಯ್ನಾಡಿಗೆ ಮರಳಲು ಸಿದ್ಧವಾಗುತ್ತಿದ್ದಂತೆಯೇ ರಾಕ್‌ಫೆಲ್ಲರ್ ಫೌಂಡೇಷನ್ ಫೆಲೋಷಿಪ್ ಲಭ್ಯವಾಯಿತು; ಒಂದು ವರ್ಷದ ಉನ್ನತ ಅಧ್ಯಯನಕ್ಕಾಗಿ ಅಮೆರಿಕೆಯ ಪ್ರಿನ್ಸ್‌ಟನ್ ವಿಶ್ವವಿದ್ಯಾನಿಲಯಕ್ಕೆ ತೆರಳಿದರು.

ಎರಡು ಪ್ರತಿಷ್ಠಿತ ವಿದೇಶೀ ವಿಶ್ವವಿದ್ಯಾನಿಲಯಗಳಲ್ಲಿನ ಶೈಕ್ಷಣಿಕ ಗಳಿಕೆಯಿಂದಾಗಿ ಇನ್ನೂ ಮೂವತ್ತರ ವಯಸ್ಸೂ ಆಗಿದ್ದಿಲ್ಲದ ನರಸಿಂಹಯ್ಯ ಅಮಿತ ಉತ್ಸಾಹದಿಂದ ಮಾತೃಸಂಸ್ಥೆ ಮಹಾರಾಜ ಕಾಲೇಜಿಗೆ ಹಿಂದಿರುಗಿದರು. ಅವರ ಗುರು ಪ್ರೊಫೆಸರ್ ಈಗಲ್‌ಟನ್ ಪಡೆದ ಸೇವಾನಿವೃತ್ತಿಯಿಂದಾಗಿ ತೆರವಾದ ಇಂಗ್ಲಿಷ್ ಪ್ರಾಧ್ಯಾಪಕ ಹುದ್ದೆಗೆ ನೇಮಕಗೊಂಡರು (೧೯೫೦).

ಪ್ರೊಫೆಸರ್ ಸಿ.ಡಿ. ನರಸಿಂಹಯ್ಯ ಮಹಾರಾಜ ಕಾಲೇಜಿನಲ್ಲಿನ ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯದ ಅಧ್ಯಯನಕ್ಕೆ ಹೊಸ ಆಯಾಮಗಳನ್ನು ದೊರಕಿಸಿ ಕೊಡುವುದರಲ್ಲಿ ತಮ್ಮನ್ನು ಗಾಢವಾಗಿ ತೊಡಗಿಸಿಕೊಂಡರು. ದಶಕಗಳ ಅನುಭವ-ಸೇವಾ ಹಿರಿತನಗಳ ಹೊರತಾಗಿಯೂ ಕಿರಿವಯಸ್ಸಿನ ನರಸಿಂಹಯ್ಯ ಪ್ರಾಧ್ಯಾಪಕರಾದುದು ಸಾಕಷ್ಟು ಅತೃಪ್ತಿ-ಅಸಮಾಧಾನಗಳಿಗೆ ಎಡೆಗೊಟ್ಟುದು ಸ್ವಾಭಾವಿಕವೇ. ಆದರೆ ಐವತ್ತರ ದಶಕದ ಮೊದಲ ವರ್ಷಗಳು ಉರುಳಿದಂತೆ, ವಿಭಾಗದ ಬಹುತೇಕ ಅಧ್ಯಾಪಕರು ಅವರ ಕರ್ತೃತ್ವಶೀಲತೆ ಮತ್ತು ವಿನಯಶೀಲತೆಗಳನ್ನು ಮೆಚ್ಚಿದರು. ಅನತಿ ಕಾಲದಲ್ಲಿ ಸಿ.ಡಿ.ಎನ್. ಎಂಬ ಮೂರಕ್ಷರಗಳಿಂದಲೇ ಅವರು ಅಚ್ಚುಮೆಚ್ಚಾಗಿಬಿಟ್ಟರು.

ವಿದ್ವತ್-ಕ್ಷೇತ್ರದಲ್ಲಿ ಸಿ.ಡಿ.ಎನ್. ಸಾಧನೆ ಬಹುಮುಖವಾದದ್ದು. ೧೯೭೮ರಲ್ಲಿ ಅವರು ವಿಶ್ವವಿದ್ಯಾನಿಲಯದ ೩೬ ವರ್ಷಗಳಷ್ಟು ದೀರ್ಘಕಾಲದ ಸೇವೆಯಿಂದ ನಿವೃತ್ತರಾಗುವವರೆಗೂ ಅವಿಶ್ರಾಂತ ಅಧ್ಯಾಪಕರಾಗಿ ದುಡಿದರು; ಒಂದಲ್ಲ ಒಂದು ಹೊಸ ಕ್ಷಿತಿಜವನ್ನು ಶೋಧಿಸುವುದರಲ್ಲಿಯೇ ನಿರತರಾಗಿರುತ್ತಿದ್ದರು. ಕಾಲಕ್ರಮ ಪಟ್ಟಿಯಂತೆ ತಮ್ಮ ತರಗತಿಗಳನ್ನು ತೆಗೆದುಕೊಳ್ಳುವಲ್ಲಿ ಅವರಿಂದ ಎಂದೂ ಲೋಪವಾಗಲಿಲ್ಲ. ಯಾವೊಂದು ತರಗತಿಗೂ ಅವರು ಸಾಕಷ್ಟು ಪೂರ್ವಸಿದ್ಧತೆ ಮಾಡಿಕೊಂಡೇ ಬರುತ್ತಿದ್ದುದು. ನಾನು ಅವರ ವಿದ್ಯಾರ್ಥಿಯಾಗಿದ್ದ ನಾಲ್ಕೂ ವರ್ಷಗಳಲ್ಲಿ ಒಮ್ಮೆಯಾದರೂ ಪಾಠಕ್ಕೆ ತಕ್ಕ ಸಿದ್ಧತೆಯ ಅಭಾವವನ್ನೇ ನಾನು ಅವರಲ್ಲಿ ಕಾಣಲಿಲ್ಲ. ಅವರ ತರಗತಿಗಳು (ವಿಶೇಷವಾಗಿ ಆನರ್ಸ್ ಮತ್ತು ಎಂ.ಎ.) ಕೇವಲ ಉಪನ್ಯಾಸದವುಗಳಾಗುತ್ತಿರಲಿಲ್ಲ. ಎಷ್ಟೋ ವೇಳೆ ಗುರು-ಶಿಷ್ಯರುಗಳ ಸಂವಾದದಂತಿರುತ್ತಿದ್ದವು. ತಾವು ಮಾಡುತ್ತಿದ್ದ ಪಾಠದ ಬಗ್ಗೆ 'ಫೀಡ್‌ಬ್ಯಾಕ್' ತೆಗೆದುಕೊಳ್ಳುವುದರಲ್ಲಿ ಅವರು ವಿಶೇಷ ಆಸ್ಥೆ ವಹಿಸುತ್ತಿದ್ದರು. ಶಿಕ್ಷಣ ಪ್ರಕ್ರಿಯೆಯಲ್ಲಿ ತಮ್ಮ ವಿದ್ಯಾರ್ಥಿಗಳನ್ನು ತೀವ್ರವಾಗಿ ತೊಡಗಿಸುವುದರಲ್ಲಿ ಅವರ ಆಸಕ್ತಿ ಬಹಳ. ಇಂಗ್ಲಿಷ್ ಪಠ್ಯಕ್ರಮವನ್ನು ವಿಮರ್ಶೆಗೊಳಪಡಿಸುವುದರಲ್ಲಿ ಅವರು ತಮ್ಮ ಪ್ರಾಧ್ಯಾಪಕರಾಗಿದ್ದ ಪ್ರೊಫೆಸರ್ ಎಸ್.ವಿ. ರಂಗಣ್ಣನವರ ಸಹಕಾರ ಪಡೆದು, ಆಂಗ್ಲ ಸಾಹಿತ್ಯಾಭ್ಯಾಸಿಗಳು ಕೆಲವಾರು ಅನ್ಯಭಾಷೀಯ ಸಾಹಿತ್ಯದ ತುಣುಕುಗಳನ್ನು ಅಭ್ಯಸಿಸುವಂತೆ ಮಾಡುವಲ್ಲಿ ಯಶಸ್ವಿಯಾದರು. (ಉದಾ : ಫ್ರೆಂಚ್, ಸಂಸ್ಕೃತ).

೧೯೫೬ರಲ್ಲಿ ಕಾಲೇಜಿನ ಪ್ರಿನ್ಸಿಪಾಲರಾಗಿ ನೇಮಕಗೊಂಡ ಸಿ.ಡಿ.ಎನ್. ದಂತಕಥೆಯಾದರು. ಬಡ ಮತ್ತು

೨೩ನೇ ಪುಟಕ್ಕೆ

# ಭಾರತೀಯ ಸಮಾಜದ ವಿಕಾಸ

ಭಗವತ್ ಶರಣ ಉಪಾಧ್ಯಾಯರ 'ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ' ಎಂಬ ಕೃತಿಯ ವಿಮರ್ಶೆಯನ್ನು ನೀಡುತ್ತಾ ಲೇಖಕರು ನಮ್ಮ ಬೌದ್ಧಿಕ ದಿಗಂತವನ್ನು ವಿಸ್ತರಿಸಿದ್ದಾರೆ.

ಡಾ|| ನಾ. ಸೋಮೇಶ್ವರ

**ಜೀ**ವಜಗತ್ತಿನಲ್ಲಿ ಐದು ಅಲಿಖಿತ ನಿಯಮಗಳಿವೆ. ಬ್ಯಾಕ್ಟೀರಿಯಾದಿಂದ ಹಿಡಿದು ಮಾನವನವರೆಗೆ, ಎಲ್ಲಾ ಜೀವರಾಶಿಗಳಿಗೆ ಈ ಐದು ಅಲಿಖಿತ ನಿಯಮಗಳು ಅನ್ವಯವಾಗುತ್ತವೆ. ಮೊದಲನೆಯದು, ಎಲ್ಲಾ ಜೀವರಾಶಿಗಳ ಬದುಕಿನ ಮೂಲ ಉದ್ದೇಶ ಸಂತಾನವರ್ಧನೆ. ಎರಡನೆಯ ನಿಯಮ, ಸಂತಾನ ವರ್ಧನಾ ಸಾಮರ್ಥ್ಯವನ್ನು ಗಳಿಸಿಕೊಳ್ಳಲು ಹಾಗೂ ಹೆತ್ತ ಸಂತಾನವನ್ನು ರಕ್ಷಿಸಿ ಬೆಳೆಸಲು ಅಗತ್ಯವಾದ ಆಹಾರ ಸಂಪಾದನೆ ಹಾಗೂ ಸೇವನೆ. ಮೂರನೆಯದು ಈ ಜಗತ್ತಿನಲ್ಲಿ ಪ್ರತಿಯೊಂದು ಜೀವಿಯು ತನ್ನ ಅಸ್ತಿತ್ವಕ್ಕಾಗಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಇತರ ಜೀವಿಗಳನ್ನು ಅವಲಂಬಿಸಿರಬೇಕಾದ ಅನಿವಾರ್ಯತೆ. ನಾಲ್ಕನೆಯದು, ಬದುಕುವುದಕ್ಕಾಗಿ ಜೀವಿಗಳು ಬೇಟೆಯಾಡಬೇಕಾದ ಇಲ್ಲವೇ ಬೇಟೆಯಾಗಲೇಬೇಕಾದ ಕಟುಸತ್ಯ. ಏಕೆಂದರೆ, ಕೊಂದು ತಿನ್ನುವುದೇ ಈ ಭೂಮಿಯ ನ್ಯಾಯ ಹಾಗೂ ಐದನೆಯದು, ಇಲ್ಲಿ ಬಲಶಾಲಿಯಾದದ್ದು ಬದುಕುಳಿಯುತ್ತದೆ ಹಾಗೂ ದುರ್ಬಲವಾದದ್ದು ಅಳಿಯುತ್ತದೆ ಎಂಬ ಸಾರ್ವಕಾಲಿಕ ಸತ್ಯ.

ಜೀವಜಗತ್ತಿನ ಈ ಐದು ಅಲಿಖಿತ ನಿಯಮಗಳ ಒರೆಗಲ್ಲು ಭಗವತ್ ಶರಣ ಉಪಾಧ್ಯಾಯ ಅವರು ಬರೆದಿರುವ 'ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ' ಎಂಬ ಪುಸ್ತಕ. ಪ್ರಕಟಣೆ -ನವಕರ್ನಾಟಕ ಪ್ರಕಾಶನ. ಮೂಲ ಹಿಂದಿ ಕೃತಿಯನ್ನು ಕನ್ನಡಕ್ಕೆ ತಂದವರು ಪ್ರಧಾನ್ ಗುರುದತ್ತ ಅವರು. ೧೯೮೬ರಲ್ಲಿ ಮೊದಲ ಮುದ್ರಣ ಕಂಡ ಈ ಕೃತಿ ಈಗ ೨೦೦೪ರಲ್ಲಿ ದ್ವಿತೀಯ ಮುದ್ರಣವನ್ನು ಕಂಡಿದೆ. ಇದನ್ನು ನೀವು ಓದಲೇಬೇಕು ಎಂದು ನನಗೆ ಆರ್. ಎಸ್. ರಾಜಾರಾಮ್ ಅವರು ನೀಡಿದ ಫಲ ಈ ಲೇಖನ.

ಭಗವತ್ ಶರಣ ಉಪಾಧ್ಯಾಯ ಅವರು ಮೂಲತಃ ಇತಿಹಾಸಕಾರರು ಹಾಗೂ ಪುರಾತತ್ವ ಶಾಸ್ತ್ರಜ್ಞರು. ಕಲಾ ವಿಮರ್ಶಕರಾಗಿ ಹಾಗೂ ಸಾಹಿತಿಗಳಾಗಿ ನಮ್ಮ ದೇಶದಲ್ಲಿ ದೊಡ್ಡ ಹೆಸರನ್ನು ಮಾಡಿರುವಂತಹವರು. ಅಧ್ಯಯನ, ಸಂಶೋಧನೆ ಹಾಗೂ ಅಧ್ಯಾಪನ ಇವರ ಬದುಕಿನಲ್ಲಿ ಹಾಸು ಹೊಕ್ಕಿದೆ. ನೂರಕ್ಕೂ ಹೆಚ್ಚು ಗ್ರಂಥಗಳನ್ನು ಬರೆದಿರುವ ಗಣ್ಯರ ಪ್ರಮುಖ ಕೃತಿಗಳಲ್ಲಿ ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆಯೂ ಒಂದು.

ಇದು ಮೂಲತಃ ಸಾಂಸ್ಕೃತಿಕ ಪ್ರಬಂಧಗಳ ಸಂಗ್ರಹ. ಒಟ್ಟು ೧೪ ಅಧ್ಯಾಯಗಳಿವೆ. ಇದು ನಮ್ಮ ಸಮಾಜ ಬೆಳೆದು ಬಂದ ಹಾದಿಯ ಬಗ್ಗೆ ಒಂದು ಸೂಚನೆಯನ್ನು ಮಾತ್ರ ನೀಡುತ್ತದೆ. ಇದನ್ನು ಇಡಿಯಾಗಿ ಓದಿದ ಮೇಲೆ ನಮ್ಮ ಸಮಾಜದ ಬಗ್ಗೆ ಒಂದು ಸ್ಥೂಲ ನೋಟ ಮಾತ್ರ ದೊರೆಯುತ್ತದೆಯೇ ಹೊರತು ಪರಿಪೂರ್ಣ ಚಿತ್ರ ದೊರೆಯುವುದಿಲ್ಲ. ನಮ್ಮ ಮನದಲ್ಲಿ ಮೂಡುವ ಅಸಂಖ್ಯ ಪ್ರಶ್ನೆಗಳಿಗೆ ಇಲ್ಲಿ ಉತ್ತರ ದೊರೆಯುವುದಿಲ್ಲ. ಎಷ್ಟೋ ವಿಷಯಗಳನ್ನು ಲೇಖಕರು ಪ್ರಸ್ತಾಪಿಸಿ ಅಲ್ಲಿಯೇ ಅದನ್ನು ಬಿಡುವುದರಿಂದ, ಆ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ಮೂಲ ಕೃತಿಯನ್ನು ಓದಬೇಕಾದ ಅನಿವಾರ್ಯತೆ ಸಾಕಷ್ಟು ಕಡೆ ಕಂಡುಬರುತ್ತದೆ. ಬೇರೆ ಬೇರೆ ಅವಧಿಯಲ್ಲಿ, ಬೇರೆ ಬೇರೆ ಸಂದರ್ಭದಲ್ಲಿ ಪ್ರಕಟವಾದ ಈ ಪ್ರಬಂಧಗಳಲ್ಲಿ ಸಹಜವಾಗಿ ವಿಷಯ ಪುನರಾವರ್ತನೆಯಾಗುತ್ತಾ ಹೋಗುತ್ತದೆ. ಹಾಗಾಗಿ ಏಕರೂಪತೆ ಕಂಡುಬರುವುದಿಲ್ಲ. ಇವೆಲ್ಲ ಈ ಪುಸ್ತಕದ ದೋಷಗಳಂತೆ ಭಾಸವಾದರೂ, ಒಟ್ಟು ವಿಷಯವನ್ನು ಇಡಿಯಾಗಿ ನೋಡಿದಾಗ ಇವೆಲ್ಲಾ ಗೌಣವಾಗಿಬಿಡುತ್ತವೆ. ಉಪಾಧ್ಯಾಯರು ನೀಡುವ ವಾಸ್ತವ ನೋಟ, ಭಾರತೀಯ ಸಮಾಜದ ಬಗ್ಗೆ ಸಾಂಪ್ರದಾಯಿಕ ನಿಲುವನ್ನು ಹೊಂದಿರುವವರಿಗೆ ಆಘಾತವನ್ನು ಉಂಟುಮಾಡುತ್ತದೆ. ಸಂಸ್ಕೃತದಲ್ಲಿರುವ ವೇದ ಇತ್ಯಾದಿಗಳನ್ನು ಮೂಲದಲ್ಲಿ ಓದಿ ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲದವರಿಗೆ, ಕೇವಲ ಅನುವಾದಗಳನ್ನು, ಅದರಲ್ಲಿಯೂ ಏಕಮುಖ ವಾದದ ಅನುವಾದಗಳನ್ನು ಓದಿ/ಕೇಳಿ ತಿಳಿದವರಿಗೆ ಇಲ್ಲಿನ ನಿಷ್ಪಕ್ಷಪಾತ ನೋಟ ಮತಿ-ಮನಸ್ಸುಗಳನ್ನು ಕಂಗೆಡಿಸುತ್ತದೆ. ಭಾರತೀಯ ಸಮಾಜದ ಬಗ್ಗೆ ಒಂದು ಹೊಸ ರೀತಿಯಲ್ಲಿ ಆಲೋಚಿಸುವಂತೆ ಮಾಡುತ್ತದೆ. ಇಲ್ಲಿರುವ ವಾದ, ವಿಚಾರಧಾರೆಯನ್ನು ಒಪ್ಪುವುದು ಅಥವಾ ಬಿಡುವುದು ನಂತರದ ಮಾತು. ಆದರೆ ಎಂತಹ ಕಟ್ಟಾ ಸಂಪ್ರದಾಯಸ್ಥನನ್ನಾಗಲಿ ಕ್ಷಣಕಾಲ ನಿಜಕ್ಕೂ ಸತ್ಯ ಯಾವುದು ಎಂದು ಆಲೋಚಿಸುವಂತೆ ಮಾಡುವ ಸಾಮರ್ಥ್ಯ ಈ ಪುಸ್ತಕಕ್ಕೆ ಇದೆ. ಅರಿಕೆಯಲ್ಲಿ ಪ್ರಧಾನ್ ಗುರುದತ್ತ ಅವರು ಬರೆದ ಮಾತುಗಳನ್ನು ಯಥಾವತ್ತಾಗಿ ಇಲ್ಲಿ ಉದ್ಧರಿಸಬಹುದು. 'ಇದರಲ್ಲಿ ಮೂರು ಬಗೆಯ ಲೇಖನಗಳಿವೆ. ಸಾಮಾಜಿಕ ಇತಿಹಾಸದ ದೃಷ್ಟಿಯಿಂದ ಬರೆಯಲಾಗಿರುವ ಲೇಖನಗಳು, ಸಮೀಕ್ಷಾತ್ಮಕ ಅಥವಾ ಸರ್ವೇಕ್ಷಣ ಸ್ವರೂಪದ ಲೇಖನಗಳು ಮತ್ತು ಭಾಷಾ ವೈಜ್ಞಾನಿಕ ಲೇಖನಗಳು. ಇವೆಲ್ಲಕ್ಕೂ ಹಿನ್ನೆಲೆಯಾಗಿ ತೆರೆದ, ಪೂರ್ವಗ್ರಹ ಮುಕ್ತವಾದ ವೈಜ್ಞಾನಿಕ ಮನೋಧರ್ಮವೊಂದಿದೆ. ತಮ್ಮ ಅಧ್ಯಯನ ಮತ್ತು ಸಂಶೋಧನೆಗಳ ಫಲವಾಗಿ ತಾವು ಕಂಡುಕೊಂಡ ಸತ್ಯವನ್ನು – ಅದೆಷ್ಟೇ ಅಪ್ರಿಯವಾಗಿರಲಿ – ಸಾರುವ ದಿಟ್ಟತನವೂ ಇದೆ. ಮೊದಲ ಆವೃತ್ತಿ ಪ್ರಕಟವಾದಾಗ (೧೯೫೦), ತಮ್ಮ ಲೇಖನಗಳಿಂದ ನೊಂದುಕೊಂಡಿದ್ದವರಿಗೆ ಅವರು ಕೊಟ್ಟ ಉತ್ತರ ಇಷ್ಟೇ: ''ನಾನು ಸತ್ಯವನ್ನು ಹೇಳಿದ್ದೇನೆ''. ಈ ಪುಸ್ತಕದಲ್ಲಿ ಅಪ್ರಿಯವಾದ ಸತ್ಯದ ಸಾಲುಗಳು ನಮ್ಮನ್ನು ಬೆಚ್ಚಿಬೀಳಿಸುತ್ತಾ ಹೋಗುತ್ತವೆ.'

ಗತಕಾಲವನ್ನು ಅನಾಗರಿಕ ಯುಗ ಹಾಗೂ ನಾಗರಿಕ ಯುಗ ಎಂಬ ಎರಡು ವಿಶಾಲ ಶೀರ್ಷಿಕೆಯಡಿಯಲ್ಲಿ ಅಧ್ಯಯನ ಮಾಡಬಹುದು. 'ಮೃಗೀಯ' ಗುಣಗಳನ್ನು ಮೈಗೂಡಿಸಿಕೊಂಡು, ಉಷ್ಣವಲಯದ ಕಾಡುಮೇಡುಗಳ ಮರಗಳಲ್ಲಿ ಹಾಗೂ ಗುಹೆಗಳಲ್ಲಿ ವಾಸಮಾಡುತ್ತಾ, ಬೇಟೆಯಾಡಿ ಮಾಂಸವನ್ನು ಹಾಗೂ ಅರಸಿ ಅರಸಿ ಕಂದಮೂಲಫಲಾದಿಗಳನ್ನು ತಿನ್ನುತ್ತಾ, ಮುಕ್ತವಾಗಿದ್ದ ಎರಡೂ ಕೈಗಳನ್ನು ಸಮರ್ಥವಾಗಿ ಬಳಸಿಕೊಂಡು ಕಲ್ಲಿನ ಆಯುಧಗಳನ್ನು ಸೃಜಿಸಿ, ಮಡಕೆ ಕುಡಿಕೆಗಳನ್ನು ಮಾಡಿ, ಪಶುಪಾಲನೆ ಬೇಸಾಯಗಳಲ್ಲಿ ತೊಡಗಿ, ಚಕ್ರವನ್ನು ಕಂಡು ಹಿಡಿದು ಅದರ ಸಮರ್ಥ ಬಳಕೆಯಿಂದ ಸಂಚಾರವನ್ನು ಸುಗಮವನ್ನಾಗಿಸಿಕೊಂಡು ಖಂಡಾಂತರ ವಲಸೆ ಹೊರಟ ಮಾನವನ ಕತೆ ಅನಾಗರಿಕ ಯುಗದ್ದು. ಇದಕ್ಕೆ ಯಾವುದೇ ಪುರಾವೆ ಕಡಿಮೆ. ವೈಜ್ಞಾನಿಕ ತರ್ಕಬದ್ಧತೆಯನ್ನು ಅನುಸರಿಸಿ ತಿಳಿಯಬಹುದಾದ ವಿವರಗಳಿವು. ಈ ಅವಧಿಯನ್ನು ಘೋರ ಬರ್ಬರ ಯುಗ, ಬರ್ಬರ ಯುಗ, ಪೂರ್ವ ಶಿಲಾಯುಗ, ಉತ್ತರ ಶಿಲಾಯುಗ ಎಂದು ನಿಖರವಾಗಿ ವಿಂಗಡಿಸಬಹುದು. ನಾಗರಿಕ ಯುಗವು ಮಾನವ ಅಲೆಮಾರಿ ಬದುಕನ್ನು ತೊರೆದು ಸ್ಥಾಯಿಯಾಗಿ ಒಂದೆಡೆ ನಿಂತು ವ್ಯವಸಾಯ, ಪಶುಪಾಲನೆ, ಮನೆ, ಊರು, ನಗರ, ಕೋಟೆ, ವ್ಯಾಪಾರ ವಹಿವಾಟು, ಆಕ್ರಮಣ, ಯುದ್ಧಗಳನ್ನು ಆರಂಭಿಸಿದಾಗ ಆರಂಭವಾಗುತ್ತದೆ.

ಇಂದಿನ ಬಲೂಚಿಸ್ಥಾನದ ಸುತ್ತಮುತ್ತಲ ಪ್ರದೇಶದಲ್ಲಿ ವಾಸಿಸುತ್ತಿದ್ದ ದ್ರಾವಿಡರು ಭಾರತದ ಮುಖ್ಯ ಭಾಗದೊಳಗೆ ಬಂದಾಗ ಅವರು ಅಲ್ಲಿದ್ದ ಉತ್ತರ ಶಿಲಾಯುಗದ ಜನರೊಡನೆ ಹೋರಾಡಬೇಕಾಯಿತು. ಇವರನ್ನು ಮೆಟ್ಟಿ ದ್ರಾವಿಡರು ಸಿಂಧೂ ನಾಗರಿಕತೆಯನ್ನು ಸ್ಥಾಪಿಸಿದರು. ಕ್ರಿ.ಪೂ. ೩೦೫೦-೧೫೫೦ರ ಅವಧಿಯಲ್ಲಿ ಆರ್ಯರು ಭಾರತಾಭಿಮುಖವಾಗಿ ವಲಸೆ ಬಂದು ಆಕ್ರಮಣ ಮಾಡಲಾರಂಭಿಸಿದರು. ಇವರಿಗೆ ಕುದುರೆಯ ಬೆನ್ನೇ ಮನೆಯಾಗಿತ್ತು. ಬಿಲ್ಲು ಬಾಣಗಳನ್ನು ಸಮರ್ಥವಾಗಿ ಪ್ರಯೋಗಿಸಲು ಕಲಿತಿದ್ದರು. ಇವರು ಸ್ವಭಾವತಃ ಕ್ರೂರಿಗಳಾಗಿದ್ದರು. ಎತ್ತರ ನಿಲುವಿನವರಾಗಿದ್ದು ದೃಢಕಾಯರಾಗಿದ್ದರು. ತಮ್ಮ ಪಯಣದ ಹಾದಿಯಲ್ಲಿ ಪ್ರಕೃತಿಯ ರುದ್ರ ಲೀಲೆಗಳನ್ನು ತೆರೆದ ಬಯಲಿನಲ್ಲಿ ಪ್ರತ್ಯಕ್ಷ ನೋಡಿ ಅನುಭವಿಸಿದ್ದರಿಂದ, ಪ್ರಕೃತಿಯ ವಿವಿಧ ಮುಖಗಳಾಗಿದ್ದ ನೆಲ, ಜಲ, ಮಳೆ, ಅಗ್ನಿ, ವಾಯು, ಆಕಾಶ, ಸೂರ್ಯ, ಸೂರ್ಯೋದಯ, ಸೂರ್ಯಾಸ್ತಗಳೇ ಇವರಿಗೆ ಪವಿತ್ರವಾದವು. ಇವನ್ನು ನೋಡಿ ಇವುಗಳ

ಸ್ವರೂಪವನ್ನು ಅರ್ಥಮಾಡಿಕೊಳ್ಳದ ಈ ಜನ, ಇವುಗಳ ಅಮಾನುಷ ಶಕ್ತಿಗೆ ಸ್ತಂಭೀಭೂತರಾಗಿದ್ದ ಜನ, ಈ ಶಕ್ತಿಗಳನ್ನು ಮೂರ್ತೀಕರಿಸಿ ದೇವತೆಗಳನ್ನಾಗಿಸಿ ಹಾಡಿಹೊಗಳುತ್ತಿದ್ದರು. ಯಜ್ಞ ಯಾಗಾದಿಗಳನ್ನು ಮಾಡಿ ಬಲಿಯನ್ನು ಕೊಡುತ್ತಿದ್ದರು. ಅವು ವೇದಗಳು ಎಂಬ ಹೆಸರಿನಲ್ಲಿ ಇಂದು ನಮಗೆ ಪರಿಚಿತವಾಗಿವೆ. ಸಿಂಧೂ ನಾಗರಿಕತೆಯನ್ನು ಕಟ್ಟಿದ ದ್ರಾವಿಡರು ಆರ್ಯರಿಗಿಂತ ಕುಳ್ಳಕ್ಕಿದ್ದರು. ಇವರಲ್ಲಿ ಕುದುರೆಗಳಿರಲಿಲ್ಲ, ಬಿಲ್ಲುಬಾಣಗಳಿರಲಿಲ್ಲ, ಆರ್ಯರಷ್ಟು ಕ್ರೂರಿಗಳಾಗಿರಲಿಲ್ಲ. ಆರ್ಯರ ಹಾಗೆ ಪ್ರಕೃತಿಯನ್ನು ಆರಾಧಿಸುತ್ತಿರಲಿಲ್ಲ. ಶಿಶ್ನವನ್ನು ಪೂಜಿಸುತ್ತಿದ್ದರು. ಆದರೆ ಆರ್ಯರಿಗಿಂತ ಹಲವು ವಿಧಗಳಲ್ಲಿ ನಾಗರಿಕರಾಗಿದ್ದರು. ಇವರಿಗೆ ಮನೆಗಳಿತ್ತು. ಹೊಲಗದ್ದೆಗಳಿದ್ದವು. ಹಲವು ಕುಶಲ ಕೆಲಸಗಳನ್ನು ಇವರು ಕಲಿತಿದ್ದರು. ತಮ್ಮ ಊರಿನ ಸುತ್ತ ಬಲವಾದ ಕೋಟೆಯನ್ನು ಕಟ್ಟಿಕೊಂಡಿದ್ದರು. ಇವರಲ್ಲಿ ಸಂಪತ್ತು ಹೇರಳವಾಗಿತ್ತು. ಹಾಗಾಗಿ ಪ್ರಾಕೃತಿಕ ಬದುಕನ್ನು ತೊರೆದು, ನಾಗರಿಕ ಬದುಕನ್ನು ಅಳವಡಿಸಿಕೊಂಡು ಸಾಕಷ್ಟು ಕಾಲ ಆಗಿದ್ದುದರಿಂದ, ನಾಗರಿಕತೆಯ ಶಾಪಗಳಾದ ಸೋಮಾರಿತನ ಇವರಲ್ಲಿ ಮನೆಮಾಡಿಕೊಂಡಿದ್ದು, ಇವರೆಲ್ಲ ಸುಖ ಲೋಲುಪತೆಯಲ್ಲಿ ಮುಳುಗಿ ಯುದ್ಧ ಮಾಡುವಲ್ಲಿ ಇರಬೇಕಾದ ಕಠೋರತೆಯನ್ನು ಕಳೆದುಕೊಂಡಿದ್ದರು. ಹಾಗಾಗಿ ಆರ್ಯರ ಕ್ರಮಬದ್ಧ ಹಾಗೂ ಪಶು ಸದೃಶ ದಾಳಿಗೆ ಇವರು ನುಚ್ಚುನೂರಾದರು. ದ್ರಾವಿಡರನ್ನು ನಾಶಪಡಿಸಿದ ಆರ್ಯರಿಗೆ ಅವರ ಬದುಕನ್ನು ಕಂಡು 'ಹೊಟ್ಟೆಕಿಚ್ಚು' ಬಂದಿರಬೇಕು. ಕೂಡಲೆ ಅಲೆಮಾರಿ ಬದುಕನ್ನು ತ್ಯಜಿಸಿ ತಾವೂ ನಾಗರಿಕರಾಗಲು ಹಾತೊರೆದರು. ಹಾಗಾಗಿ ದ್ರಾವಿಡರನ್ನು ಸಾರಾಸಗಟಾಗಿ ತಿರಸ್ಕರಿಸದೆ ಅವರ ಕುಶಲತೆಯನ್ನು ಸಮರ್ಪಕವಾಗಿ ಬಳಸಿಕೊಂಡು ತಾವೂ ಊರು ನಗರಗಳನ್ನು ಸ್ಥಾಪಿಸಲಾರಂಭಿಸಿದರು. ಈ ಹಂತದಲ್ಲಿ ಆರ್ಯ-ಆರ್ಯರ ನಡುವೆ ಹಾಗೂ ಆರ್ಯ-ದ್ರಾವಿಡರ ನಡುವೆ ನಡೆದ ಅಸಂಖ್ಯ ಯುದ್ಧಗಳ ವಿವರಣೆ, ಸಾಮಾಜಿಕ ಕೊಡು-ಕೊಳ್ಳುವಿಕೆಗಳ ಚಿತ್ರ ವೇದಗಳಲ್ಲಿ ದೊರೆಯುತ್ತದೆ. ಇದಕ್ಕೆ ಉತ್ತಮ ಉದಾಹರಣೆ ದಾಶರಾಜ್ಞ ಯುದ್ಧ! ಸುದಾಸನೆಂಬ ರಾಜನು ಶಿಮ್ಯು, ತುರ್ವಕ, ದ್ರುಹ್ಯು, ಕವಷ, ಪೂರು, ಅನು, ಭೇದ, ಶಂಬರ ಮತ್ತು ವೈಕರ್ಣ ಎಂಬುವವರೊಡನೆ ಯುದ್ಧ ಮಾಡಿ ಅವರನ್ನು ಗೆದ್ದ ಕತೆಯಿದೆ. ಈ ಅವಧಿಯಲ್ಲಿ ಕೆಲ ದ್ರಾವಿಡರಾದರೂ ದಕ್ಷಿಣ ಭಾರತಕ್ಕೆ ಬಂದು ನೆಲೆಸಿರಬೇಕು.



ತೋಡಿದಂತೆ ರೈತನ
ಎದೆ ತುಂಬಾ
ವೇದನೆಯ ಚಿಲುಮೆ

ಜಂಬಣ್ಣ ಅಮರಚಿಂತ
ನಂ. ೮-೧೧-೧೮೧/೭೯, ವಿದ್ಯಾನಗರ,
ರಾಯಚೂರು - ೫೮೪ ೧೦೩

ಗೆದ್ದ ಆರ್ಯರಲ್ಲಿ ಬ್ರಾಹ್ಮಣ ಹಾಗೂ ಕ್ಷತ್ರಿಯ ವರ್ಗಗಳು ರೂಪುಗೊಂಡ ಬಗೆ, ತಮ್ಮ ತಮ್ಮ ಅಸ್ತಿತ್ವಕ್ಕಾಗಿ ಅವರು ಕೈಗೊಂಡ ತಂತ್ರಗಳು ಜೀವಜಗತ್ತಿನ ನಾಲ್ಕು ಹಾಗೂ ಐದನೆಯ ನಿಯಮಗಳನ್ನು ನೆನಪಿಗೆ ತರುತ್ತವೆ. ಕ್ಷತ್ರಿಯರು ಯುದ್ಧದಲ್ಲಿ ಗೆದ್ದು ತಂದ ಸಂಪತ್ತನ್ನು ಕುಳಿತೆಡೆಯಿಂದಲೇ ದೇವರ ಹೆಸರಿನಲ್ಲಿ ಕೊಳ್ಳೆಹೊಡೆಯಲು ಬ್ರಾಹ್ಮಣರು ರೂಪಿಸಿದ ಯಜ್ಞಯಾಗಾದಿ ಕರ್ಮಕಾಂಡಗಳು ಹಾಗೂ ಅವರನ್ನು ಬೌದ್ಧಿಕವಾಗಿ ಎದುರಿಸಲು ಅಶ್ವಪತಿ, ಪ್ರವಹಣ, ಅಜಾತಶತ್ರು ಹಾಗೂ ಜನಕಮಹಾರಾಜ ರೂಪಿಸಿದ ಅಮೂರ್ತ ಬ್ರಹ್ಮ ಒಂದು ದೊಡ್ಡ ಸವಾಲನ್ನು ಒಡ್ಡಿ ಉಪನಿಷತ್ತುಗಳು ಹುಟ್ಟಲು ಕಾರಣವಾಗುತ್ತವೆ. ಜಪತಪ, ಯಜ್ಞ, ಪಶುಬಲಿ ಹಾಗೂ ದೇವತೆಗಳನ್ನು ತೃಪ್ತಿಪಡಿಸಲು ಯತ್ನಿಸುತ್ತಿದ್ದ ಬ್ರಾಹ್ಮಣರ ಅಸ್ತ್ರಗಳಿಗೆ ಪ್ರತಿಯಾಗಿ ಆತ್ಮದ ಬಗ್ಗೆ, ಮೋಕ್ಷದ ಬಗ್ಗೆ, ಪರಬ್ರಹ್ಮದ ಬಗ್ಗೆ ಕ್ಷತ್ರಿಯರು ಮಂಡಿಸಿದ ರೀತಿ ಬ್ರಾಹ್ಮಣರನ್ನು ಕಂಗೆಡಿಸಿತು. ವಸಿಷ್ಠ-ವಿಶ್ವಾಮಿತ್ರ, ಪರಶುರಾಮ-ದೇವವ್ರತ ಹಾಗೂ ತುರುಕಾವಶೇಪ-ಜನಮೇಜಯನ ಪ್ರಸಂಗಗಳು ಬ್ರಾಹ್ಮಣ ಹಾಗೂ ಕ್ಷತ್ರಿಯರ ನೇರ 'ಬಲಶಾಲಿಯಾದದ್ದು ಬದುಕುಳಿಯುವ' ನಿಯಮಕ್ಕೆ ಉತ್ತಮ ಉದಾಹರಣೆಗಳು. ಕ್ಷತ್ರಿಯನಾದ ಕೃಷ್ಣನ ಸುತ್ತ ರಚಿತಗೊಂಡ ಭಗವದ್ಗೀತೆಯು ಉಪನಿಷತ್ತುಗಳ ಸಾರ ಎಂದು ಪರಿಗಣಿತವಾಗಿ, ಕ್ಷತ್ರಿಯ ಶ್ರೇಷ್ಠತ್ವವನ್ನು ಸಾರಿತು. ಕ್ಷತ್ರಿಯರ ಬದುಕಿನ ಬಗ್ಗೆ ರಾಮಾಯಣ, ಮಹಾಭಾರತಗಳೆಂಬ ಎರಡು ಮಹಾಗ್ರಂಥಗಳು ರಚಿತವಾದವು. (ಇವನ್ನು ಬರೆದವರು ಶೂದ್ರರು. ವ್ಯಾಸರೂ ಶೂದ್ರ ಮಹಿಳೆಯಲ್ಲಿ ಜನಿಸಿದವರು. ಬ್ರಾಹ್ಮಣರ ಬಗ್ಗೆ ಇಂತಹ ಒಂದು ಗ್ರಂಥ ಯಾಕೆ ರಚಿತವಾಗಲಿಲ್ಲವೋ ?!) ಈ ಅವಧಿಯಲ್ಲಿ ಪ್ರವರ್ಧಮಾನಕ್ಕೆ ಬಂದಿದ್ದ ಬೌದ್ಧ ಧರ್ಮ ಹಾಗೂ ಜೈನ ಧರ್ಮ (ಎರಡೂ ಕ್ಷತ್ರಿಯರಿಂದ ಸ್ಥಾಪಿತವಾದಂತಹವು) ಬ್ರಾಹ್ಮಣರ ಬೌದ್ಧಿಕ ಶಕ್ತಿ ಸಾಮರ್ಥ್ಯವನ್ನು ಉಡುಗಿಸಿದವು. ಹಾಗಾಗಿ ಬ್ರಾಹ್ಮಣರು ಶಾಸ್ತ್ರದೊಡನೆ ಶಸ್ತ್ರವನ್ನೂ ಹಿಡಿದರು. ಇದರ ಫಲವಾಗಿ ಶುಂಗ ಸಾಮ್ರಾಜ್ಯ, ಚೇದಿ ಸಾಮ್ರಾಜ್ಯ ಹಾಗೂ ಆಂಧ್ರ ಶಾತವಾಹನರ ಸಾಮ್ರಾಜ್ಯಗಳು ತಲೆಯೆತ್ತಿ ನಿಂತವು. ಇವು ಅಪ್ಪಟ ಬ್ರಾಹ್ಮಣರ ಸಾಮ್ರಾಜ್ಯಗಳು! ಹಾಗಾಗಿ ಇಲ್ಲಿ ಕ್ಷತ್ರಿಯರ ಪ್ರಾಬಲ್ಯ ಕಡಿಮೆಯಾಯಿತು. ಆಗ ಕ್ಷತ್ರಿಯರು ಬ್ರಾಹ್ಮಣರೊಡನೆ ಸಂಧಿ ಮಾಡಿಕೊಂಡು ಒಟ್ಟಿಗೆ ಬದುಕಲು ಯತ್ನಿಸಿದರು. ಈ ನಡುವೆ ತೃತೀಯ ಶಕ್ತಿ ತಲೆಯೆತ್ತಿತ್ತು. ಬ್ರಾಹ್ಮಣರ ಹಾಗೆ ಕ್ಷತ್ರಿಯರೆಂಬ ಎರಡು ವರ್ಗಗಳು ಸ್ಪಷ್ಟವಾಗಿ ರೂಪುಗೊಂಡ ಮೇಲೆ ಉಳಿದವರೆಲ್ಲ ಸಹಜವಾಗಿ ಶೂದ್ರರಾದರು. ಶೂದ್ರರನ್ನು ಜೈನ ಧರ್ಮ ಹಾಗೂ ಬೌದ್ಧ ಧರ್ಮವು ಅಪಾರವಾಗಿ ಆಕರ್ಷಿಸಿತು. ಈ ಧರ್ಮಗಳಲ್ಲಿ ವರ್ಗಭೇದಗಳಿರಲಿಲ್ಲ. ಈ ನಡುವೆ ಶೂದ್ರರಲ್ಲಿ ಭಾಗವತ ಧರ್ಮ ಅಪಾರ ಜನಪ್ರಿಯತೆಯನ್ನು ಪಡೆಯಿತು. ಬ್ರಾಹ್ಮಣ ಹಾಗೂ ಕ್ಷತ್ರಿಯ ಧರ್ಮದವರು ಅಭಿಜಾತ ಕುಲದವರೆನಿಸಿಕೊಂಡಿದ್ದರು. ಇವರ ಹಾಗೂ ಶೂದ್ರರ ನಡುವೆ ಈಗ ನೇರ ಹೋರಾಟ ಆರಂಭವಾಗಿತ್ತು. ಶೂದ್ರರಾಗಿದ್ದ ನಂದರು ಮಹಾ ಸಾಮ್ರಾಜ್ಯವನ್ನು ಕಟ್ಟಿದರು. ನಂದ 'ಸರ್ವಕ್ಷತ್ರಾಂತಕ'-ಸರ್ವ ಕ್ಷತ್ರಿಯರನ್ನು ಕೊಂದವನು – ಎಂಬ ಬಿರುದನ್ನು ಧರಿಸಿದನು. ಇಲ್ಲಿ ಕ್ಷತ್ರಿಯರ ನಾಶಕ್ಕೆ ಬ್ರಾಹ್ಮಣರು ಕಾರಣರಾದರು. ರಾಕ್ಷಸ ಹಾಗೂ ಕಾತ್ಯಾಯನರೆಂಬ ಬ್ರಾಹ್ಮಣರು ನಂದರ ಮಾರ್ಗದರ್ಶಕರಾದರು. ಈ ಶೂದ್ರ ಸಾಮ್ರಾಜ್ಯ ಅವನತಿ ಹೊಂದಲು ಮತ್ತೊಬ್ಬ ಬ್ರಾಹ್ಮಣ ಕಾರಣನಾದದ್ದು ಇತಿಹಾಸದ ಒಂದು ದೊಡ್ಡ ವ್ಯಂಗ್ಯ. ನಂದರೆಂಬ ಶೂದ್ರರನ್ನು ನಾಶಮಾಡಿ, ಚಂದ್ರಗುಪ್ತನೆಂಬ ಕ್ಷತ್ರಿಯನನ್ನು ಸಿಂಹಾಸನದಲ್ಲಿ ಕೂರಿಸಲು, ಚಾಣಕ್ಯನೆಂಬ ಬ್ರಾಹ್ಮಣ ಮಹಾತಂತ್ರವನ್ನು ರೂಪಿಸಿದನು. 'ಕ್ಷಾತ್ರದ್ವಿಜತ್ವಂ ಚ ಪರಸ್ಪರಾರ್ಥಮ್' (ಬ್ರಾಹ್ಮಣ ಹಾಗೂ ಕ್ಷತ್ರಿಯರು ಒಬ್ಬರಿಗಾಗಿ ಒಬ್ಬರು ಇದ್ದಾರೆ) ಎಂಬ ಸೂತ್ರ ಯಶಸ್ವಿಯಾಯಿತು. ಆದರೆ ಚಂದ್ರಗುಪ್ತ ತನ್ನ ಕೊನೆಯ ದಿನಗಳಲ್ಲಿ ಜೈನನಾದನು. ಅಶೋಕನು ಬೌದ್ಧ ಧರ್ಮವನ್ನು ಅವಲಂಬಿಸಿದನು. ಬ್ರಾಹ್ಮಣ ಧರ್ಮ ಅವನತಿಯನ್ನು ಹೊಂದಿತು. ಮತ್ತೆ ಬ್ರಾಹ್ಮಣ ಧರ್ಮ ತಲೆಯೆತ್ತಿ, ಬೌದ್ಧ ಧರ್ಮ ಸ್ವಲ್ಪ ಅವನತಿಯನ್ನು ಶಂಕರಾಚಾರ್ಯ, ಕುಮಾರಿಲ ಭಟ್ಟ ಮುಂತಾದವರಿಂದ ಕಾಣುವಂತಾಯಿತು. ಮುಂದಿನ ದಿನಗಳಲ್ಲಿ ಹೂಣರು, ಯವನರು, ಶಕರು, ಕುಶಾನರು, ಚೌಟರು, ಅಭೀರರು, ಗುರ್ಜರು ಇತ್ಯಾದಿ ವಿದೇಶೀಯರು ಭಾರತದ ಮೇಲೆ ಸತತ

## ಪುಸ್ತಕ ಬಿಡುಗಡೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮ

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರವು **ಅಚಲ** ಪತ್ರಿಕೆಗೆ ೨೦ ತುಂಬಿದ ಸಂದರ್ಭದಲ್ಲಿ ಪುಸ್ತಕ ಬಿಡುಗಡೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮ ಹಮ್ಮಿಕೊಂಡಿದೆ. ದಿನಾಂಕ ೨೨.೦೫.೨೦೦೫ರಂದು ನಯನ ಸಭಾಂಗಣದಲ್ಲಿ **ಜಾಗೃತಿ ಗೀತೆಗಳು** ಮತ್ತು ನೇಮಿಚಂದ್ರರ **ಬದುಕು ಬದಲಿಸಬಹುದು** ಕೃತಿಗಳು ಬಿಡುಗಡೆಯಾಗಲಿವೆ. ಬೆಂಗಳೂರು **ಇಪ್ಟಾ** ತಂಡದವರು ಜಾಗೃತಿ ಗೀತೆಗಳನ್ನು ಹಾಡುತ್ತಾರೆ. ಶ್ರೀಮತಿ ಎನ್. ಮಂಗಳ **ಊರ್ಮಿಳಾ** ರಂಗ ಪ್ರಯೋಗ ನಡೆಸಿಕೊಡುತ್ತಾರೆ. ಶ್ರೀಮತಿ ಗೀತಾ ನಾಗಭೂಷಣ ಮುಖ್ಯ ಅತಿಥಿಗಳು. ಶ್ರೀಮತಿ ಹೇಮಲತಾ ಮಹಿಷಿಯವರ ಅಧ್ಯಕ್ಷತೆ.

ದಾಳಿ ನಡೆಸಿ, ಇಲ್ಲಿನವರಲ್ಲಿ ಒಂದಾದರು. ಇವರನ್ನು ಬ್ರಾಹ್ಮಣರು ರಜಪೂತರೆಂದು ಕರೆದು ಅವರಿಗೆ ಕ್ಷತ್ರಿಯ ಸ್ಥಾನವನ್ನು ನೀಡಿದರು.

ಹೀಗೆ ಪ್ರಾಚೀನ ಭಾರತದ ಸಮಾಜದ ಏಳುಬೀಳುಗಳು ಹಾಗೂ ಅಸ್ತಿತ್ವಕ್ಕಾಗಿ ಬ್ರಾಹ್ಮಣ, ಕ್ಷತ್ರಿಯ ಹಾಗೂ ಶೂದ್ರರ ನಡುವೆ ನಡೆದ ಹೋರಾಟಗಳು, ಹಿಂದೂ ಧರ್ಮ, ಜೈನಧರ್ಮ ಹಾಗೂ ಬೌದ್ಧಧರ್ಮ, ವಿಶೇಷವಾಗಿ ಬೌದ್ಧ ಧರ್ಮ ತನ್ನ ಅಸ್ತಿತ್ವಕ್ಕಾಗಿ ಮಹಾಯಾನದಿಂದ ಮಂತ್ರಯಾನಕ್ಕೆ, ಮಂತ್ರಯಾನದಿಂದ ವಜ್ರಯಾನಕ್ಕೆ ತಿರುಗಿ, ಭಾರತೀಯ ಸಮಾಜ ಹಿಂದೆಂದೂ ಕಾಣದಂತಹ ಲೈಂಗಿಕ ಕರ್ಮ ಕಾಂಡಗಳಲ್ಲಿ ತೊಡಗಿತು. ಈ ಅವಧಿಯಲ್ಲೇ ವಜ್ರಯಾನಿ ಸಿದ್ಧರ ಜೊತೆಯಲ್ಲಿ ಶಾಕ್ತರು, ಕಾಪಾಲಿಕರು ಹಾಗೂ ಅಘೋರಿಗಳು ಹುಟ್ಟಿಕೊಂಡರು. ಒರಿಸ್ಸಾದ ದೇವಾಲಯಗಳಲ್ಲಿ ಮಿಥುನ ಶಿಲ್ಪಗಳು ರಾರಾಜಿಸಿದವು. ಕೊನಾರ್ಕದ ವಿಶ್ವವಿಖ್ಯಾತ ಸೂರ್ಯ ದೇವಾಲಯ ನಿರ್ಮಾಣವಾಯಿತು. ಕುಮಾರಿ ಪೂಜೆ ಜನಪ್ರಿಯವಾಯಿತು. ಹೆಂಡತಿ, ತಾಯಿ, ಸೋದರಿ, ಮಗಳು ಮುಂತಾದವರ ನಡುವೆ ಯಾವುದೇ ವ್ಯತ್ಯಾಸ ಉಳಿಯಲಿಲ್ಲ. ಹೆಣ್ಣುಜಾತಿ ವಿಷಯ ಲಾಲಸೆಯನ್ನು ಪೂರೈಸುವ ಸಾಧನ ಮಾತ್ರವಾಗಿ ನಾಗರಿಕ ಯುಗದಲ್ಲಿ ಅನಾಗರಿಕ ಯುಗ ಸ್ಥಾಪಿತವಾಯಿತು !

ಇದು ಹಲವು ಲೇಖನಗಳಲ್ಲಿ ದೊರೆಯುವ ಮಾಹಿತಿಯನ್ನು ಒಂದೆಡೆ ಕಲೆಹಾಕಿದಾಗ ನಮಗೆ ದೊರೆಯುವ ಪ್ರಾಚೀನ ಭಾರತೀಯ ಸಮಾಜದ ಒಂದು ಸ್ಥೂಲ ಚಿತ್ರ ! ಭಾರತೀಯ ಚಿಂತನೆಯಲ್ಲಿರುವ ದ್ವಂದ್ವಗಳ ಬಗ್ಗೆ, ಭಾರತೀಯ ಸಂಸ್ಕೃತಿ ನಿರ್ಮಾಣಕ್ಕೆ




ವಿವಿಧ ಸಂಸ್ಕೃತಿಗಳ ಕೊಡುಗೆಯ ಬಗ್ಗೆ, ವರ್ಣ ವ್ಯವಸ್ಥೆಯ ಬಗ್ಗೆ, ಈ ನೆಲದ ಮೇಲೆ ನಡೆದ ಸತತ ಆಕ್ರಮಣಗಳ ಬಗ್ಗೆ, ಇಲ್ಲಿನ ನಾರಿಯರ ಅಧೋಗತಿ ಹಾಗೂ ಮುನ್ನಡೆಯ ಬಗ್ಗೆ, ದಾಸ ಪದ್ಧತಿಯ ಬಗ್ಗೆ ಹೊಸ ಹೊಳಹುಗಳನ್ನು ನೀಡುವ ಲೇಖನಗಳೂ ಇಲ್ಲಿವೆ.

ಪುಸ್ತಕದಲ್ಲಿ ಕೆಲವು ಕೊರತೆಗಳಿವೆ. ಮೊದಲನೆಯದು ಕೆಲವು ವಿಷಯಗಳ ಪುನರಾವರ್ತನೆ. ಇದು ಬೇಸರವನ್ನು ತರಿಸುತ್ತದೆ. ಹಲವು ಲೇಖನಗಳಲ್ಲಿ ಭಾರತದ ನಕ್ಷೆಗಳನ್ನು ಉಪಯೋಗಿಸಿದ್ದರೆ ಮಾಹಿತಿ ಸಂವಹನ ಸುಲಭವಾಗಿ ಬಿಡುತ್ತಿತ್ತು. ಇಸವಿಗಳ ಗೊಂದಲವಿದೆ. ಪರಾಮರ್ಶನ ಗ್ರಂಥಗಳ ಪಟ್ಟಿ ಒಂದು ತೀರಾ ಅಗತ್ಯವೆನಿಸುತ್ತದೆ. ಅನುವಾದಕರು ನೀಡಿದ ಅಡಿ ಟಿಪ್ಪಣಿಗಳು ಒಂದು ಸ್ತುತ್ಯಕಾರ್ಯ. ಇದು ಅನುವಾದಕರು ಮಕ್ಕಿ ಕಾ ಮಕ್ಕಿ ಅನುವಾದ ಮಾಡುವ ಬದಲು, ಇದನ್ನು ಕೂಲಂಕಷವಾಗಿ ಅಧ್ಯಯನ ಮಾಡಿ, ಅರ್ಥಮಾಡಿಕೊಂಡು, ಅಗತ್ಯ ಪರಾಮರ್ಶನ ಗ್ರಂಥಗಳನ್ನು ನೋಡಿ ಪೂರಕ ಮಾಹಿತಿಗಳನ್ನು ನೀಡಿರುವುದು ಸ್ಪಷ್ಟವಾಗುತ್ತದೆ. ಇದು ವಿಷಯಕ್ಕೆ ನೂತನ ಪ್ರವೇಶ ಮಾಡುವವರಿಗೆ ಸಹಕಾರಿಯಾಗಿದೆ. ಕಾಗದ ಮುದ್ರಣಗಳು ಚೆನ್ನಾಗಿವೆಯಾದರೂ ಅಲ್ಲೊಂದು ಇಲ್ಲೊಂದು ಕಾಗುಣಿತ ದೋಷಗಳು ಉಳಿದುಬಿಟ್ಟಿವೆ. ಕನ್ನಡದ ವಾಕ್ಯಗಳು ಸ್ವಲ್ಪ ಉದ್ದವಾಯಿತು ಎಂದು ಕೆಲವು ಕಡೆ ಅನಿಸುತ್ತದೆ.

ನಿಜವಾದ ಭಾರತ ಎಂತಹದ್ದು, ನಿಜವಾದ ಭಾರತೀಯರು ಯಾರು, ನಿಜವಾದ ಹಿಂದೂ ಧರ್ಮ ಎಂದರೆ ಏನು ಎಂದು ತಿಳಿದುಕೊಳ್ಳುವ ಕುತೂಹಲ ಇರುವವರು ಈ ಪುಸ್ತಕವನ್ನು ಓದಬೇಕು. ಆದರೆ ಈ ಪುಸ್ತಕವನ್ನು ಓದಿದ ನಂತರ ಅವರೆಲ್ಲರಿಗೂ ಪೂರ್ಣ ಉತ್ತರ ದೊರೆಯುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಆದರೆ ಇದು ಮತ್ತಷ್ಟು ಪರಾಮರ್ಶನ ಗ್ರಂಥಗಳನ್ನು ಓದಿ ವಿಷಯವನ್ನು ಆಳವಾಗಿ ಅಧ್ಯಯನ ಮಾಡಲು ಅಗತ್ಯವಾದ ಕುತೂಹಲ ಹಾಗೂ ಸ್ಫೂರ್ತಿಯನ್ನು ನೀಡುತ್ತದೆ ಎಂದು ಖಂಡಿತಾ ಹೇಳಬಹುದು.

**ಡಾ॥ ನಾ. ಸೋಮೇಶ್ವರ**
ಡಿ/೫, ೧೮೬, 'ಜನನಿ', ೪೦೭, ಎಸ್‌ಎಫ್.ಎಸ್. ೨ನೇ ಮುಖ್ಯರಸ್ತೆ,
೩ನೇ ಕ್ರಾಸ್, ಯಲಹಂಕ ಉ.ನ., ಜಿ.ಕೆ.ವಿ.ಕೆ. ಅಂಚೆ,
ಬೆಂಗಳೂರು - ೫೬೦ ೦೬೪

---

*೨೦ನೇ ಪುಟದಿಂದ*

ಅರ್ಹ ವಿದ್ಯಾರ್ಥಿಗಳಿಗೆ ಬೋಧನಾಶುಲ್ಕದ ರಿಯಾಯಿತಿ ಹಾಗೂ ವಿದ್ಯಾರ್ಥಿ ವೇತನಗಳನ್ನು ನೀಡುವ ಕ್ರಮದಲ್ಲಿ ಸುಧಾರಣೆಗಳನ್ನು ತಂದು ವಿದ್ಯಾರ್ಥಿಸ್ತೋಮದ ಪ್ರೀತಿ-ಗೌರವಗಳಿಗೆ ಪಾತ್ರರಾದರು. ಒಪ್ಪೊತ್ತಿನ ಊಟಕ್ಕೂ ಗತಿಯಿರುತ್ತಿದ್ದಿಲ್ಲದ ವಿದ್ಯಾರ್ಥಿಗಳಿಗೆ ಎರಡೂ ಹೊತ್ತಿನ ಸುಗ್ರಾಸ ಭೋಜನ ಕಾಲೇಜಿನ 'ಹೆಲ್ತ್ ಕಿಚನ್'ನಲ್ಲಿ ತಿಂಗಳಿಗೆ ಕೇವಲ ಹದಿನಾರು ರೂಪಾಯಿಗಳ ಪಾವತಿಗೆ ದೊರಕುವಂತಾದುದು ಸಿ.ಡಿ.ಎನ್. ಬಡವರ ಬಗೆಗೆ ಇದ್ದ ಅನುಕಂಪದಿಂದಾಗಿ.

ವಿಶ್ವವಿದ್ಯಾನಿಲಯದ ಸೇವೆಯಿಂದ ನಿವೃತ್ತರಾದರೂ, ಶಿಕ್ಷಣ ಹಾಗೂ ಸಂಶೋಧನಾ ಕ್ಷೇತ್ರಗಳಿಂದ ಅವರು ನಿವೃತ್ತಿ ಬಯಸಲಿಲ್ಲ. ೧೯೭೬ರಲ್ಲಿ ಅವರು ಸ್ಥಾಪಿಸಿದ, 'ಧ್ವನ್ಯಾಲೋಕ' ಮೈಸೂರಿನ ಸಾಂಸ್ಕೃತಿಕ ಲೋಕದಲ್ಲಿ ಒಂದು ಪ್ರತಿಷ್ಠಿತ ಹೆಮ್ಮರವಾಗಿ ಬೆಳೆದಿದೆ. ಇಲ್ಲಿ ನಡೆದಿರುವ ರಾಷ್ಟ್ರೀಯ, ಅಂತರರಾಷ್ಟ್ರೀಯ ಮಟ್ಟದ ವಿಚಾರಗೋಷ್ಠಿಗಳಿಗೆ, ವಿದ್ವತ್-ಸಭೆಗಳಿಗೆ ಲೆಕ್ಕವಿಲ್ಲ. ಕೇವಲ ಸಾಹಿತ್ಯವಲ್ಲದೆ ನಾನಾ ವಿಚಾರಕ್ಷೇತ್ರಗಳ ಪಂಡಿತಾಗ್ರಣಿಗಳು ಇಲ್ಲಿಗೆ ಭೇಟಿ ನೀಡಿ, ಇಲ್ಲಿಯ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಮೂಲಕ ಸಿ.ಡಿ.ಎನ್. ಅವರನ್ನು ಗೌರವಿಸಿದ್ದಾರೆ; ಹೀಗೆ ಮಾಡುವುದು ತಮಗೆ ಸಂದ ಗೌರವ ಎಂದು ಭಾವಿಸಿದವರೂ ಅನೇಕರು. 'ಧ್ವನ್ಯಾಲೋಕ'ದ ಬಾಗಿಲು ಪಂಡಿತರುಗಳಿಗೆ ಮಾತ್ರವಲ್ಲದೆ ಸಾಮಾನ್ಯರಿಗೂ ತೆರೆದದ್ದು; ಹರಿಕಥಾ ಕಾಲಕ್ಷೇಪ, ಯಕ್ಷಗಾನ, ತೊಗಲುಬೊಂಬೆ ಆಟ, ಹಾದಿ-ಬೀದಿ ನಾಟಕ, ವಿಶಿಷ್ಟ ಹಬ್ಬಹರಿದಿನಗಳ ಸಮಾರಂಭದಂಥ ಕಾರ್ಯಕ್ರಮಗಳೂ ಇಲ್ಲಿ ನಡೆಯುತ್ತಿರುತ್ತವೆ. ಪ್ರಸಕ್ತ ಸಾಮಾಜಿಕ, ಆರ್ಥಿಕ, ರಾಜಕೀಯ ಆಗುಹೋಗುಗಳನ್ನು ಕುರಿತ ವಿಚಾರಗೋಷ್ಠಿಗಳು, ಅನೌಪಚಾರಿಕ ಸಂವಾದಗಳಿಗೂ ಇದು ವೇದಿಕೆ.

ಸಿ.ಡಿ.ಎನ್. ಯಾರಲ್ಲೂ ಭಿನ್ನಾಭಿಪ್ರಾಯವನ್ನು ಗೌರವಿಸುವವರಾಗಿದ್ದರು; ತಮ್ಮ ಸಂಪರ್ಕಕ್ಕೆ ಬಂದವರಲ್ಲಿ ಲೋಪವನ್ನೇ ಹುಡುಕಹೋಗದೆ, ಗುಣದ ಅನ್ವೇಷಣೆ ಮಾಡುತ್ತಿದ್ದವರು. ಸ್ಥಾನಮಾನಗಳಲ್ಲಿ ಏಳಿಗೆಗಾಗಿ ಕಾತರಿಸುವ ವಯಸ್ಸಿನಲ್ಲಿ ಮನುಷ್ಯ ಸಹಜವಾದ ಸಣ್ಣಪುಟ್ಟ ದೌರ್ಬಲ್ಯಗಳಿಗೆ ಸಿ.ಡಿ.ಎನ್. ಹೊರತಾಗಿರಲಿಲ್ಲ. ಆದರೆ ಆ ಆಸೆ-ಆಕಾಂಕ್ಷೆಗಳೇ, ದೌರ್ಬಲ್ಯಗಳೇ ದೃಢಕಾಯವಾಗುವ ಮುನ್ನವೇ ಅವನ್ನು ಮೆಟ್ಟಿನಿಂತು ತಮ್ಮ ಸುಸಂಸ್ಕೃತ, ವಿದ್ವತ್‌ಪೂರ್ಣ, ಅರ್ಥವತ್ತಾದ ಜೀವನವನ್ನು ಮೆರೆದವರು ಸಿ.ಡಿ.ಎನ್. ಸಿ.ಡಿ.ಎನ್. ಅವರಿಗೆ ಸಂದಾಯವಾಗಿರುವ ರಾಜ್ಯಮಟ್ಟದ, ರಾಷ್ಟ್ರೀಯ ಹಾಗೂ ಅಂತರ ರಾಷ್ಟ್ರೀಯ ಗೌರವಗಳು ಅಸಂಖ್ಯಾತ. ಅವರು ರಚಿಸಿರುವ ಹಾಗೂ ಸಂಪಾದಿಸಿರುವ ಕೃತಿಗಳು ಅನೇಕ. ಸುಮಾರು ಅರವತ್ತು ವರ್ಷಗಳ ಕಾಲದ ಅವರ ಜೀವನಸಂಗಾತಿಯ ನಿಧನದಿಂದಾಗಲಿ, ಅದಕ್ಕೂ ಮುನ್ನ, ಉತ್ಸಾಹದ ಬುಗ್ಗೆಯಂತಿದ್ದ ಮಗ ಸಂಜಯನ ಅಕಾಲಿಕ ಮರಣದಿಂದಾಗಲಿ ವಿಚಲಿತರಾಗದೆ, ತಮ್ಮ ಅಧ್ಯಯನಶೀಲತೆ, ಕಾರ್ಯಕ್ರಮಗಳನ್ನು ತಮ್ಮ ಜೀವಿತದ ಕಡೆಯವರೆಗೂ ಮುಂದುವರೆಸಿಕೊಂಡು ಬಂದವರು ಅವರು.

'ಧ್ವನ್ಯಾಲೋಕ' ಸದ್ಯಕ್ಕಂತೂ ಬಡವಾಗಿದೆ. ಅದನ್ನು ಉಳಿಸಿ ಮತ್ತಷ್ಟು ಬೆಳೆಸಿ, ಇಂತಹ ಸಂಸ್ಥೆಯನ್ನು ಸ್ಥಾಪಿಸಿ ಅದಕ್ಕೆ ನೀರೆರೆದವರು ಸಿ.ಡಿ.ಎನ್. ಎಂದು ಮುಂದೆ ಬರುವವರು ನೆನೆಸಿಕೊಳ್ಳುವಂತೆ ಮಾಡುವ ಜವಾಬ್ದಾರಿಯ ಹೊರೆ ಅವರ ಕುಟುಂಬವರ್ಗದವರ ಮತ್ತು ಟ್ರಸ್ಟಿಗಳ ಮೇಲಿದೆ. ಹಾಗೆ ಮಾಡುವುದರಲ್ಲಿ ನಮ್ಮ ಅರ್ಥಪೂರ್ಣ ಕೃತಜ್ಞತೆಯಿದೆ.

ಜೀವನ-ಪ್ರೀತಿಗೆ ಅನ್ವರ್ಥನಾಮವೆಂಬಂತಿದ್ದ ಸಿ.ಡಿ.ಎನ್. ಇದೀಗ 'ಒಂದು ನೆನಪು' ಆಗಿಬಿಟ್ಟಿದ್ದಾರೆ. ನನ್ನಂತಹ ಸಾವಿರಾರು ಜನರಿಗೆ ಈ ನೆನಪು ದೀರ್ಘಕಾಲ ಉಳಿಯುವಂಥದ್ದು; ಇಂತಹ ಸಜ್ಜನ ವಿದ್ವನ್ಮಣಿಯೊಂದಿಗೆ ನಾವು, ಇದ್ದೆವೆಂಬ ಧನ್ಯತೆಯ ಭಾವ ತಂದುಕೊಡಬಲ್ಲ ನೆನಪು !

**ಎಂ. ಸತ್ಯನಾರಾಯಣರಾವ್**
ಗೀತಾ ಬುಕ್ ಹೌಸ್, ಕೃಷ್ಣರಾಜೇಂದ್ರ ವೃತ್ತ, ಮೈಸೂರು - ೫೭೦ ೦೦೧

# ಭಾರತ-ಚೀಣಾ ಸಂಬಂಧ ಹೊಸ ಹಾದಿಯಲ್ಲಿ




**ಭಾ**ರತ-ಚೀಣಾ ಸಂಬಂಧಗಳು ಸರಿಯಾದ ಮಾರ್ಗದಲ್ಲಿ ಮುನ್ನಡೆಯುವ ಭರವಸೆ ಈಗ ದೃಢಗೊಂಡಿದೆ. ಮುಂಬರುವ ದಿನಗಳಲ್ಲಿ ಎರಡೂ ದೇಶಗಳು ಪರಸ್ಪರ ಸಹಕಾರದಿಂದ ಜಾಗತಿಕ ವ್ಯವಹಾರಗಳಲ್ಲಿ ಪ್ರಮುಖ ಪಾತ್ರ ವಹಿಸುವ ನಿರೀಕ್ಷೆ ಇದೆ. ಚೀಣಾ ಜನತಾ ಗಣರಾಜ್ಯ ಅಸ್ತಿತ್ವಕ್ಕೆ ಬಂದ ಮೊದಲ ವರ್ಷಗಳಲ್ಲಿ ಕಂಡುಬಂದ ಉತ್ಸಾಹದ ಸಹಯೋಗ, ಮೈತ್ರಿಭಾವನೆ ಮತ್ತೆ ಮೂಡಲು ಇನ್ನೂ ಸಾಕಷ್ಟು ಕಾಲ ಹಿಡಿದೀತೆನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಆ ದಿಶೆಯಲ್ಲಿ ಅಡಿಯಿರಿಸಿರುವುದೀಗ ಸ್ವಾಗತಾರ್ಹ ಬೆಳವಣಿಗೆ. ಪ್ರಪಂಚದ ಜನಸಂಖ್ಯೆಯಲ್ಲಿ ಸುಮಾರು ಮೂರನೇ ಒಂದು ಭಾಗವನ್ನು ಪ್ರತಿನಿಧಿಸುವ, ಏಶಿಯಾ ಖಂಡದ ಬೃಹತ್ ರಾಷ್ಟ್ರಗಳಾಗಿರುವ ಭಾರತ-ಚೀಣಾಗಳು ಕೈಜೋಡಿಸಿದರೆ ಅತ್ಯಂತ ಪರಿಣಾಮಕಾರಿ ಪ್ರಭಾವ ಬೀರುವ ಶಕ್ತಿಯಾಗಲು ಸಾಧ್ಯವಿದೆ. ಇದರ ಜೊತೆಗೆ ರಷ್ಯಾ ಕೂಡ ಸೇರಿದರೆ ಜಗತ್ತಿನ ಚಹರೆಯೇ ಬದಲಾದೀತು. ಈ ಪರಿಕಲ್ಪನೆ ಹೊಸದೇನಲ್ಲ. ಅದು ಕೈಗೂಡಲಿ ಎಂಬುದಷ್ಟೇ ಆಶಯ.

ಚೀಣಾದ ಪ್ರಧಾನಿ ವೆನ್ ಜಿಯಾಬೊ ಭಾರತಕ್ಕೆ ನೀಡಿದ ಭೇಟಿ, ಪ್ರಧಾನಿ ಮನಮೋಹನ್ ಸಿಂಗ್ ಜೊತೆ ಅವರು ನಡೆಸಿದ ಮಾತುಕತೆ, ಸಹಿ ಹಾಕಿದ ಒಪ್ಪಂದಗಳು, ಮುಖ್ಯವಾಗಿ ಗಡಿವಿವಾದ ಬಗೆಹರಿಸಲು ಅಂಗೀಕರಿಸಿರುವ ಮಾರ್ಗಸೂಚಿಗಳು, ಎರಡೂ ದೇಶಗಳ ಪ್ರಧಾನಿಗಳು ನೀಡಿರುವ ಜಂಟಿ ಹೇಳಿಕೆ, ಇವೆಲ್ಲ ಭಾರತ ಮತ್ತು ಚೀಣಾಗಳ ಮಧ್ಯೆ ಬಾಂಧವ್ಯದ ಬೆಸುಗೆಗೆ ಹೊಸ ಆಶಾಭಾವನೆ ಉಂಟುಮಾಡಿದೆ. ಪರಸ್ಪರ ಅಪನಂಬಿಕೆ ನೀಗಿಸಿ, ಹೊಸವಿಶ್ವಾಸ ಮೂಡಿಸುವುದರಲ್ಲಿ ಇದು ಪರ್ವಕಾಲ. ಈ ಬೆಳವಣಿಗೆ ಏಕಾಏಕಿಯಾಗಿ ಆದದ್ದಲ್ಲ. ಕಳೆದ ಕೆಲವರ್ಷಗಳಿಂದಲೂ ಅಲ್ಲ, ಎರಡೂ ರಾಷ್ಟ್ರಗಳು ಜಾಗರೂಕತೆಯಿಂದ, ಹಂತಹಂತವಾಗಿ ಕೈಗೊಂಡ ವಿಶ್ವಾಸ ಮೂಡಿಸುವ ಪ್ರಕ್ರಿಯೆಯ ಫಲ. ಎರಡೂ ದೇಶಗಳ ಹಿತಾಸಕ್ತಿಗಳಿಗೆ ಅನುಗುಣವಾಗಿರುವಂತೆ ಮಾಡಿಕೊಂಡಿರುವ ಒಪ್ಪಂದಗಳನ್ನು ಪ್ರಾಮಾಣಿಕವಾಗಿ ಕಾರ್ಯಗತ ಮಾಡುವುದೇ ಮುಂದಿರುವ ಗುರಿಯಾಗಿರಬೇಕು.

ನಾಲ್ಕು ದಶಕಗಳ ಹಿಂದೆ ವಿಶ್ವಾಸಘಾತಕವಾದ ರೀತಿಯಲ್ಲಿ ನಮ್ಮ ದೇಶದ ಈಶಾನ್ಯ ಗಡಿ ಪ್ರದೇಶದಲ್ಲಿ ಚೀಣಾ ನಡೆಸಿದ ದುರಾಕ್ರಮಣ ಭಾರತದ ಜನತೆಯಲ್ಲಿ ಚೀಣಾದ ಬಗ್ಗೆ ಇದ್ದ ವಿಶ್ವಾಸ, ಮೈತ್ರಿಭಾವನೆಗಳನ್ನು ಬುಡಮೇಲಾಗಿಸಿತು. ನಂತರದ ವರ್ಷಗಳಲ್ಲಿ ಚೀಣಾ ಅನುಸರಿಸಿದ ನೀತಿ, ಕೈಗೊಂಡ ಕ್ರಮಗಳು ಭಾರತ ಹಿತಾಸಕ್ತಿಗಳಿಗೆ ವಿರುದ್ಧವಾದುವೇ ಆಗಿದ್ದುವು. ಚೀಣಾ ಅಂದು ತನ್ನ ಸಂಕುಚಿತ ರಾಷ್ಟ್ರೀಯ ದುರಭಿಮಾನದಿಂದ ಕೈಗೊಂಡ ಕ್ರಮಗಳು ಅವು. ಇದೇ ಬಗೆಯ ಧೋರಣೆಯನ್ನು ಅಂದಿನ ಸೋವಿಯತ್ ಒಕ್ಕೂಟದ ವಿಷಯದಲ್ಲೂ ಅದು ಅನುಸರಿಸಿತ್ತು. ಈ ಹಿನ್ನೆಲೆಯನ್ನು ನೆನಪಿನಿಂದ ಅಳಿಸಿ ಹಾಕಲು ಸಾಧ್ಯವಿಲ್ಲ. ಆದರಿಂದ ಕಲಿತ ಪಾಠದಿಂದ ಎಚ್ಚರವಹಿಸಿ ಸಂಬಂಧಗಳನ್ನು ಬೆಳೆಸಬೇಕಾಗಿದೆ. ಈ ಕಾಲಾವಧಿಯಲ್ಲಿ ಎರಡೂ ದೇಶಗಳಲ್ಲಷ್ಟೇ ಅಲ್ಲದೆ, ಅಂತರರಾಷ್ಟ್ರೀಯ ಕ್ಷೇತ್ರದಲ್ಲೂ ಸಾಕಷ್ಟು ಬದಲಾವಣೆಗಳಾಗಿವೆ. ಈಗಿನ ಏಕಶಕ್ತಿಕೇಂದ್ರಿತ ಜಗತ್ತಿನಲ್ಲಿ ಜಾಗತೀಕರಣ, ಉದಾರೀಕರಣದ ಹೆಸರಿನಲ್ಲಿ ಮುಕ್ತ ಮಾರುಕಟ್ಟೆ ಆರ್ಥಿಕ ವ್ಯವಸ್ಥೆಯನ್ನು ಎಲ್ಲ ದೇಶಗಳ ಮೇಲೂ ಹೊರಿಸಲು ನೋಡುತ್ತಿರುವ ಸಾಮ್ರಾಜ್ಯಶಾಹಿ ಶಕ್ತಿಗಳನ್ನು ಎದುರಿಸುವುದಕ್ಕೆ ಅಭಿವೃದ್ಧಿಶೀಲ ದೇಶಗಳ ಸಮಷ್ಟಿ ಪ್ರಯತ್ನ ಅಗತ್ಯವಾಗಿದೆ. ಇದರಲ್ಲಿ ಭಾರತ-ಚೀಣಾಗಳು ಪ್ರಮುಖ ಪಾತ್ರ ವಹಿಸಬಲ್ಲವಾಗಿವೆ. ಇದನ್ನು ಚೀಣಾ ಕೂಡ ಮನಗಂಡಿರಲು ಸಾಕು.

ಭಾರತದಂತೆಯೇ ಅಭಿವೃದ್ಧಿಶೀಲ ರಾಷ್ಟ್ರವಾಗಿರುವ ಚೀಣಾ ವಿದೇಶೀ ಬಂಡವಾಳವನ್ನು ಆಕರ್ಷಿಸುವುದರಲ್ಲಿ ಮುಂದಿದೆ. ಅದು ಎದುರಿಸುತ್ತಿರುವ ಸಮಸ್ಯೆಗಳು ಕೂಡ ಬಹುತೇಕವಾಗಿ ಭಾರತ ಎದುರಿಸುತ್ತಿರುವಂಥವೆ ಎನ್ನಬಹುದು. ಹಾಗಾಗಿ ಪರಸ್ಪರ ಸಹಕಾರ ಅಗತ್ಯ. ಭಾರತದೊಂದಿಗೆ ಮಾಡಿಕೊಂಡಿರುವ ಒಪ್ಪಂದಗಳಲ್ಲಿ ಆರ್ಥಿಕ ಸಂಬಂಧಗಳಿಗೆ ಹೆಚ್ಚಿನ ಒತ್ತಡ ನೀಡಿರುವುದರಲ್ಲಿ ಅದನ್ನು ಕಾಣಬಹುದಾಗಿದೆ. ಪ್ರಾದೇಶಿಕ ವಾಣಿಜ್ಯ ವ್ಯವಸ್ಥೆಯ ಸಾಧ್ಯತೆಯನ್ನು ಪರಿಶೀಲಿಸಲು ಅಧ್ಯಯನ ತಂಡವೊಂದನ್ನು ರೂಪಿಸಲು ಸಮ್ಮತಿಸಲಾಗಿದೆ. ಇಂದಿನ ಪರಿಸ್ಥಿತಿಯಲ್ಲಿ ಅಂಥ ವ್ಯವಸ್ಥೆಯ ಸ್ಥಾಪನೆ ಸುಲಭವೇನಲ್ಲ, ಸಮಾನತೆ, ಸಹಕಾರಗಳ ಆಧಾರದ ಮೇಲೆ ಅಂಥ ಒಂದು ವ್ಯವಸ್ಥೆಯೊಂದು ರೂಪುಗೊಂಡರೆ ಒಳ್ಳೆಯದು.

ಬಹುಮುಖ್ಯವಾದ ಅಂಶವೆಂದರೆ ಗಡಿವಿವಾದವನ್ನು ಬಗೆಹರಿಸಲು ಅಂಗೀಕರಿಸಲಾಗಿರುವ ಸೂತ್ರಗಳು. ಎರಡು ಕಡೆಯವರಿಗೂ ಸಮ್ಮತವಾಗುವ ರೀತಿಯಲ್ಲಿ ಈ ಪ್ರಶ್ನೆ ಬಗೆಹರಿಸಲು ಸಾಕಷ್ಟು ಕಾಲ ತೆಗೆದುಕೊಳ್ಳುತ್ತದೆ. ಅದು ಅನಿವಾರ್ಯ. ರಾಜಕೀಯ ಮುತ್ಸದ್ದಿತನದಿಂದ ಮಾತ್ರ ಅದನ್ನು ಸಾಧಿಸಬಹುದು ಅಷ್ಟೆ. ಈ ವಿಷಯದಲ್ಲಿ ಸಮಾಧಾನಕರ ಅಂಶವೆಂದರೆ ಬಲಪ್ರಯೋಗದ ವರ್ಜನೆಗೆ ಎರಡೂ ದೇಶಗಳು ಒಪ್ಪಿರುವುದು. ಸಾಕಷ್ಟು ವರ್ಷಗಳು ಕಳೆದ ಮೇಲೆ ಚೀಣಾ, ಸಿಕ್ಕಿಂ ರಾಷ್ಟ್ರವನ್ನು ಭಾರತದ ಭಾಗವೆಂದು ಅಂಗೀಕರಿಸಿ ಒಂದು ವಿವಾದವನ್ನು ಅಂತ್ಯಗೊಳಿಸಿದೆ. ಭಾವನಾತ್ಮಕವಾದ ಗಡಿ ಸಮಸ್ಯೆಯ ಇತ್ಯರ್ಥದ ಕ್ಲಿಷ್ಟತೆಗೆ ಸಿಕ್ಕಿಂ ಒಂದು ಒಳ್ಳೆಯ ಉದಾಹರಣೆ. ಈ ಬಗ್ಗೆ ಆತುರ ಸಲ್ಲದು. ಇತರ ಕ್ಷೇತ್ರಗಳಲ್ಲಿ ಸಂಬಂಧಗಳು ವರ್ಧನೆಯಾಗುತ್ತಿದ್ದಂತೆ ಗಡಿ ಸಮಸ್ಯೆಯ ಇತ್ಯರ್ಥಕ್ಕೆ ಅಗತ್ಯವಿರುವ ರಾಜಕೀಯ ವೇದಿಕೆ ಹಾಗೂ ಮನೋವೃತ್ತಿ ಸಿದ್ಧವಾಗುತ್ತದೆ. ಭಾರತ-ಚೀಣಾಗಳು ಈಗ ಇರಿಸಿರುವ ಹೆಜ್ಜೆ ದಾಪುಗಾಲಿನಿಂದ ಮುಂದುವರಿಯಲಿ ಎನ್ನುವುದೇ ನಮ್ಮ ಅಪೇಕ್ಷೆ.

ಈಚಿನ ದಿನಗಳಲ್ಲಿ ಭಾರತ-ಪಾಕಿಸ್ತಾನಗಳ ನಡುವೆ ಸಂಬಂಧಗಳ ಸುಧಾರಣೆಗಳಿಗಾಗಿ ನಡೆಯುತ್ತಿರುವ ಪ್ರಯತ್ನಗಳಿಗೆ ಭಾರತ-ಚೀಣಾ ಸಂಬಂಧಗಳ ವರ್ಧನೆ ಮಾದರಿಯಾದೀತು. ಒಂದು ರೀತಿಯಲ್ಲಿ ಸಾಮ್ಯತೆ ಇದ್ದರೂ, ಸಮಸ್ಯೆಗಳು ಗಾಢತೆಯಲ್ಲಿ ಭಿನ್ನ. ಭಾರತ-ಪಾಕಿಸ್ತಾನಗಳ ನಡುವಣ ಸಮಸ್ಯೆಗಳು ಹೆಚ್ಚು ಭಾವನಾತ್ಮಕವಾದ್ದು, ಸಂಕೀರ್ಣವಾದ್ದು, ಗಾಢವಾದ್ದು ಹಾಗೂ ರಾಜಕೀಯ ಇಚ್ಛಾಶಕ್ತಿಗೆ ಒಳಪಟ್ಟಿದ್ದು. ಇನ್ನೊಂದು ಬಹುಮುಖ್ಯವಾದ ಅಂಶವೆಂದರೆ, ಭಾರತ-ಚೀಣಾ ಸಂಬಂಧಗಳ ವಿಚಾರದಲ್ಲಿ ಮೂರನೆಯ ಶಕ್ತಿಯ ಕೈವಾಡಕ್ಕೆ ಅವಕಾಶವಿಲ್ಲ. ಆದರೆ ಭಾರತ-ಪಾಕಿಸ್ತಾನಗಳ ವಿಷಯದಲ್ಲಿ ಹಾಗಲ್ಲ. ಪಾಕಿಸ್ತಾನದ ನಿಲುವುಗಳ ಮೇಲೆ ಅಮೆರಿಕದ ಪ್ರಭಾವ ಸಾಕಷ್ಟಿದೆ. ಬಹಿರಂಗವಾಗಿಯೇ ಪಾಕಿಸ್ತಾನ ಅಮೆರಿಕದ ಮಧ್ಯಪ್ರವೇಶವನ್ನು ಅಪೇಕ್ಷಿಸಿದೆ. ಹಾಗಿದ್ದರೂ, ಎರಡು ದೇಶಗಳೂ ಪರಸ್ಪರ ವಿಶ್ವಾಸ ವರ್ಧನೆಗೆ ಹಲವು ಕ್ರಮಗಳನ್ನು ಕೈಗೊಂಡಿವೆ. ಈ ಬೆಳವಣಿಗೆಗಳಾಗುತ್ತಿರುವಾಗಲೇ ಅಮೆರಿಕ ಏಕಾಏಕಿಯಾಗಿ ಪಾಕಿಸ್ತಾನಕ್ಕೆ ಎಫ್-೧೬ ಫೈಟರ್ ವಿಮಾನಗಳ ಸರಬರಾಜಿಗೆ ಅನುಮತಿ ನೀಡಿದೆ. ಇದು ಉದ್ದೇಶಪೂರ್ವಕವಾಗಿ ಈ ಪ್ರದೇಶದಲ್ಲಿ ಶಸ್ತ್ರಾಸ್ತ್ರ ಪೈಪೋಟಿಗೆ ಉತ್ತೇಜನ ನೀಡುವುದಾಗಿದೆ. ಭಾರತಕ್ಕೂ ಅಂಥದೇ ವಿಮಾನ ಮಾರಾಟ ಮಾಡಲು ಅಡ್ಡಿಯಿಲ್ಲ ಎಂದೂ ಅಮೆರಿಕ ಹೇಳಿದೆ. ಅಮೆರಿಕದ ವಿದೇಶಾಂಗ ಕಾರ್ಯದರ್ಶಿ ಕಾಂಡೆಲಸಾ ರೈಸ್ ಈಚೆಗೆ ಭಾರತ ಮತ್ತು ಪಾಕಿಸ್ತಾನಗಳಿಗೆ ನೀಡಿದ ಭೇಟಿಯ ಹಿನ್ನೆಲೆಯಲ್ಲಿ ಆದ ಬೆಳವಣಿಗೆ ಇದು. ಹಾಗೆಯೇ ಆಕೆ ಪಾಕಿಸ್ತಾನದ ಮೂಲಕವಾಗಿ ಇರಾನಿನಿಂದ ತೈಲ ಪೈಪ್ ಮಾರ್ಗ ನಿರ್ಮಾಣದ ಪ್ರಸ್ತಾಪಕ್ಕೂ ಕೊಕ್ಕೆ ಹಾಕಿದ್ದಾಳೆ. ಇಷ್ಟುದಿನ ಸುಮ್ಮನಿದ್ದು ಈಗ ಎಫ್-೧೬ ವಿಮಾನಗಳ ಸರಬರಾಜಿಗೆ ಅಮೆರಿಕ ಕೈಹಾಕಿದ್ದೇಕೆ ? ಈ ಪ್ರಶ್ನೆಗೆ ಉತ್ತರ ಹುಡುಕುವುದು ಕಷ್ಟವೇನಲ್ಲ. ಇದರ ಹಿಂದಿರುವ ಕುತಂತ್ರವೂ ಹೊಸದೇನಲ್ಲ. ಆದ್ದರಿಂದ ಭಾರತ-ಪಾಕಿಸ್ತಾನಗಳ ನಡುವಣ ಸಮಸ್ಯೆಗಳನ್ನು ಬಗೆಹರಿಸುವುದರಲ್ಲಿ ಅಮೆರಿಕದ ಅಡ್ಡಗಾಲನ್ನು ತಡೆಯುವುದು ಒಂದು ಮುಖ್ಯ ಸಮಸ್ಯೆಯೇ. ಪಾಕಿಸ್ತಾನಿ ನಾಯಕರು ಇದನ್ನು ಎಷ್ಟುಬೇಗ ಅರಿತುಕೊಂಡರೆ ಅಷ್ಟೂ ಒಳಿತು. ಆಗ ದ್ವಿಪಕ್ಷೀಯ ಸಂಬಂಧಗಳಲ್ಲಿ ಏನೇ ಕ್ಲಿಷ್ಟ ಸಮಸ್ಯೆಗಳಿದ್ದರೂ ಪರಿಹರಿಸಲು ಮುಂದಾಗಬಹುದು.

**ಸೀಯಾರ್ಕೆ**
'ಚೌಬೀನ', ೪೮೯, ೨ನೇ ಅಡ್ಡರಸ್ತೆ, ಬನಶಂಕರಿ ಮೂರನೇ ಹಂತ, ೧ನೇ 'ಎ' ಮುಖ್ಯರಸ್ತೆ,
೨ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಬೂದಿಹಾಳು ಪಾಳೆಯಗಾರರ ಮತಸಂಬಂಧೀ ವಿಚಾರಗಳು

ಮಧ್ಯಕಾಲೀನ ಸಂದರ್ಭದ ಪಾಳೆಯಗಾರರ ಸಮೂಹದಲ್ಲಿ ತುಂಬಾ ಪ್ರಬಲರಾಗಿದ್ದ ಬೂದಿಹಾಳು ಪಾಳೆಯಗಾರರ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಧಾರ್ಮಿಕ ವಿಚಾರಗಳ ಬಗ್ಗೆ ಈಗಾಗಲೇ ಸಾಕಷ್ಟು ಪ್ರಮಾಣದಲ್ಲಿ ಚರ್ಚೆ ನಡೆದಿದೆಯಾದರೂ ಈ ಪಾಳೆಯಗಾರರ 'ಜಾತಿ' ಕುರಿತಂತೆ ಅನೇಕ ಗೊಂದಲಗಳು ಇವೆ. ಈ ಪಾಳೆಯಗಾರರು ಮೂಲತಃ 'ಗೊಲ್ಲ' ಜಾತಿಗೆ ಸೇರಿದವರಾದರೂ ಹಿರಿಯ ವಿದ್ವಾಂಸರಾದ ಡಾ|| ಎಂ. ಎಂ. ಕಲಬುರ್ಗಿ, ಡಾ|| ಬಿ. ರಾಜಶೇಖರಪ್ಪ ಹಾಗೂ ಡಾ|| ಶೈಲಜ ಹೊಸಳ್ಳೇರ – ಇವರುಗಳು ಸಿರುಮನನ್ನು ವೀರಶೈವೀಕರಣಗೊಳಿಸಿರುತ್ತಾರೆ.

● ಮಲ್ಲಿಕಾರ್ಜುನ ಕಲಮರಳ್ಳಿ

ವಿಜಯನಗರ ಸಾಮ್ರಾಜ್ಯದ ಸಂದರ್ಭದಲ್ಲಿ ಕರ್ನಾಟಕದಲ್ಲಿ ಅನೇಕ ಪಾಳೆಯಗಾರರು ಉದಯಿಸಿದರು. ಅವರಲ್ಲಿ ಬೂದಿಹಾಳು ಪಾಳೆಯಗಾರರೂ ಸಹ ತುಂಬಾ ಪ್ರಮುಖರೆನಿಸಿದ್ದಾರೆ. ಕ್ರಿ.ಶ. ಸು. ೧೪೭೫ರಲ್ಲಿ ಪೆನುಗೊಂಡೆಯ ಪ್ರೌಢದೇವರಾಯನ ಆಸ್ಥಾನದ ದ್ವಾರಪಾಲಕನಾಗಿದ್ದ ಗೊಲ್ಲ ಜಾತಿಯ ಕಾಚನೆಂಬುವನು ತನ್ನ ಧೈರ್ಯ, ಸಾಹಸ, ಶೌರ್ಯದ ನಿಮಿತ್ತ ಉಂಬಳಿಯಾಗಿ ಚಿತ್ರದುರ್ಗ ಸೀಮೆಯ ಸೂಜಿಗಲ್ಲನ್ನು ಪಡೆದು ಆಡಳಿತ ನಡೆಸತೊಡಗಿದ. ಮುಂದೆ, ಬೂದಿಹಾಳನ್ನು ಬಲಪಡಿಸಿ ರಾಜಧಾನಿಯನ್ನಾಗಿಸಿಕೊಂಡು ಆಳ್ವಿಕೆ ನಡೆಸಿದ. ಇವನ ನಂತರ ಮಗ ಸಿರುಮ ಮತ್ತು ಸಿರುಮನ ಮಕ್ಕಳು ಆಳ್ವಿಕೆ ನಡೆಸಿದರು. ಬೂದಿಹಾಳಿನ ಪಾಳೆಯಗಾರರ ಆಳ್ವಿಕೆಯ ಅವಧಿ ಕ್ರಿ.ಶ. ೧೪೭೫ರಿಂದ ೧೪೮೯ ಎಂಬುದು ಡಾ|| ಬಿ. ರಾಜಶೇಖರಪ್ಪನವರ ಅಭಿಮತ.

ಸಿರುಮಣನಾಯಕ ಅತ್ಯಂತ ಪರಾಕ್ರಮಿ ಹಾಗೂ ಶೌರ್ಯವಂತನಾಗಿದ್ದ. ಹಾಗಾಗಿ ಅವನು 'ನಡುನಾಡಗೂಳಿ'ಯೆಂದೇ ಖ್ಯಾತಿವೆತ್ತಿದ್ದ. ಸಿರುಮನನ್ನು ಕುರಿತಂತೆ ಮೂರು ಸಾಂಗತ್ಯ ಕಾವ್ಯಗಳು ರಚನೆಗೊಂಡಿವೆ. ಕಂಪಲಿ ಕುಮಾರ ರಾಮನನ್ನು ಹೊರತುಪಡಿಸಿದರೆ ಈ ಪ್ರಮಾಣದಲ್ಲಿ ಶಿಷ್ಟ ಕಾವ್ಯಗಳ ರಚನಾಗೌರವ ಸಿರುಮನಿಗೆ ಮಾತ್ರ ಸಲ್ಲುತ್ತದೆ.

ಬೂದಿಹಾಳು ಪಾಳೆಗಾರರನ್ನು ಕುರಿತಂತೆ ಹಲವರು ಅಧ್ಯಯನಾತ್ಮಕ ಲೇಖನಗಳನ್ನು ಪ್ರಕಟಿಸಿದ್ದಾರೆ. ಸಿರುಮನನ್ನು ಕುರಿತಂತೆ ರಚನೆಯಾಗಿರುವ ಮೂರು ಸಾಂಗತ್ಯ ಕಾವ್ಯಗಳನ್ನು ಆಧಾರವಾಗಿಟ್ಟುಕೊಂಡು ಡಾ|| ಶೈಲಜ ಹೊಸಳ್ಳೇರ ಅವರು ಮಹಾಪ್ರಬಂಧವನ್ನು ಬರೆದಿದ್ದಾರೆ. ಸಿರುಮ ಮತ್ತು ಸಾಳುವ ನರಸಿಂಹರೊಡನೆ ನಡೆದ ಘನಘೋರ ಕಾಳಗವನ್ನು ಪ್ರಧಾನ ವಸ್ತುವನ್ನಾಗಿಸಿಕೊಂಡು ರಚಿಸಿರುವ ಸಿದ್ಧ ಕವಿಯ 'ಸಿರುಮಣ ನಾಯಕನ ಸಾಂಗತ್ಯ' ಮಲ್ಲಕವಿಯ 'ಗೊಲ್ಲಸಿರುಮನ ಚರಿತೆ' ರಾಮಕವಿಯ 'ಸಿರುಮನ ಚರಿತೆ' – ಈ ಮೂರು ಸಾಂಗತ್ಯ ಕಾವ್ಯಗಳನ್ನು ಡಾ|| ಎಂ. ಎಂ. ಕಲುಬುರ್ಗಿಯವರು ಸಂಪಾದಿಸಿ ಪ್ರಕಟಿಸಿದ್ದಾರೆ. ವಿದ್ವಾಂಸರ, ಸಾಹಿತ್ಯ ಚರಿತ್ರೆಕಾರರ ದಿವ್ಯ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಈ ಕಾವ್ಯಗಳ ಪ್ರಕಟಣೆಯಿಂದ ಐತಿಹಾಸಿಕ ಕಾವ್ಯ ಕ್ಷೇತ್ರಕ್ಕೆ ಅಮೂಲ್ಯ ಕಾಣಿಕೆ ದೊರೆತಂತಾಗಿದೆ.

ಮಧ್ಯಕಾಲೀನ ಸಂದರ್ಭದ ಪಾಳೆಯಗಾರರ ಸಮೂಹದಲ್ಲಿ ತುಂಬಾ ಪ್ರಬಲರಾಗಿದ್ದ ಬೂದಿಹಾಳು ಪಾಳೆಯಗಾರರ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಧಾರ್ಮಿಕ ವಿಚಾರಗಳ ಬಗ್ಗೆ ಈಗಾಗಲೇ ಸಾಕಷ್ಟು ಪ್ರಮಾಣದಲ್ಲಿ ಚರ್ಚೆ ನಡೆದಿದೆಯಾದರೂ ಈ ಪಾಳೆಯಗಾರರ 'ಜಾತಿ' ಕುರಿತಂತೆ ಅನೇಕ ಗೊಂದಲಗಳು ಇವೆ. ಈ ಪಾಳೆಯಗಾರರು ಮೂಲತಃ 'ಗೊಲ್ಲ' ಜಾತಿಗೆ ಸೇರಿದವರಾದರೂ ಹಿರಿಯ ವಿದ್ವಾಂಸರಾದ ಡಾ|| ಎಂ. ಎಂ. ಕಲಬುರ್ಗಿ, ಡಾ|| ಬಿ. ರಾಜಶೇಖರಪ್ಪ ಹಾಗೂ ಡಾ|| ಶೈಲಜ ಹೊಸಳ್ಳೇರ – ಇವರುಗಳು ಸಿರುಮನನ್ನು ವೀರಶೈವೀಕರಣಗೊಳಿಸಿರುತ್ತಾರೆ. ಇವರುಗಳ ವಾದ ಸರಣಿ ಈ ಮುಂದಿನಂತಿದೆ.

**ಡಾ|| ಎಂ. ಎಂ. ಕಲಬುರ್ಗಿ**

* 'ವಿಜಯನಗರ ಮನೆತನದ ಸಂದರ್ಭದಲ್ಲಿ ಅನೇಕ ವೀರಶೈವ ಪಾಳೆಯಗಾರರು ತಲೆ ಎತ್ತಿದರು. ಅವರಲ್ಲಿ ಬೂದಿಹಾಳಿನ ಸಿರುಮನ ಮನೆತನವೂ ಒಂದು.'
* ಮಧ್ಯಕಾಲೀನ ಪಾಳೆಯಗಾರರೆಲ್ಲ ತಮ್ಮ ಜಾತಿಯನ್ನು ಉದಾತ್ತೀಕರಿಸಿಕೊಳ್ಳುವುದಕ್ಕಾಗಿ ಸಾಮಾನ್ಯವಾಗಿ ವೀರಶೈವ ಧರ್ಮ ಸ್ವೀಕರಿಸಿದ್ದಾರೆ. ಅಂದಿನ ಸಂದರ್ಭದಲ್ಲಿ ಪ್ರತಿಷ್ಠಿತ ಧರ್ಮಗಳಾದ ಬ್ರಾಹ್ಮಣ, ಜೈನಗಳಲ್ಲಿ ಈ ಅವಕಾಶವಿರಲಿಲ್ಲ. ಜಾತಿಯನ್ನು ಉದಾತ್ತೀಕರಿಸಿಕೊಳ್ಳಬೇಕೆನ್ನುವವರಿಗೆ ಏಕೈಕ ಮುಕ್ತದ್ವಾರ ವೀರಶೈವವೇ ಆಗಿದ್ದಿತು. ಈ ಹಿನ್ನೆಲೆಯಲ್ಲಿ ಸಿರುಮನ ಕುಟುಂಬ ವೀರಶೈವ ಸ್ವೀಕಾರ ಮಾಡಿದಂತಿದೆ. ಅವನ ಮಕ್ಕಳ ಹೆಸರು, ದೇವರ ಹೆಸರು, ಗುರುಮನೆಗಳ ವಾತಾವರಣ ಇತ್ಯಾದಿಗಳನ್ನು ಇಲ್ಲಿ ಗಮನಿಸಬೇಕು.

**ಡಾ|| ಬಿ. ರಾಜಶೇಖರಪ್ಪ**

* ಬೂದಿಹಾಳು ಪಾಳೆಯಗಾರರು ಮೂಲತಃ ಗೊಲ್ಲ ಜನಾಂಗದವರಾಗಿದ್ದು ಇವರು ಮಧ್ಯದಲ್ಲಿ ವೀರಶೈವ ಧರ್ಮವನ್ನು ಸ್ವೀಕರಿಸಿದಂತೆ ತಿಳಿದುಬರುವುದರಿಂದ ಕರ್ನಾಟಕದ ವೀರಶೈವ ಅರಸು ಮನೆತನಗಳಲ್ಲಿ ಇವರ ಮನೆತನವೂ ಸಹ ಒಂದಾಗಿ ಪರಿಗಣಿತವಾಗಿದೆ.
* ಬೂದಿಹಾಳು ಪಾಳೆಯಪಟ್ಟಿಗೆ ಅವಕಾಶ ಮಾಡಿಕೊಟ್ಟ ವಿಜಯನಗರದ ಚಕ್ರವರ್ತಿ ಪ್ರೌಢರಾಯ ವೀರಶೈವ ಧರ್ಮದ ಪ್ರಭಾವಕ್ಕೆ ಒಳಗಾಗಿದ್ದುದು ಬೂದಿಹಾಳು ಪಾಳೆಯಪಟ್ಟಿನ ಸುತ್ತಮುತ್ತ ಇದ್ದ ಸಮಕಾಲೀನ ಪಾಳೆಯಗಾರರಲ್ಲಿ

ಮಹಾನಾಡಿನ ಪ್ರಭುಗಳು ವೀರಶೈವರಾಗಿದ್ದುದು. ಬೂದಿಹಾಳಿನಲ್ಲಿ ಆ ಕಾಲಕ್ಕೆ ನಿರಾಶೆಮಠ ಎನ್ನುವ ವೀರಶೈವ ಮಠವೊಂದು ಇದ್ದುದು. ಶೌರ್ಯದಲ್ಲಿ ಹಿಂದಿಲ್ಲದ ತಾವು ಜಾತಿಧರ್ಮದ ದೃಷ್ಟಿಯಿಂದ ಹಿಂದೇಕಾಗಬೇಕು ಎಂಬ ಭಾವನೆ ಮೂಡಿ ಅವರು ವೀರಶೈವ ಧರ್ಮವನ್ನು ಸ್ವೀಕರಿಸಲು ಸ್ಫೂರ್ತಿಯಾಗಿರಬೇಕು.

* ಸಿರುಮನ ಐದು ಜನ ಗಂಡುಮಕ್ಕಳಲ್ಲಿ ಮೊದಲನೆಯವನ ಹೆಸರು 'ಕಾಚ' ಎಂದಿರುವುದರಿಂದ, ಈ ಹೆಸರು ಸಿರುಮನ ತಂದೆಯ ನೆನಪಿಗಾಗಿ ಕರೆದದ್ದು ಎಂದು ಹೇಳಬಹುದು. ಇನ್ನುಳಿದ ಮಕ್ಕಳ ಹೆಸರುಗಳು ವೀರಣ್ಣ, ಮಲ್ಲಯ್ಯ, ಸೋಮಯ್ಯ, ನೆಂಬಣ್ಣ, ಇವು ಗೊಲ್ಲರಲ್ಲಿ ಪ್ರಚುರವಿಲ್ಲದ ಆದರೆ ವೀರಶೈವರಲ್ಲಿ ಸಾಮಾನ್ಯವಾಗಿರುವ ಹೆಸರುಗಳಾಗಿರುವುದನ್ನೂ ಕಾಣಬಹುದು.
* ಇವರಿಗೆ ಲಿಂಗಧಾರಣೆ ಮಾಡಿ ಇವರನ್ನು ವೀರಶೈವಕ್ಕೆ ಮತಾಂತರಿಸಿದವರು ನಿರಾಶೆ ಮಠದ ಗುರುಗಳು ಇರಬೇಕು.

**ಡಾ॥ ಶೈಲಜ ಹೊಸಳ್ಳೇರ**

* ಬೂದಿಹಾಳಿನಲ್ಲಿ ಯಾವುದೇ ಗೊಲ್ಲ ಜಾತಿಯ ಕುಟುಂಬ ಕಂಡುಬರುವುದಿಲ್ಲ... ಬೂದಿಹಾಳಿನ ಅಕ್ಕಪಕ್ಕದ ಊರುಗಳಲ್ಲಿಯೂ ಗೊಲ್ಲ ಜಾತಿಯ ಕುಟುಂಬಗಳಿಲ್ಲ. ಬೂದಿಹಾಳಿನಲ್ಲಿ ಪ್ರಮುಖವಾಗಿ ಕಂಡುಬರುವುದು ಕುರುಬ ಜಾತಿ...
* ಕರ್ನಾಟಕದಲ್ಲಿ ಕುರುಬರನ್ನು ವಿಭಿನ್ನ ಹೆಸರುಗಳಿಂದ ಕರೆಯುತ್ತಿದ್ದು ಅವುಗಳಲ್ಲಿ 'ಗೊಲ್ಲ' ಎಂಬುದೂ ಒಂದು. ಕೊಡಗು ಪ್ರದೇಶದಲ್ಲಿ ಗೊಲ್ಲರನ್ನು ಕುರುಬ ಎಂದೇ ಕರೆಯಲಾಗುತ್ತಿದೆ. ಆಂಧ್ರಪ್ರದೇಶದಲ್ಲಿ ಕುರುಬರನ್ನು ಗೊಲ್ಲವಾಡು, ಯಾದವುಲ, ಗೊರ್ರೆಲು, ಎಂದೂ ಕರೆಯಲಾಗುತ್ತಿದೆ...
* 'ಗೊಲ್ಲ' ಎಂಬ ಶಬ್ದ ಸಂಸ್ಕೃತದ ಗೋ ಎಂಬುದರಿಂದ ಉತ್ಪನ್ನವಾದುದಲ್ಲ, ತೆಲುಗಿನಲ್ಲಿ ಗೊರ್ರ ಎಂದರೆ ಕುರಿ ಎಂದರ್ಥ. ಇದರ ಬಹುವಚನ ರೂಪ ಗೊರ್ರೇಲು ಅಥವಾ ಗೊರ್ಲೆ, ಇದೇ ಮುಂದೆ ಗೊಲ್ಲ ಎಂದಾಗಿ 'ಕುರುಬ ಗೊಲ್ಲ' ದ್ವಿರುಕ್ತಿ ದೋಷವಾಗಿದೆ.
* ಈ ಹಿನ್ನೆಲೆಯನ್ನು ಗಮನಿಸಿದಾಗ ಬೂದಿಹಾಳು ಗ್ರಾಮ ಹಾಗೂ ಅದರ ಆಸುಪಾಸಿನ ಪ್ರದೇಶಗಳನ್ನು ಗಮನದಲ್ಲಿಟ್ಟುಕೊಂಡು ಕುರುಬ ಜನಾಂಗಕ್ಕೆ ಇರುವ ವಿವಿಧ ಹೆಸರುಗಳನ್ನು ಮನಗಂಡು ಸಿರುಮನು **ಕುರುಬಗೊಲ್ಲ** ಜಾತಿಗೆ ಸೇರಿದವನು ಎಂದು ಹೇಳಬೇಕಾಗುತ್ತದೆ.
* ಮೂಲತಃ ಕುರುಬ ಜಾತಿಗೆ ಸೇರಿದ ಸಿರುಮನ ಮನೆತನ ವೀರಶೈವ ಮತಾವಲಂಬಿಯಾಗಲಿಕ್ಕೆ ಕಾರಣ... ಅಲ್ಲಿನ ವೀರಶೈವ ವಾತಾವರಣ, ಜಾತಿ ಗೌರವ ಸಂಪಾದನೆ.

ಈ ಮೂವರು ವಿದ್ವಾಂಸರ ಅಭಿಪ್ರಾಯಗಳು ಬಹುತೇಕವಾಗಿ ಒಂದೇ ಧಾಟಿಯಲ್ಲಿದ್ದು ಸಿರುಮ ವೀರಶೈವನಾಗಿ ಮತಾಂತರ ಹೊಂದಿದವನೆಂಬುದು ಸ್ಪಷ್ಟವಾಗುತ್ತದೆ. ಡಾ॥ ಹೊಸಳ್ಳೇರವರು ಬೂದಿಹಾಳು ಪಾಳೆಯಗಾರರ ಮೂಲ ಜಾತಿ 'ಕುರುಬ ಗೊಲ್ಲರು' ಎನ್ನುವುದಾಗಲೀ, 'ಗೊಲ್ಲ' ಶಬ್ದ ವ್ಯುತ್ಪತ್ತಿ ತೆಲುಗಿನ 'ಗೊರ್ರೆಲು' ಮೂಲದಿಂದ ಬಂದಿದೆ ಎಂಬುದಾಗಲೀ ಅಚ್ಚರಿ ಮೂಡಿಸುವಂಥಾದ್ದು. ಇವರ ಈ ಸಿದ್ಧಾಂತಕ್ಕೆ ಯಾವುದೇ ರೀತಿಯ ಶಾಸ್ತ್ರೀಯ ಭಾಷಿಕ ನೆಲೆಗಟ್ಟು ಇಲ್ಲವಾಗಿದೆ. ಕೊಡಗಿನಲ್ಲಿ ಗೊಲ್ಲರನ್ನು ಕುರುಬರೆಂದಾಗಲಿ, ಕುರುಬರನ್ನು ಗೊಲ್ಲರೆಂದಾಗಲೀ ಕರೆಯಲಾಗುತ್ತಿಲ್ಲ. ಅಂತೆಯೇ ತೆಲುಗು ಮೂಲದ 'ಗೊರ್ರೆಲು' ಎಂಬುದು ಅಲ್ಲಿನ ಗೊಲ್ಲರ ಮನೆತನದ ಕೆಲವು ಹೆಸರುಗಳಲ್ಲಿ ಒಂದಾಗಿರುತ್ತದೆ. ಇವುಗಳನ್ನು **ಇಂಟಿಪೇರು** ಎಂತಲೂ ಕರೆಯಲಾಗುತ್ತಿದೆ. 'ಕುರುಂಬ' ಶಬ್ದವೂ ಸಹ ಮೂಲತಃ ಪೂರ್ವದ ಹಳೆಗನ್ನಡ ಪದವಾಗಿದೆ. ಕುರುಬ ಎಂಬರ್ಥದಲ್ಲಿ ಬಳಕೆಯಾಗಿದೆ. ''ಕುಱುಂಬರ ಪಳ್ಳಿಗೆ ವೋಗಿ ಕುಱಿಯಂ ಕಳ್ದು ತಂದು...'' ಎಂಬ ವಡ್ಡಾರಾಧನೆಯ ಉಲ್ಲೇಖವೇ ಇದಕ್ಕೆ ಸಾಕ್ಷಿ. ಹೀಗಿರುವಾಗ ಕರ್ನಾಟಕದಲ್ಲಿ ಕುರುಬ ಹಾಗೂ ಗೊಲ್ಲ ಪ್ರತ್ಯೇಕ ಜಾತಿಗಳು. ತೆಲುಗು ಮೂಲವನ್ನು ಬಳಸಿಕೊಂಡು ಬೂದಿಹಾಳು ಪಾಳೆಯಗಾರರನ್ನು 'ಕುರುಬ ಗೊಲ್ಲರು' ಎಂಬ ಹೊಸ ಜಾತಿ ಸಂಕರಕ್ಕೆ ಎಳೆದೊಯ್ಯುವ ಅಗತ್ಯವಾದರೂ ಏನಿದೆ ?

ಬೂದಿಹಾಳಿನಲ್ಲಿ ಹಾಗೂ ಸುತ್ತಲಿನ ಪರಿಸರದಲ್ಲಿ ಯಾವುದೇ ಗೊಲ್ಲ ಜಾತಿಯ ಕುಟುಂಬಗಳು ಇಲ್ಲವೆಂಬ ಡಾ॥ ಹೊಸಳ್ಳೇರ ಅವರ ಅಭಿಪ್ರಾಯ ಸತ್ಯಕ್ಕೆ ದೂರವಾದ ವಿಚಾರವಾಗಿದೆ. ಬೂದಿಹಾಳಿನ ಸುತ್ತಲಿನಲ್ಲಿ ಹತ್ತಾರು ಗೊಲ್ಲರ ಹಟ್ಟಿಗಳು ಇರುವುದನ್ನು ಇಂದಿಗೂ ಕಾಣಬಹುದು. ಒಂದು ಊರಿನಲ್ಲಿ ಪ್ರಧಾನವಾಗಿ ವಾಸವಾಗಿದ್ದ ಜನರು ತದನಂತರದಲ್ಲಿ ಬೇರೊಂದು ಕಡೆಗೆ ಇಡೀ ಜನಸಮುದಾಯವೇ ವಲಸೆ ಹೋಗಿರುವ ಸಾಧ್ಯತೆ ಇರುತ್ತದೆ. ಆ ಜಾಗದಲ್ಲಿ ಬೇರೊಂದು ಬಲಿಷ್ಠ ಜನಾಂಗ ನೆಲೆಯೂರಬಹುದು. ಒಂದು ಸಂದರ್ಭದಲ್ಲಿ ಇದ್ದು ಅನಂತರ ಇಲ್ಲವಾಗುವುದು ವಲಸೆ ನಿಯಮ. ಈ ನಿಯಮ ಬೂದಿಹಾಳು ಗೊಲ್ಲರಿಗೂ ಏಕೆ ಅನ್ವಯವಾಗಬಾರದು ? ಮೇಲಾಗಿ ಸಿರುಮನ ಕಾಲಕ್ಕೇ ಆ ಪರಿಸರದಲ್ಲಿ ಗೊಲ್ಲರಿದ್ದರೆಂಬುದಕ್ಕೆ ಸಿದ್ಧ ಕವಿಯ ಸಿರುಮನ ಚರಿತೆಯ ಈ ಪದ್ಯವನ್ನು ಗಮನಿಸಬಹುದಾಗಿದೆ. ''ಕಟ್ಟಿದ ಎಡಗೈಯ್ಯಸಹಿತ ಗೊಲ್ಲರುಗಳ ನಿಟ್ಟೋಟದಿಂದೈತರಲು...'' (೨-೫೭/ಸಿದ್ಧ.ಸಿ.ಚ/) ಸಿರುಮನ ಮಗ ಕುಮಾರ ಮಲ್ಲನ ಬಗ್ಗೆ ರಚನೆಯಾಗಿರುವ ಜನಪದ ಲಾವಣಿಯಲ್ಲಿ ಬೂದಿಹಾಳನ್ನು ವಿವರಿಸುತ್ತಾ –

*ಆಡಗಿನ ಬೂದಾಳ ಜರಗೀನ ಪಾತುರವ*
*ಆಸುರು ಕಾಲ್ಯೇವು ಎಲಿದೋಟ/**ಗೊಲ್ಲರ ಭೂಮಿ***
*ತಿರುಗಿ ನೋಡಿದರೆ ಅಳುವಾದು ॥*

ಈ ತ್ರಿಪದಿಯಲ್ಲಿ ಪ್ರಸ್ತಾಪಗೊಂಡಿರುವ ಗೊಲ್ಲರ ಭೂಮಿ ಎಂಬ ಪದ ಪ್ರಯೋಗವನ್ನು ಗಮನಿಸಿದಾಗ ಆ ಕಾಲಕ್ಕೆ ಬೂದಿಹಾಳು ಸುತ್ತ ಗೊಲ್ಲರಿದ್ದರೆಂಬುದಕ್ಕೆ ಸಾಕಷ್ಟು ಪುರಾವೆಯನ್ನೊದಗಿಸುತ್ತದೆ.

ಜಾತಿಯನ್ನು ಉದಾತ್ತೀಕರಿಸಿಕೊಳ್ಳಬೇಕೆನ್ನುವವರಿಗೆ ಏಕೈಕ ಮುಕ್ತದ್ವಾರ ವೀರಶೈವವೇ ಆಗಿದ್ದಿತು. ವಿಜಯನಗರ ಪ್ರಭುಗಳು ವೀರಶೈವರಾಗಿದ್ದುದರಿಂದ ಅಧೀನ ಪಾಳೆಯಗಾರರು ವೀರಶೈವರಾಗಲು ಕಾರಣವಾಯ್ತು ಎಂಬಂಶವನ್ನು ಸೈದ್ಧಾಂತಿಕವಾಗಿ ಒಪ್ಪಬಹುದಾದರೂ ಗೊಲ್ಲಸಿರುಮ ವೀರಶೈವನಾದ ಬಗ್ಗೆ ಈ ವಿದ್ವಾಂಸ ತ್ರಯರು ಕೊಡುವ ನಿದರ್ಶನಗಳು ಸಾಕ್ಷೀಕರಿಸಲಾರವು.

ಸಿರುಮನ ಮಕ್ಕಳ ಹೆಸರಾದ ವೀರಣ್ಣ, ಮಲ್ಲಯ್ಯ, ಸೋಮಯ್ಯ, ನೆಂಬಣ್ಣ – ಇವು ಗೊಲ್ಲರಲ್ಲಿ ಪ್ರಚುರವಿಲ್ಲದ ಆದರೆ ವೀರಶೈವರಲ್ಲಿ ಸಾಮಾನ್ಯವಾಗಿರುವ ಹೆಸರುಗಳಾಗಿವೆ ಎಂಬ ಡಾ॥ ರಾಜಶೇಖರಪ್ಪನವರ ಅಭಿಪ್ರಾಯವನ್ನು ಡಾ॥ ಹೊಸಳ್ಳೇರ ಅವರೂ ಸಮರ್ಥಿಸುತ್ತಾರೆ. ವಾಸ್ತವವಾಗಿ ಈ ಎಲ್ಲಾ ಹೆಸರುಗಳೂ ಗೊಲ್ಲರ ತಾಜಾ ಹೆಸರುಗಳಾಗಿದ್ದು ಹೆಚ್ಚು ಪ್ರಚಲಿತದಲ್ಲಿರುವುದನ್ನು ಕಾಣಬಹುದು.

ಜಾತಿ ಕೀಳರಿಮೆಯಿಂದಾಗಿ ವೀರಶೈವಕ್ಕೆ ಸಿರುಮ ಮತಾಂತರ ಹೊಂದಿದನೆಂಬ ಡಾ॥ ಶೈಲಜ ಹೊಸಳ್ಳೇರ ಅಭಿಪ್ರಾಯವನ್ನು ಸಾರಾಸಗಟು ನಿರಾಕರಿಸಲಿಕ್ಕೆ ಸಿರುಮನ ಮಾತುಗಳೇ ಸಾಕಾಗಬಹುದು-

*ಹುಲ್ಲು ಮನೆಯ ಕಟ್ಟಿ ಬಾಳುವವರೆಲ್ಲರ/ಗೊಲ್ಲನು ಹೇಡಿ ಎಂಬುವರು*
*ಗೊಲ್ಲನ ವಂಶಕೆ ಕೊರತೆಯ ತಂದರೆ/ಕಲ್ಲುಗಾಣಕೆ ಹಾಕಿಸುವೆನು*

(ಗೊಸಚ/೪-೧೪-ಮಲ್ಲಕವಿ)

*ಬಿಟ್ಟು ದಂಡಿನ ರಭಸಕೆ ಅಂಜಿ ಗೊಲ್ಲಕಂ/ಗೆಟ್ಟು ಸಂಧಾನನಾದೆನೆಂದು*
*ನಿಟ್ಟಿನ ವೈರಿ ಮನ್ನೆಯರುಗಳೆಲ್ಲರು/ದಟ್ಟಿಸಿ ಜರದೆಮ್ಮನಗರೆ*

(ಸಿ.ಸಾ./೩-೭೫-ಸಿದ್ದ ಕವಿ)

*ಹುಲ್ಲು ಗೂಡಿನೊಳಿಹ ಮರುಳುಗೊಲ್ಲರುಗಳು/ಬಲ್ಲವೇ ಸಿರಿಯುಯೆಂಬದನು*
*ಎಲ್ಲ ಬುದ್ಧಿಯ ಬಲ್ಲೆ ನರಸಿಂಗಗೆಪ್ಪೇಳು*

(ಸಿ.ಚ./೧೦-೮೧-ಲಾಮ)

– ಈ ಮಾತುಗಳು ಗೊಲ್ಲವಂಶದ ಬಗ್ಗೆ, ಗೊಲ್ಲತನದ ಬಗ್ಗೆ ಇದ್ದ ಹೆಗ್ಗಳಿಕೆ, ಹಿರಿಮೆ, ಗರಿಮೆ ಹಾಗೂ ಸ್ವಾಭಿಮಾನದ, ಕೆಚ್ಚೆದೆಯ ಸಿಡಿಗುಂಡುಗಳು. ಅಂದಮೇಲೆ ಸಿರುಮನಿಗೆ ಜಾತಿ ಕೀಳರಿಮೆ ಹೇಗೆ ಬಂದೀತು ?

ಈ ವಿದ್ವಾಂಸರು ಹೇಳುವ ಕಾವ್ಯದೊಳಗಿನ ವೀರಶೈವ ವಾತಾವರಣವನ್ನು ಗಮನಿಸೋಣ.

**ನಿರಾಶೆಮಠ :** ಇದು ಬೂದಿಹಾಳು ಪಾಳೆಯಗಾರರು ಅಸ್ತಿತ್ವಕ್ಕೆ ಬರುವ ಮೊದಲೇ ಚಾಲ್ತಿಯಲ್ಲಿತ್ತೆಂದು ಡಾ॥ ಹೊಸಳ್ಳೇರ ಅಭಿಪ್ರಾಯಪಡುತ್ತಾರೆ. ಈ ಮಠದ ಗುರುಗಳಿಗೂ ಸಿರುಮನಿಗೂ ಉತ್ತಮ ಸಂಬಂಧವಿದ್ದುದು ನಿಜ. ಭಕ್ತಿ ಗೌರವಗಳಿಂದ ಪೂಜಿಸುತ್ತಿದ್ದುದೂ ನಿಜ. ಅಂದಾಕ್ಷಣ ಆ ಗುರುಗಳಿಂದ ಲಿಂಗಧಾರಣೆ ಮಾಡಿಸಿಕೊಂಡಿದ್ದಾನೆಂದು ಊಹಿಸಿಕೊಳ್ಳುವ ಅಗತ್ಯ ಕಂಡುಬರುವುದಿಲ್ಲ.

**ಶೈವ ದೇವಾಲಯಗಳು :** ಬೂದಿಹಾಳಿನಲ್ಲಿ ಶೈವ ಸಂಬಂಧಿ ದೇವಾಲಯಗಳಿದ್ದಾಕ್ಷಣಕ್ಕೇ ಅವು ವೀರಶೈವ ತಾಣಗಳಾಗಿದ್ದವೆಂದು ತೀರ್ಮಾನಕ್ಕೆ ಬರುವುದು ಸರಿಯೇ ? ಅವುಗಳೊಂದಿಗೆ ವೈಷ್ಣವ ದೇವಾಲಯಗಳೂ ಇದ್ದು ಸಿರುಮ ಆ ದೇವರುಗಳ ಭಕ್ತನೂ ಆಗಿದ್ದನು.

**ಕೈಲಾಸ :** ನಮ್ಮ ಶಿಷ್ಟ ಹಾಗೂ ಜನಪದರು ಮರಣ ಹೊಂದಿದ ನಂತರ ಕವಿಗಳು ತಮ್ಮ ಕಾವ್ಯನಾಯಕರುಗಳನ್ನು ಶಿವಭಕ್ತರಾದರೆ ಕೈಲಾಸಕ್ಕೆ, ವಿಷ್ಣುಭಕ್ತರಾದರೆ ವೈಕುಂಠಕ್ಕೆ ಅತ್ಯಂತ ವಿಜೃಂಭಣೆಯಿಂದ ಕಳುಹಿಸಿಕೊಡುವುದು ಸರ್ವೇಸಾಮಾನ್ಯ. ಸಿರುಮನೂ ಅವನ ಪರಿವಾರವೂ ಇದೇ ಸೂತ್ರದಲ್ಲೇ ಕೈಲಾಸ ಸೇರುವುದನ್ನು ಗಮನಿಸಬಹುದೇ ಹೊರತು ವೀರಶೈವ ಪರಿಕಲ್ಪನೆಯಲ್ಲಿ ಅಲ್ಲ.

**ಕವಿಗಳ ಉವಾಚ :** ಮೂರು ಕಾವ್ಯಗಳಲ್ಲಿ ಸಿರುಮನನ್ನು ಹರನಭಕ್ತ ಎಂದು ಕವಿಗಳು ಕರೆದಿದ್ದಾರೆಯೇ ಹೊರತು ವೀರಶೈವಶರಣ ಎಂದು ಎಲ್ಲಿಯೂ ಕರೆದಿರುವುದಿಲ್ಲ. ಮಲ್ಲಕವಿಯ ಗೊಲ್ಲ ಸಿರುಮನ ಚರಿತೆಯಲ್ಲಿ ಕೊನೆಯ ಆರನೇ ಸಂಧಿಯಲ್ಲಿ ವೀರಶೈವ ಎಂಬ ಶಬ್ದ ಎರಡು ಬಾರಿ ಪ್ರಸ್ತಾಪಗೊಂಡಿದೆ. ಆದರೆ ಪ್ರಸ್ತಾಪಗೊಂಡ ಸನ್ನಿವೇಶ ಗಮನಿಸಿ – ಸಿರುಮನ ಮಗ ಮಲ್ಲಣ್ಣ ಸಾಳುವ ನರಸಿಂಹನೊಡನೆ ಏಕಾಂಗಿಯಾಗಿ ಹೋರಾಡಿ ಕೊನೆಗೆ ಸೋಲು ಖಚಿತವಾದಾಗ ಕೊಂಡಕ್ಕೆ ಬೀಳುತ್ತಾನೆ. ಆಗ ಶಿವ ಪ್ರತ್ಯಕ್ಷನಾಗಿ ಹೇಳುವ ಮಾತಿದು.

ನಿಮ್ಮ ವೀರಶೈವಕೆ ನಾ ಮೆಚ್ಚಿದೆ
ಗಮ್ಮನೆ ವರವ ಬೇಡೆನೆಲು....(೬-೫೭)

ಮುಂದುವರಿದ ಕಥಾನಕದಲ್ಲಿ ಕೈಲಾಸಕ್ಕೆ ಹೋದ ಸಿರುಮನ ಪರಿವಾರವನ್ನು ಈ ಮೊದಲೇ ಮಡಿದು ಕೈಲಾಸದಲ್ಲಿದ್ದ ರಾಯರುಗಳು ಸಿರುಮನನ್ನು ಬರಮಾಡಿಕೊಳ್ಳುತ್ತಾರೆ. ಈ ಸಂದರ್ಭವನ್ನು ಕವಿ ಹೀಗೆ ಹೇಳುತ್ತಾನೆ.

ವೀರಶೈವದಿ ಮಡಿದ ರಾಯರುಗಳು
ಭೋರನೆ ಬಂದು ಸಿರುಮನ
ಹಾಯ್ದು ತಕ್ಕೈಸಿ...(೬-೬೬ ಗೊ.ಸಿ.ಚ)

ಇಲ್ಲಿ ಬಳಕೆಯಾಗಿರುವ ವೀರಶೈವ ಪದಕ್ಕೂ ವಾಸ್ತವವಾಗಿ ಸಿರುಮನ ಬಳಗದ ವೀರತ್ವಕ್ಕೂ ಎಲ್ಲಿಗೆಲ್ಲಿಯ ಸಂಬಂಧ? ವೀರಶೈವ ಧರ್ಮಕ್ಕಾಗಿ ಅಥವಾ ಆ ಧರ್ಮದ ಹಿನ್ನೆಲೆಯಲ್ಲಿ ಇವರೇನಾದರೂ ಹೋರಾಟ ಮಾಡಿದ್ದರೇ? ಯುದ್ಧ ಮಾಡಿದ್ದರೆ? ಮಡಿದು ಹೋಗಿದ್ದರೆ? ಅಂತಹ ಯಾವ ಸೂಕ್ಷ್ಮಗಳೂ ಕಾವ್ಯದಲ್ಲಿ ಕಂಡುಬರುವುದಿಲ್ಲ. ಆದಾಗ್ಯೂ ಒಂದಕ್ಕೊಂದು ಸಾಂದರ್ಭಿಕ ಸಂಬಂಧವಿಲ್ಲದ ಈ ಶಬ್ದದ ಬಳಕೆ ಬಂದದ್ದಾದರೂ ಏಕೆ? ಅದರಲ್ಲೂ ಮೊದಲ ಎರಡು ಕೃತಿಗಳಲ್ಲಿ ಇಲ್ಲದ ಈ ಪದ ಬಳಕೆ ಈ ಕೃತಿಯ ಕೊನೆಯಲ್ಲಿ ಹೇಗೆ ಸೇರ್ಪಡೆಯಾಯಿತು? ಈ ಎಲ್ಲಾ ಪ್ರಶ್ನೆಗಳಿಗೆ ಸರಳ ಉತ್ತರವೊಂದು ಇದೆ – ಈ ಭಾಗವನ್ನು ಮೂಲ ಕವಿ ಬರೆದದ್ದಲ್ಲ, ಮುಂದೆ ಯಾರೋ ಮತ್ತೊಬ್ಬ ವೀರಶೈವ ಕವಿ ಬರೆದು ಸೇರಿಸಿದ ಪ್ರಕ್ಷಿಪ್ತ ಭಾಗವಾಗಿದೆ.

ಗೊಲ್ಲ ಎಂಬ ಶಬ್ದ ಪ್ರಸ್ತಾವಿತ ಮೂರು ಕಾವ್ಯಗಳಲ್ಲಿ ಬೂದಿಹಾಳು ಪಾಳೆಯಗಾರರ ಸ್ವಾಭಿಮಾನದ ಸಂಕೇತವಾಗಿ ಬಳಕೆಯಾಗಿರುವುದಲ್ಲದೆ ಇತರೆ ಸಾಮಂತರ, ಮೇಲಿನ ರಾಜರುಗಳ-ಕಟಕಿ, ಹೀಯಾಳಿಕೆಯ, ಕೌತುಕದ, ಮೆಚ್ಚುಗೆಯ ಮತ್ತು ಕವಿಗಳ ಸಹಜ ಸಂಬೋಧನೆ, ಉದ್ಗಾರ ಎಲ್ಲಾ ವಿಶೇಷಣಗಳ ಮಗ್ಗುಲುಗಳನ್ನೊಳಗೊಂಡಂತೆ ವಿವಿಧ ನೆಲೆಗಟ್ಟಿನಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಸಿದ್ಧ ಕವಿಯ ಸಿರುಮಣನಾಯಕನ ಸಾಂಗತ್ಯದ ಒಟ್ಟು ೬೫ ಪದ್ಯಗಳಲ್ಲಿ ಬೂದಿಹಾಳು ಪಾಳೆಯಗಾರರ ಬಗ್ಗೆ 'ಗೊಲ್ಲ' ಎಂಬ ಜಾತಿಸೂಚಕ ಪದ ಪ್ರಯೋಗವಾಗಿದೆ. ಹಾಗೆಯೇ ರಾಮಕವಿಯ ಸಿರುಮನ ಚರಿತೆಯಲ್ಲಿ ಒಟ್ಟು ೧೮ ಪದ್ಯಗಳಲ್ಲಿ ಮತ್ತು ಮಲ್ಲಕವಿಯ ಗೊಲ್ಲ ಸಿರುಮ ಚರಿತೆಯಲ್ಲಿ ಒಟ್ಟು ೫೬ ಪದ್ಯಗಳಲ್ಲಿ ಗೊಲ್ಲನೆಂದೇ ಪ್ರಸ್ತಾಪಿಸಲ್ಪಟ್ಟಿದೆ. ಇದರೊಂದಿಗೆ ಮಲ್ಲಕವಿಯ ಕಾವ್ಯ ಶೀರ್ಷಿಕೆ 'ಗೊಲ್ಲ ಸಿರುಮನ ಚರಿತೆ' ಈ ಅಂಶವನ್ನೂ ಸೂಕ್ಷ್ಮವಾಗಿ ಪರಿಗಣಿಸಬೇಕಾದ ಅಗತ್ಯವಿದೆ.

ಇಷ್ಟೊಂದು ಪ್ರಮಾಣದಲ್ಲಿ ಪ್ರಸ್ತಾಪಿಸಲ್ಪಟ್ಟ ಗೊಲ್ಲ ಎಂಬ ಪದ ಪ್ರಯೋಗಕ್ಕೆ ಡಾ॥ ಬಿ. ರಾಜಶೇಖರಪ್ಪನವರು ವ್ಯಾಖ್ಯಾನಿಸುವುದು ಹೀಗೆ – ''ಇವರನ್ನು ಗೊಲ್ಲರೆಂದು ಕರೆಯುತ್ತಾ ಹೋಗಿರುವುದಕ್ಕೆ ಕಾರಣಗಳನ್ನು ಊಹಿಸುವುದಾದರೆ, ಬಹುಕಾಲ ಗೊಲ್ಲರಾಗಿ (ಬಂದಿ)ದ್ದ ಇವರು ಕೊನೆಯಲ್ಲಿ ಸ್ವಲ್ಪಕಾಲ ಮಾತ್ರ ವೀರಶೈವಕ್ಕೊಳಗಾಗಿದ್ದುದೋ ಅಥವಾ ಬಹುಕಾಲದಿಂದ ಗೊಲ್ಲರಾಗಿದ್ದುದರಿಂದ ಇವರನ್ನು ಅನ್ಯರು ವೀರಶೈವರೆಂದು ಮನ್ನಿಸಲು ಬಿಗುಮಾನವಿಟ್ಟುಕೊಂಡಿದ್ದುದೋ ಕಾರಣವಿರಬೇಕು''. ಇಲ್ಲಿ ವಸ್ತುಸ್ಥಿತಿಯ ನಿಜರೂಪ ಕಣ್ಣಿಗೆ ರಾಚುತ್ತಿದ್ದರೂ ಅದನ್ನು ಇಲ್ಲವಾಗಿಸಿ ಇಲ್ಲದೇ ಇರುವ ಸಂಗತಿಗಳ ಬಗ್ಗೆ ಇರಬಹುದು ಎಂಬ ಊಹಾತ್ಮಕ ನಿಲುವಿಗೆ ಶ್ರೀಯುತರು ಬಂದಿರುವಂತಿದೆ. ಮುಂದುವರಿದು, ''ಈ ಪಾಳೆಯಗಾರರು, ವೀರಶೈವರಾದ ಮೇಲೆ ಇವರಿಗೆ 'ರಾಜಗುರುಗಳು' (ಎಂಬಂತೆ) ಇದ್ದವರು ಯಾರು?'' ಎಂಬ ಪ್ರಶ್ನೆಯನ್ನು ಎತ್ತುತ್ತಲೇ ''ಈ ಪಾಳೆಯಗಾರರ ರಾಜಗುರುಗಳೆನಿಸಿದ್ದವರು ನಿರಾಶೆಮಠದ ಗುರುಗಳು'' ಎಂಬ ತೀರ್ಮಾನಕ್ಕೆ ಬಂದು ಇವರಿಗೆ ಲಿಂಗಧಾರಣೆ ಮಾಡಿ ಇವರನ್ನು ವೀರಶೈವಕ್ಕೆ ಮತಾಂತರಿಸಿದವರೂ ಈ ಮಠದ ಗುರುಗಳೇ ಇರಬೇಕು ಎಂಬ ನಿರ್ಣಯಕ್ಕೆ ಬಂದುಬಿಡುತ್ತಾರೆ. ಈ ಅಭಿಪ್ರಾಯವನ್ನು ಸಮರ್ಥಿಸಿಕೊಳ್ಳಲಿಕ್ಕೆ ಶ್ರೀಯುತರು ಕೊಡುವ ನಿದರ್ಶನಗಳು ಹೀಗಿವೆ – ''ಕವಿಗಳು ರಾಜಧಾನಿಯಾಗಿದ್ದ ಬೂದಿಹಾಳನ್ನು ವರ್ಣಿಸುವಾಗ ನಿರಾಶೆಮಠ ಎನ್ನುವ ವೀರಶೈವ ಮಠವೊಂದನ್ನು ವರ್ಣಿಸಿದ್ದಾರೆ. ಅದು ಲಿಂಗದ ಗುಡಿ, ಜಂಗಮರ ಬಿಡಾರ, 'ಸಂಗದ ನಿರಾಶೆಯ ಬೀಡು', ಆಶೆಯಿಲ್ಲದ ನಿರಾಶೆಯಮಠ ಎಂದು ವರ್ಣಿಸಲ್ಪಟ್ಟಿದೆ. ಒಂದು ರೀತಿಯಲ್ಲಿ ವೀರಶೈವದ ಲಾಂಛನಗಳೆಂಬಂತೆ ಪರಿಗಣಿತವಾದ ವ್ಯಾಸನ ತೋಳು ಮತ್ತು ವೃಷಭಧ್ವಜ ಇವುಗಳಿಂದ ಶೋಭಿಸುತ್ತಿತ್ತೆಂದು ಒಂದು ಕೃತಿ ಹೇಳುತ್ತದೆ. ಈ ಮಠದಿಂದಾಗಿ ಮತ್ತು ಊರಿನಲ್ಲಿ ನಡೆಯುತ್ತಿದ್ದ ಅತಿಶಯ ಗುರುಪೂಜೆ ಜಂಗಮಾರ್ಚನೆಗಳಿಂದಾಗಿ ಬೂದಿಹಾಳು ಪ್ರಥಮ ಕಲ್ಯಾಣ ಎನಿಸಿತು''. ಡಾ॥ ರಾಜಶೇಖರಪ್ಪನವರು ಕೊಡುವ ಈ ಎಲ್ಲಾ ನಿದರ್ಶನಗಳು ನಿರಾಶೆಮಠದ ಸ್ವರೂಪವನ್ನು ಹೇಳುತ್ತವೆಯೇ ಹೊರತು ಎಲ್ಲಿಯೂ ನಿರಾಶೆಮಠದ ಗುರುಗಳು ಸಿರುಮನಿಗಾಗಲೀ ಅವನ ವಂಶಸ್ಥರಿಗಾಗಲೀ ಲಿಂಗಧಾರಣೆ ಮಾಡಿ ವೀರಶೈವಕ್ಕೆ ಮತಾಂತರಿಸಿದ ಒಂದೇ ಒಂದು ಸೂಕ್ಷ್ಮಾತಿಸೂಕ್ಷ್ಮ ಸುಳಿವೂ ಸಿಕ್ಕುವುದಿಲ್ಲ.



## ಕ್ರೌರ್ಯ

ಮನೆಯೊಳಗೆ ಬೆಕ್ಕು
ಹೊರನೋಡುತ್ತಿದೆ.
ಅಂಗಳದಲ್ಲಿ ನಾಯಿ
ಒಳನೋಡುತ್ತಿದೆ.
ನಡುವೆ ಯಜಮಾನ
ಇರದಿರುತ್ತಿದ್ದರೆ
ಪರಸ್ಪರ ನೋಡುವ
ಆ ಕಣ್ಣುಗಳು
ಅಷ್ಟು ಕ್ರೂರವಾಗಿರುತ್ತಿರಲಿಲ್ಲ

ರವಿಶಂಕರ ಒಡ್ಡಂಬೆಟ್ಟು
ಅಭ್ಯುದಯ ಪ್ರೆಸ್‌ಬಳಿ, ಅಂಚೆ - ಕನ್ಯಾನ - ೫೭೪ ೨೭೯
ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ

ಸಿದ್ಧಕವಿ, ರಾಮಕವಿ, ಮಲ್ಲಕವಿ – ಈ ಮೂವರ ನಂತರ ಬರುವ ಚಂದ್ರಸಾಗರ ವರ್ಣಿ ಎಂಬ ಜೈನಕವಿ ತನ್ನ ಬೆಟ್ಟವರ್ಧನರಾಯ ಚರಿತೆ ಎಂಬ ಕಾವ್ಯದಲ್ಲಿ ಸಿರುಮನನ್ನು ಗೊಲ್ಲನೆಂದೇ ಜಾತಿಸೂಚಕವಾಗಿ ಸಂಬೋಧಿಸಿದ್ದಾನೆ.

ಈ ಎಲ್ಲಾ ವಿಚಾರಧಾರೆಯ ಹಿನ್ನೆಲೆಯಲ್ಲಿ ಒಟ್ಟಭಿಪ್ರಾಯಕ್ಕೆ ಬರುವುದಾದರೆ, ಬೂದಿಹಾಳು ಪಾಳೆಯಗಾರರು ಗುರುಲಿಂಗಜಂಗಮ ಪೂಜೆ ಕೈಗೊಂಡವರ ಬಗ್ಗೆ ಪ್ರೀತಿ ಇಟ್ಟವರು. ನಿರಾಶೆಮಠಕ್ಕೆ ಭಕ್ತಿಪೂರ್ವಕ ಗೌರವ ತೋರಿಸಿದವರು. ಶೈವ ದೇವರುಗಳನ್ನು ಪೂಜಿಸಿದವರು. ಆದರೆ, ವೀರಶೈವರಾಗಿ ಮತಾಂತರ ಹೊಂದಿದವರಲ್ಲ. ಬದಲಾಗಿ ವೀರಶೈವವನ್ನು ತಮ್ಮ ರಾಜತ್ವದ ನೆಲೆಯಲ್ಲಿ ಪ್ರೋತ್ಸಾಹಿಸಿದವರು, ಅಷ್ಟೇ. ಹಾಗಾಗಿ ಬೂದಿಹಾಳು ಪಾಳೆಯಗಾರರು ಹುಟ್ಟಿದ್ದು ಗೊಲ್ಲರಾಗಿ, ಬೆಳೆದಿದ್ದು ಗೊಲ್ಲರಾಗಿ, ಮರಣವನ್ನಪ್ಪಿದ್ದೂ ಗೊಲ್ಲರಾಗಿ ಎಂಬಂಶವನ್ನು ಖಚಿತವಾಗಿ ಹೇಳಬಹುದು.

ಮಲ್ಲಿಕಾರ್ಜುನ ಕಲಮರಹಳ್ಳಿ
ರೀಡರ್, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ದಾವಣಗೆರೆ

# ಪಗಡೆಯ ಪರಿಕಲ್ಪನೆ

ಸಪೋಕ್ಲಿಸನ ವರದಿಯಂತೆ ಪಗಡೆಯ ಆಟವು ಗ್ರೀಕ್ ದೇಶದ ಟ್ರಾಯ್ ಯುದ್ಧ ಸಂದರ್ಭದಲ್ಲಿ 'ಪಲಾಮೆಡಸ್'ನಿಂದ ಕಂಡುಹಿಡಿಯಲ್ಪಟ್ಟಿತು. ಅದು ಟ್ರಾಯ್‌ನಗರವನ್ನು ಅತಿಕ್ರಮಿಸಿಕೊಂಡಾಗ ಹೆರೊಡೋಟಸ್ ಹೇಳುವಂತೆ ಅಟೈಸ್‌ರಾಜನ ಪ್ರಭುತ್ವದ ಸಮಯದ ದಿನಗಳಲ್ಲಿ ಲಿಡಿಯನ್ಸ್‌ರು ಈ 'ಪಗಡೆ' ಎಂಬ ಜೂಜಾಟವನ್ನು ಕಂಡುಹಿಡಿದರು ಎಂಬುದಕ್ಕೆ ಅನೇಕ ಪುರಾತತ್ವ ಇಲಾಖೆಗಳು ಕೈಗೊಂಡಿರುವ ಶೋಧನೆಗಳಿಂದ ತಿಳಿದುಬಂದಿದೆ.

ಡಾ॥ ವಿಶ್ವನಾಥ

**ಪ**ಗಡೆಯಾಡಿ ಪಾಂಡವರು ಕೆಟ್ಟರು ಎಂಬ ಗಾದೆ ಭಾರತೀಯ ಸಂದರ್ಭದಲ್ಲಿ ಜನಜನಿತವಾಗಿದೆ. ಅದು ಅಕ್ಷರಶಃ ನಿಜವೂ ಹೌದು. ಈ ಪಗಡೆ ಮನಃಶಾಸ್ತ್ರೀಯ ಹಿನ್ನೆಲೆಯಿಂದ ಬೆಳೆದುಬಂದ ಒಂದು ಶ್ರೀಮಂತವಾದ ಕ್ರೀಡೆ. ಜನಸಾಮಾನ್ಯರಿಗೆ ಸಿಲುಕದ ಮನೋರಂಜನಾತ್ಮಕವಾದ ಒಂದು ಕ್ರೀಡೆ. ರಾಮಾಯಣ, ಮಹಾಭಾರತ ಕಾವ್ಯಗಳಲ್ಲಿ ಮೊಗ್ಗಾಗಿ, ಹೂಬಿಟ್ಟು ಅರಳಿ ಮಣ್ಣಲ್ಲಿ ಮಣ್ಣಾಗಿ ಹೋಗಿರುವ, ರಾಜ ಮಹಾರಾಜರನ್ನು ಹುಣ್ಣಾಗಿಸಿದ ಒಂದು ಪಾರಂಪರಿಕ ಕಲೆ. ಪಗಡೆ ಒಂದು ಸಾಂಸ್ಕೃತಿಕ ಪರಂಪರೆಯನ್ನು ಪ್ರತಿಬಿಂಬಿಸುವ ಸ್ಪರ್ಧಾತ್ಮಕ ಕ್ರೀಡೆ.

ಕನ್ನಡ ಸಾಹಿತ್ಯವನ್ನು ಅಭ್ಯಸಿಸುವ ಸಂದರ್ಭದಲ್ಲಿ 'ಪಗಡೆ' ಎಂಬ ಸಂಸ್ಕೃತಿಯ ಎಳೆಯನ್ನು ಅಭ್ಯಸಿಸುವುದು ಆಳ ಅವಲೋಕನದ ಗಂಭೀರ ಚಿಂತನೆಯ ಕಾಯಕವು, ಶೋಧದ ಅಪರಿಮಿತಿಯೂ ಆಗುತ್ತದೆ. ಅಂದರೆ ಶಾಸ್ತ್ರ ಸಾಹಿತ್ಯದ ಮುಖೇನ ಹೊರಹೊಮ್ಮಿರುವ ಭಾಗವತ ಪುರಾಣ, ಮಹಾಕಾವ್ಯಗಳ ಸತತಾಧ್ಯಯನದ ಮೂಲಕ ಕಾವ್ಯ ಭಾಗಗಳಲ್ಲಿ ದೊರೆಯುವ ಬಿಡಿಬಿಡಿಯಾದ ಉಲ್ಲೇಖಗಳ ಮೂಲಕ ಗಂಭೀರವಾದ ಅಧ್ಯಯನ ಕೈಗೊಳ್ಳಲು ಸಹಾಯಕವಾಗುತ್ತದೆ. ಎರಡು ಸಾವಿರದಷ್ಟು ಹಳೆಯದಾದ ಕನ್ನಡ ಸಾಹಿತ್ಯದಲ್ಲಿ ಶಾಸನ ಸಾಹಿತ್ಯದ, ಕಾವ್ಯದ ಆಕರಗಳಲ್ಲಿ ಪಗಡೆಯ ಚರಿತೆ, ಚರಿತ್ರಗಳೆಲ್ಲವೂ ದೊರೆಯುತ್ತವೆ. ಆ ಆಟವು ಜನಜೀವನದ ಆರಂಭಿಕ ಸಂಸ್ಕೃತಿ, ಪರಂಪರೆಯ ಸಾಂಸ್ಕೃತಿಕ ಚರಿತೆಯ ಜೊತೆಜೊತೆಗೆ ಅವರವರ ಅಂತರ್ಯದ ಎಳೆಗಳನ್ನು ಜನಪದರು ಕಟ್ಟುವ ಹಾಡಿನ ಮೂಲಕ ಲಾವಣಿಗಳ ಮೂಲಕ, ಕೃಷಿ ಹಾಡುಗಳ ಕಟ್ಟುವ ಮೂಲಕ ಕ್ರಿಯಾತ್ಮಕ ಬಾಂಧವ್ಯವನ್ನು ಹೊಂದಿವೆ. ಅಂಥ ಪಗಡೆ ಆಟಗಳು ವ್ಯಕ್ತಿಯ ದುರಾಸೆಯ ಅಂತಿಮತೆಯನ್ನು ಸೂಚಿಸುವುದರೊಂದಿಗೆ ರಾಜವಂಶಗಳ ಅಧೋಗತಿ ಮತ್ತು ವಿನಾಶಕ್ಕೆ ಈ ಪಗಡೆ ಅಥವಾ ದಾಳ/ಡಾಳವೇ ಕಾರಣವಾಗಿದೆ. ಅದು ಹೆಚ್ಚು ಅನ್ವಯವಾಗುವುದು ಧರ್ಮರಾಜ (ಯುಧಿಷ್ಠಿರ) ದುರ್ಯೋಧನರ ವಿಚಾರವಾಗಬಹುದು, ಪಾಕಶಾಸ್ತ್ರದ ಪ್ರವೀಣ ಮಹಾರಾಜರಾದ ನಳ-ಪುಷ್ಕರ ಸಹೋದರರ ಕತೆಯಾಗಬಹುದು. ಆಯಾ ಸನ್ನಿವೇಶಕ್ಕೆ ತಕ್ಕಂತೆ ಅವರು ಪಡೆದುಕೊಂಡು ಅನುಭವಿಸಿದ ಎತ್ತರ ಬಿತ್ತರಗಳನ್ನು ಅಭಿವ್ಯಕ್ತಿಸುವ ಚರಿತ್ರೆಯ ಒಂದು ಕ್ರಿಯಾತ್ಮಕ ಕ್ರೀಡೆಯಾಗಿ, ಮನೋಕೌಶಲ್ಯದ ಪಾರಂಪರಿಕ ಆಟವಾಗಿ ಈ ಪಗಡೆ ಎಂಬ ನಾಮವು ಚರಿತ್ರೆಯಲ್ಲಿ ದಾಖಲಾಗಿದೆ.

ಪಗಡೆ ಎಂಬ ಪದಕ್ಕೆ ನಾನಾ ಅರ್ಥಗಳಿವೆ. ಮರಾಟಿಯಲ್ಲಿ ಪಗಡಾ, ತಮಿಳಿನಲ್ಲಿ ಪಗಡೈ, ಮಲಯಾಳ ಪಗಡೆ/ಪಗಡಿ/ಪಗಿಡೆ, ತೆಲುಗಿನ ಪಗಡೆ ಎಂಬ ಜ್ಞಾತಿ ಭಾಷೆಗಳ ಅರ್ಥವಿದೆ. ಇಲ್ಲಿ ಮರಾಠಿ ಭಾಷೆ ಜ್ಞಾತಿ (ಸಹೋದರ) ಭಾಷೆಗಳಿಂದ ಹೊರತಾಗಿ ನೆರೆಹೊರೆಯ ಭಾಷೆಯಾಗಿದೆ. ಈ ಪಗಡೆ ಸಂಸ್ಕೃತದ ಪಟಕಾ ಪದದಿಂದ ಬಂದಿದೆ. ಸಂಕ್ಷಿಪ್ತ ಕನ್ನಡ ನಿಘಂಟು ಪುಟ ೪೯೧ರಲ್ಲಿ ಪಗಡೆ = ೧. ಒಂದು ಜಾತಿಯ ಮರ; ೨. ಲೆತ್ತದ ಆಟ, ಜೂಜು; ೩. ಲೆತ್ತದಾಟದಲ್ಲಿ ಉಪಯೋಗಿಸುವ ದಾಳ ಮತ್ತು ಅದರ ಮೇಲಿರುವ ಗುರುತು ಎಂದಿದೆ. ಅದೇ ಕೃತಿಯ (ನಿಘಂಟು) ಪುಟ ೪೮೩ರಲ್ಲಿ ನೆತ್ತ ಎಂಬ ಪದಕ್ಕೆ ಜೂಜು, ಪಂದ್ಯ, ಪಗಡೆಯ ದಾಳ (ಲೆತ್ತದ ಹಾಸು) ಪಗಡೆಯ ಹಾಸು ಎಂಬ ಅರ್ಥಗಳಿವೆ. ಮುಂದುವರೆದು ಪುಟ ೭೪೪ರಲ್ಲಿ ಲೆತ್ತ ಎಂಬ ಪದಶಃ ಅರ್ಥಕ್ಕೆ ಪಗಡೆಯ ದಾಳ ಮತ್ತು ಅದರಿಂದಾಗುವ ಆಟ; ನೆತ್ತ ಎಂದಿದೆ.

ಪಗಡೆಗೆ ಸಂಬಂಧಿಸಿದ ಅನೇಕ ವಿವರಗಳಿವೆ. ಪಗಡೆಕಾಯಿ ಪಗಡೆಕೋಟೆ, ಪಗಡೆಯಪಟ್ಟ (ಹಾಸಂಗಿ), ಪಗಡೆಯ ಬೀದಿ, ಪಗಡೆಯ ಸಾಲು, ಪಗಡೆಯ ಮನೆ, ಪಗಡೆ ಮನೆಯುಳ್ಳ ವಸ್ತ್ರ, ಪಗಡೆಯಲೆತ್ತ. ಅಷ್ಟ (ಎಂಟು) ಪಾದಗಳುಳ್ಳ ಪಗಡೆಯಾಡುವ ಪಟ. ಅಂತೆಯೇ ಕಿಟೆಲ್ ಇಂಗ್ಲಿಷ್ ನಿಘಂಟು ಪುಟ ೮೧೪ರಲ್ಲಿ ಜೂಜ > ದ್ಯೂತ ಎಂಬ ತದ್ಭವದಿಂದ ಬಂದಿದೆ. ಅದಕ್ಕೆ ಪೂರಕವಾದ ಹಾಸಂಗಿಗೆ ಪಾಸಂಗಿ, ಪಾಶಕ, ಅಕ್ಷದೇವನ ಪಾಶಕ, ಅಕ್ಷ ಎಂಬ ಹೆಸರುಗಳಿಂದ ಕರೆಯುವುದುಂಟು. ಅಲ್ಲದೇ ಮರದಹಲಗೆ ಎಂಬಂತೆ, ಬಟ್ಟೆಯ ಮೇಲೆ ಕವಡೆ ಅಥವಾ ದಾಳ ಬಿಡುವ ವಸ್ತ್ರಕ್ಕೆ ಹಾಸಂಗಿ ಎಂದು ಕರೆಯುವುದು ರೂಢಿ.

ರಾಜರು ಸಾಮಾಜಿಕ ಹಿನ್ನೆಲೆಯ ಮನೋರಂಜನೆಯ ದೃಷ್ಟಿಯಿಂದ ಪಗಡೆಯ ಜೂಜಾಟವನ್ನು ಆಡುತ್ತಾರೆ. ಪಗಡೆಕಾಯಿಯ ಆಕೃತಿ ಚಚ್ಚೌಕಾಕಾರವಾಗಿರುತ್ತದೆ. ಅದು ಒಂದರಿಂದ ಆರು ಚುಕ್ಕಿಗಳನ್ನೊಳಗೊಂಡಿರುತ್ತದೆ. ಚೌಕಾಕಾರದ ಇಟ್ಟಿಗೆಯ ಸ್ವರೂಪವನ್ನೇ ಹೋಲುವ ಪಗಡೆಯ ದಾಳವು ಏಳು, ಒಂದು, ಆರು, ಎರಡು ಮತ್ತು ಐದು, ಮೂರು ಮತ್ತು ನಾಲ್ಕು ಚುಕ್ಕೆಗಳನ್ನು ಒಳಗೊಂಡಿರುತ್ತದೆ. ಪಗಡೆಯೂ ಆರು ಮುಖಗಳ ಸಂಯೋಜನೆಯನ್ನು ಹೊಂದಿರುತ್ತದೆ.

ವಿಶೇಷ ಸಂದರ್ಭಗಳಲ್ಲಿ ಪಗಡೆಯಾಡುವಾಗ ಕೈಯಿಂದ ಎಸೆಯುವುದು, ಪಗಡೆಗಳನ್ನು ತಿರುಗಿಸುವುದು, ಪಗಡೆಗಳನ್ನು ಉರುಳಿಸುವುದು, ಚಿಮ್ಮುವುದು, ಎರೆಸುವುದರ ಮೂಲಕ ಆಟಗಳು ನಡೆಯುತ್ತವೆ. ಕೆಲವೊಮ್ಮೆ ದಾಳಗಳನ್ನು ಪಗಡೆ ಕಪ್ಪಿನಿಂದ ಹಾಕುವ ಪದ್ಧತಿ ಇದೆ. ಹಾಸಂಗಿಯ ಮೇಲೆ ದಾಳಗಳನ್ನು ಮನಸೋಇಚ್ಛೆ ಎಸೆಯುವ, ಅವುಗಳನ್ನು ಬೀಳಿಸಿ ಗೆಲ್ಲುವ ಅನೇಕ ನಿದರ್ಶನಗಳು ಇತಿಹಾಸದಿಂದ, ಪುರಾಣಗಳಿಂದ ತಿಳಿದುಬಂದಿವೆ. ಪಗಡೆ ಎಸೆದು ಅದು ಹೆಚ್ಚು ಸಂಖ್ಯೆ ಮೇಲ್ಮುಖವಾಗಿ ಬಿದ್ದರೆ ಅದು ಗೆದ್ದಂತೆ ಸೂಚಿಸುತ್ತದೆ. ಪಗಡೆಯಲ್ಲಿ ಒಬ್ಬನು ಮತ್ತೊಬ್ಬನ ಪರವಾಗಿ ದಾಳ ಹಾಕಬಹುದು. ಉದಾ: ಧೃತರಾಷ್ಟ್ರ, ಭೀಷ್ಮ ಪಿತಾಮಹರ ಸಮಕ್ಷಮದಲ್ಲಿ ಧರ್ಮರಾಜ-ದುರ್ಯೋಧನ ಪಗಡೆಯಾಡುವಾಗ ಮೋಸದ ದಾಳಗಳನ್ನು ಎಸೆದು ಗೆಲುವು ತಂದು ಕೊಡುವವನು ಶಕುನಿ. ದುರ್ಯೋಧನನ ಪರವಾಗಿ ಪಾಂಡವರ ಸರ್ವಸ್ವವನ್ನು ಗೆದ್ದು ಅವರು ಹನ್ನೆರಡು ವರುಷ ವನವಾಸಕ್ಕೆ ಹೋಗುವಂತೆ ಮಾಡುತ್ತಾನೆ ಅವನು.

ಪಗಡೆಯ ಚರಿತ್ರೆ : ಸಪೋಕ್ಲಿಸನ ವರದಿಯಂತೆ ಪಗಡೆಯ ಆಟವು ಗ್ರೀಕ್ ದೇಶದ ಟ್ರಾಯ್‌ಯುದ್ಧ ಸಂದರ್ಭದಲ್ಲಿ 'ಪಲಾಮೆಡಸ್'ನಿಂದ ಕಂಡುಹಿಡಿಯಲ್ಪಟ್ಟಿತು. ಅದು ಟ್ರಾಯ್‌ನಗರವನ್ನು ಅತಿಕ್ರಮಿಸಿಕೊಂಡಾಗ ಹೆರೊಡೋಟಸ್ ಹೇಳುವಂತೆ ಅಟೈಸ್‌ರಾಜನ ಪ್ರಭುತ್ವದ ಸಮಯದ ದಿನಗಳಲ್ಲಿ ಲಿಡಿಯನ್ಸ್‌ರು ಈ 'ಪಗಡೆ' ಎಂಬ ಜೂಜಾಟವನ್ನು ಕಂಡುಹಿಡಿದರು ಎಂಬುದು ಅನೇಕ ಪುರಾತತ್ವ ಇಲಾಖೆಗಳು ಕೈಗೊಂಡಿರುವ ಶೋಧನೆಗಳಿಂದ ತಿಳಿದುಬಂದಿದೆ. ಒಟ್ಟಾರೆ ಪಗಡೆ ಎಂಬ ಆಟ ಕ್ರಿ.ಪೂ.ದಿಂದಲೂ ನಡೆದುಕೊಂಡು ಬಂದಿರುವ ಸಾಮಾಜಿಕ, ಮನರಂಜನೆಯ ಕ್ರೀಡೆ. ಪ್ರಾಚೀನಕಾಲದ ಜನರು ಜೂಜಾಟದ ಪಗಡೆಯಲ್ಲಿ ಭಕ್ತಿ ವ್ಯಕ್ತಪಡಿಸುವ ದೈವತ್ವದ ಲಕ್ಷಣಗಳನ್ನು ಕಾಣುತ್ತಿದ್ದರು. ಅದಕ್ಕೆ ಪ್ರಾಣಿಗಳನ್ನು ದೈವತ್ವಕ್ಕೇರಿಸಿದ್ದು, ಅಂತಹ ಪ್ರಾಣಿಗಳಲ್ಲೊಂದಾದ ಕುರಿಯ ಮಂಡಿಯ ಚಿಪ್ಪಿನ ಮೂಳೆಯಿಂದ 'ಪಗಡೆ'ಗಳನ್ನು ತಯಾರಿಸುತ್ತಿದ್ದರು. ಅಂಥ ಪಗಡೆಗೆ ನಾಲ್ಕು ಮುಖಗಳಲ್ಲಿ ಗುರುತಿನ ಚುಕ್ಕಿಗಳನ್ನಿಡುತ್ತಿದ್ದರು.

ಮಾನವರ ಪ್ರಾಚೀನ ಸಂಸ್ಕೃತಿಗಳಲ್ಲೊಂದಾದ ದಕ್ಷಿಣ ಅಮೆರಿಕಾದ ಅಜ್‌ಟೆಕ್ ಮತ್ತು ಮಾಯಜನರು, ದಕ್ಷಿಣ ಸಮುದ್ರದ ದ್ವೀಪದವರು, ಎಸ್ಕಿಮೋ ಜನಾಂಗ ಮತ್ತು ಆಫ್ರಿಕಾದ ಜನರು ಅಂಕಿ-ಸಂಖ್ಯೆಗಳಿಂದ ಗುರುತು ಮಾಡಿದ ಪಗಡೆಗಳನ್ನು ಆಟದಲ್ಲಿ ಬಳಸುತ್ತಿದ್ದರು. ಅವುಗಳು ಚಪ್ಪಟೆಯ ಮತ್ತು ದುಂಡಾದ ಕಲ್ಲುಗಳಿಂದ ಸಿಹಿಯಾದ ಹಣ್ಣಿನ ಒರಟು ಬೀಜಗಳಿಂದ, ಜಿಂಕೆಯ ಕೊಂಬಿನಿಂದ, ಸಮುದ್ರದಲ್ಲಿ ದೊರೆಯುವ ಕಪ್ಪೆಚಿಪ್ಪುಗಳಿಂದ, ಹವಳಗಳಿಂದ, ದನದ ಕೊಂಬುಗಳಿಂದ, ಕುಂಬಾರರ ಮಡಿಕೆಗಳಿಂದ, ಅಕ್ರೋಟ ಮರದ ಕಾಯಿಗಳಿಂದ, ಮರದ ತುಂಡುಗಳಿಂದ, ಆನೆಯ ದಂತಗಳಿಂದ, ಪ್ರಾಣಿಗಳ ಹಲ್ಲುಗಳಿಂದ ಪಗಡೆಯ ದಾಳಗಳು ತಯಾರಾಗುತ್ತಿದ್ದವು.

ಗ್ರೀಕ್‌ರ ತರುವಾಯ ರೋಮನರ ಕಾಲದಲ್ಲಿ ಪಗಡೆಗಳು ಮೂಳೆ ಮತ್ತು ಆನೆಯ ದಂತಗಳಿಂದ ತಯಾರಾಗುತ್ತಿದ್ದವು. ಮತ್ತೆ ಕೆಲವು ಕಂಚಿನ ಲೋಹದಿಂದ, ಬೆಣಚು ಕಲ್ಲುಗಳು, ಹರಳುಗಳು, ಗ್ರಾನೈಟ್ ಶಿಲೆಗಳು ನುಣುಪಾದ ಕಪ್ಪುಕಲ್ಲುಗಳಿಂದ, ಅಮೃತ ಶಿಲೆಗಳಿಂದ ಮತ್ತು ನಾಜೂಕಾದ ಪದಾರ್ಥಗಳಿಂದ ತಯಾರುಮಾಡುತ್ತಿದ್ದರು. ಅಂತೆಯೇ ಚೀನಾ ನಾಗರಿಕತೆಯ ಶೋಧನೆಯ ಸಂದರ್ಭದಲ್ಲೂ ಕ್ರಿ.ಪೂ. ೬೦೦ರ ಕಾಲಮಾನದ ಪಗಡೆಯ ದಾಳಗಳು ದೊರೆತಿವೆ. ಮತ್ತು ಈಜಿಪ್ಟ್ ನಾಗರಿಕತೆಯ ಸಂದರ್ಭದಲ್ಲೂ ಅನೇಕ ಜೂಜಾಟದ ಉಲ್ಲೇಖಗಳು ದೊರೆತಿವೆ. ಅವುಗಳಲ್ಲಿ ಪಗಡೆಯೂ ಒಂದು. ಅದು ಸುಮಾರು ೨೦೦೦ ವರ್ಷಗಳ ಹಿಂದೆಯೇ. ಸುಮಾರು ೨೦೦೦ ವರ್ಷಗಳ ಭಾರತ ಪ್ರಾಚೀನ ಗ್ರಂಥವಾದ ಸಂಸ್ಕೃತ ಭಾಷೆಯ ಮಹಾಭಾರತದಲ್ಲಿ ಪಗಡೆಯ ಉಲ್ಲೇಖಗಳಿವೆ. ಅವುಗಳು ಬಹುಭುಜಾಕೃತಿಯ ಗೋಪುರಾಕಾರವುಳ್ಳ ಐದು ಮುಖದ ಘನಾಕೃತಿಯ ಪಂಚಕೋನಗಳುಳ್ಳ, ಅಷ್ಟಕೋನಾಕೃತಿಯ ವಿವಿಧ ನಮೂನೆಯ ಪಗಡೆಗಳು ದೊರೆತಿವೆ.

ಪಗಡೆ ದಾಳಗಳನ್ನು ಅನೇಕ ವಸ್ತುಗಳಿಂದ ತಯಾರು ಮಾಡುತ್ತಾರೆ. ಇಲ್ಲಿ ನಾನಾ ರೀತಿಯ ಪ್ಲಾಸ್ಟಿಕ್, ಸಿಂಥೆಟಿಕ್ ಮತ್ತು ರಾಸಾಯನಿಕ ಪದಾರ್ಥಗಳಿಂದ ತಯಾರಾಗುತ್ತವೆ. ಇಲ್ಲಿ ೨ ಬಗೆಯಾಗಿ ಪಗಡೆಗಳು ತಯಾರಾಗಿವೆ.

೧. ಕೈಯಿಂದ ತಯಾರಿಸುವ ಇಸ್ಪೀಟು ಎಲೆಗಳಂತೆ

೨. ೦೦೦೫ರ ದಪ್ಪ ಇಂಚಿನ ಆಟದಲ್ಲಿ ತಾಳಿಕೊಳ್ಳುವ ಪಗಡೆ ಇದು ೦೦೧೩ ಸೆಂ.ಮೀ. ಇರುತ್ತದೆ.

ಕ್ಯಾಸಿನೋ ಜನರು ಕೈಯಿಂದ ತಯಾರು ಮಾಡಿದ ಜೂಜಿನ ಪಗಡೆಗಳನ್ನು ಮಾದಕ ಅಂಗಡಿ ಅಥವಾ ಅಚ್ಚಿನ ಅಂಗಡಿಗಳಲ್ಲಿ ಪಡೆದು ಜೂಜಾಡಿ ಗೆಲುವು-ಸೋಲುಗಳ ಮೂಲಕ ಸಾಮಾಜಿಕ ಎತ್ತರಗಳನ್ನು ಕಂಡುಕೊಳ್ಳುತ್ತಿದ್ದರೆಂದು ವಿಶ್ವಕೋಶಗಳಲ್ಲಿ ದಾಖಲಾಗಿದೆ. ಈ ದಾಳಗಳು ಮೋಸ ಮಾಡುವುದಕ್ಕೆ ತಯಾರಾಗುತ್ತಿದ್ದವೆಂದು ಈಜಿಪ್ಟ್‌ನ ಪ್ರಾಚೀನ ಹೆಣದ ಗೋರಿಗಳಿಂದ, ಪಿರಮಿಡ್ಡುಗಳಿಂದ, ಉತ್ತರ ಮತ್ತು ದಕ್ಷಿಣ ಅಮೆರಿಕಾದ ಪುರಾತತ್ವ ಸಮಾಧಿಗಳಿಂದ ತಿಳಿದುಬರುತ್ತದೆ. ಅಂದರೆ ಮೋಸದಾಟದಿಂದ ಸಾವು ತಂದ ನಿದರ್ಶನಗಳೇ ಆ ಗೋರಿಗಳು.

ಪಗಡೆಯಾಟವೆಂದರೆ ಮೋಸ, ವಿನಾಶ, ಅನರ್ಥಪರಂಪರೆ ಎಂಬ ಅರ್ಥಗಳಿವೆ. ಮೋಸದಾಟವಾಡಲೆಂದೇ ವಿಶೇಷ ರೀತಿಯ ಪಗಡೆಗಳು ಬ್ಯಾಬಿಲೋನ್, ಹರಪ್ಪ-ಮೊಹೆಂಜದಾರೋ ನಾಗರಿಕತೆ-ಸಂಸ್ಕೃತಿಗಳಲ್ಲಿ ಮೈದಾಳಿವೆ. ಅದಕ್ಕಾಗಿಯೇ ಪಗಡೆಯ ದಾಳಗಳು, ಹಾಸಂಗಿಗಳು ತಯಾರಾಗಿವೆ. ಪಗಡೆ ದಾಳಗಳ ತಯಾರಿಕೆಯಲ್ಲಿ ನುರಿತವರಾದ ಕೆಲವು ಪರಿಣತರು ಯಾವ ಅಂಕಿಗಳು ಯಾವ ಕೋನದಲ್ಲಿ ಮೇಲ್ಮುಖವಾಗಿ ಬೀಳಬೇಕು, ಜೂಜಿನಲ್ಲಿ ಗೆಲ್ಲಬೇಕೆಂದರೆ ಯಾವ ರೀತಿ ತಯಾರು ಮಾಡಬೇಕೆಂಬ ಅರಿವು ಆ ಜನರ ಮನದಾಳದಲ್ಲಿ ಬೇರೂರಿತ್ತು. ತಮಗನುಕೂಲವಾಗುವಂತೆ ತಯಾರುಮಾಡಿದ ದಾಳಗಳಿಂದ ಜಯ ಸಾಧಿಸಿ ಶ್ರೀಮಂತರಾಗಿ, ಕಾಲಾನಂತರದಲ್ಲಿ ಗುಡಿಸಿ-ಗುಂಡಾಂತರವಾದ ವಿವರಗಳು ವೇದೋಪನಿಷತ್ತು, ಪುರಾಣ-ಭಾಗವತ, ರಾಮಾಯಣ ಮಹಾಭಾರತ ಮತ್ತು ಅವುಗಳಿಗೆ ಸಂಬಂಧಿಸಿದ ಉಪಾಖ್ಯಾನಗಳಲ್ಲಿ ದೊರೆಯುತ್ತವೆ. ಸಮಸ್ತ ಜನಪದರ ಹಾಡುಗಳಲ್ಲಿಯೂ ಸೇರಿವೆ. ಎಲ್. ಗುಂಡಪ್ಪನವರು ಸಂಪಾದಿಸಿರುವ ನಾಡಪದಗಳು ಕೃತಿ ಪುಟ ೪೪ರಲ್ಲಿ "ಕರಿಯಪುರದ ನಗರದಲ್ಲಿ ಕೌರವರು ಪಾಂಡವರು ಧರಣಿಯನ್ನು ಒತ್ತೆಯಿಟ್ಟು ಜೂಜನಾಡಲು ರಂಗ, ಪಾಪಿ ಕೇಡಿ ಶಕುನಿ ತಾನು ಪಾಪದೊಳಗೆ ಸಿಲುಕಿದನು. ದಾತನು ಧರ್ಮಜನು ದ್ರೌಪದಿಯ ಸೋತನು - ರಂಗ" ಎಂಬುದು ಪಗಡೆಯ ಜೂಜು, 'ತನೆ ೧ ಕೋಲಾಟದ ಪದಗಳು' ಎಂಬಲ್ಲಿ ದಾಖಲಿಸಿದ್ದಾರೆ. ಕೋಲಾಟ ಜನಪದರ ಒಂದು ಮನೋರಂಜನಾತ್ಮಕ ಆಟವಾದರೂ ಕೋಲು ಹೊಯ್ಯುತ್ತಾ ಕೌರವರು, ಶಕುನಿ, ಮೋಸದಲ್ಲಿ ಪಗಡೆಯಾಡಿ, ಪಾಂಡವರನ್ನು ದೇಸಿಗರಂತೆ ಮಾಡಿದ ಪುರಾತತ್ವದ ಅಂಶಿಕ ಘಟನೆಗಳ ಪದರಗಳನ್ನು ಬಿಂಬಿಸುತ್ತದೆ. ಹಸ್ತಿನಾಪುರ ಜನಪದರಲ್ಲಿ ಕರಿಯನಗರವಾಗುತ್ತದೆ. ಪಾಂಡುಪುತ್ರರಾದ ಕೌಂತೇಯರು ಪಗಡೆಗೆ ಪಣವಾಗಿಟ್ಟ ಸ್ತ್ರೀ ಸಂಪತ್ತು ದ್ರೌಪದಿ ಸೇರಿ 'ಸರ್ವಸಾಮ್ರಾಜ್ಯ ಸಂಪತ್ತು ಧರಣಿ' ಎಂಬ ಪದದಲ್ಲಿ ಬಹು ಅರ್ಥ ಸ್ಫುರಿಸುತ್ತದೆ. ಕೋಲು ಹೊಯ್ಯುತ್ತಾ ಹಾಡುವ ಈ ಹಾಡು ಪಲ್ಲವಿ (ರಂಗ)ಯನ್ನು ಹಿಮ್ಮೇಳವನ್ನು ಸೂಚಿಸುತ್ತದೆ. "ಸೋತನೆಂಬ ಸುದ್ದಿ ಕೇಳಿ ಪಾಪಿ ದುರ್ಯೋಧನನು ದೂತರಟ್ಟಿ ಪಾಂಡವರ ಬದುಕ ತರಿಸಿದ – ರಂಗ" ಅಂದರೆ ಪಂಚವಲ್ಲಭೆಯಾದ ದ್ರೌಪದಿಯನ್ನು ಒತ್ತೆಯಿಟ್ಟು ಸೋತು, ಅವಳನ್ನು ತುಂಬಿದ ಸಭೆಗೆ ಎಳೆತರುವುದರ ಮೂಲಕ ಪಾಂಡವರೈವರ ಬದುಕು ಬಾಳಾಟನ್ನೇ ಹಿಸುಕಿ ಹೀರೆಕಾಯಿ ಮಾಡಿದ ಶಕುನಿ. "ಭೂಮಿ ಕಾಣಿ ಎಲ್ಲ ಸೋತು ಆನೆಸಾಲು, ಒಂಟೆಸಾಲು, ಬೇಡವೆಂದರೂ ಭಂಡಾರ ತರಸಿದ – ರಂಗ" ಅನ್ನುವಲ್ಲಿ ಸರ್ವಸಮರ್ಥವೂ ಜೂಜಿನ ಮೂಲಕ ಕೌರವರ ಪಾಲಾಗುತ್ತದೆ. ರಾಜ್ಯ, ಕೋಶ, ದುರ್ಗ, ಪುರ, ರಥ ಸೈನ್ಯ ಭಂಡಾರಗಳೆಂಬ ಸಪ್ತ ಸಂಪತ್ತುಗಳನ್ನು ಧರ್ಮರಾಯ ಪಣವಿಟ್ಟು ಸೋಲುತ್ತಾನೆ. ಅದು ಜನಪದರ ಹೃದಯ ಹಿಂಡಿ ಅನುಕಂಪೆ ಸೂಸುತ್ತದೆ.

"ಪಟ್ಟ ಪದವಿ ಅವರಿಗಿರಲಿ ಬಡವರಂಗೆ ಇದ್ದೇವೆಂದ್ರೆ
ಕೆಟ್ಟದ್ದೊಂದು ಪಗಡೆ ಜೂಜು ಎಲ್ಲಿ ದೊರಕಿತೋ – ರಂಗ"

ಅನ್ನುವಲ್ಲಿ ಮಾನವರ ಸಂಸ್ಕೃತಿಯನ್ನೇ ನಾಶಮಾಡುವ ಜೂಜು ಬೇಕೇ ಅನ್ನುವ ಪ್ರಶ್ನೆ ಜಾನಪದ ಸಮಸ್ತರದು.

ಪಗಡೆಗಳಲ್ಲಿ ಅನೇಕ ಆಕೃತಿಗಳು ಕಂಡುಬರುತ್ತವೆ. ಶಂಕಾಕೃತಿ, ಚೂಪಾಕೃತಿ, ಉದ್ದನೆಯ ಆಕೃತಿ, ಅಡ್ಡಾಕೃತಿ, ಚೌಕಾಕೃತಿಗಳಿವೆ. ಆ ಆಕೃತಿಗಳನ್ನು ನುರಿತ ಆಟಗಾರರು ತಯಾರು ಮಾಡಿರುತ್ತಾರೆ. ತಮಗನುಕೂಲವಾಗುವ ರೀತಿಯಲ್ಲಿ ದಾಳ ಎಸೆಯುವ ವಿದ್ಯೆ ಅವರಲ್ಲಿ ಕರಗತವಾಗಿರುತ್ತದೆ. ಆ ರೀತಿಯ ಒಂದು, ಎರಡು ಮುಖದ ನಕಲು ಪಗಡೆ, ಅಂಕಿಸಂಖ್ಯೆಯನ್ನು ಹೆಚ್ಚು ಕಡಿಮೆ ಮಾಡುವ ಪಗಡೆಗಳಿವೆ. ಎರಡು ಪಗಡೆಗಳ ನಕಲಲ್ಲಿ ೩,೪,೫ ಮತ್ತು ೧,೫,೬ ಅಥವಾ ಹನ್ನೆರಡು ಸಂಯೋಜನೆಗಳಿರುತ್ತವೆ. ಅವುಗಳನ್ನು ಮೇಲ್ಮುಖ, ಕೆಳಮುಖದಲ್ಲೂ ಎಸೆದು, ನಿಯಮವನ್ನು ಪಾಲಿಸಿದಂತೆಯೇ ಆಟವಾಡಿ ಎದುರಾಳಿಯನ್ನು ಸೋಲಿಸಿದ ಪಗಡೆ ಆಟದ ದಾಳಗಳು ಕಂಡುಬರುತ್ತವೆ.

ಒಟ್ಟಾರೆಯಾಗಿ ಪಗಡೆ ಆಟ ಮಾನವರಿಗೆ ಒಂದು ಬಗೆ ಮನೋರಂಜನಾತ್ಮಕ ಕ್ರೀಡೆಯಾದರೂ, ಅದರಿಂದುಂಟಾದ ಅನರ್ಥ ಪರಂಪರೆ, ಸಾಮ್ರಾಜ್ಯಗಳು ಆಳಿ-ಅಳಿದ ಪಾರಂಪರಿಕ ಸತ್ಯವನ್ನು ಅಭಿವ್ಯಕ್ತಿಸುವ ಮುಖ್ಯ ವಿಷಯದ ದಟ್ಟವಾದ ದಾಖಲೀಕರಣದ ಶೋಧವಾಗುತ್ತದೆ.

ಡಾ|| ವಿಶ್ವನಾಥ
ಕನ್ನಡ ವಿಭಾಗ, ಮಹಾರಾಜಾ ಕಾಲೇಜು, ಅಲಂಪು, ನಂ. ೧೨೫೭, ಪಡುವಣ ರಸ್ತೆ
೪ನೇ ತಿರುವು, ಟಿ. ಕೆ. ಬಡಾವಣೆ, ೪ನೇ ಹಂತ, ಮೈಸೂರು - ೫೭೦ ೦೨೩

*೧೫ ಪುಟದಿಂದ*

ಬಂದ ಕಳ್ಳ ತಮ್ಮನ್ನು ನೋಡಿ ಹೆದರಿ ಹೀಗೆ ಇದರಲ್ಲಿ ಅಡಗಿದ್ದಾನೆ ಅಂದುಕೊಂಡು ಅಲ್ಲೇ ಕುಳಿತಿದ್ದಾರೆ. ಅಜ್ಜ ಇವರ ಕತೆ ಕೇಳಿ ಒಂದು ಬಡಿಗೆಯಿಂದ ಆ ಮೃದಂಗ ಒಡೆದು ಹಾಕಿ "ಕಳ್ಳ ಎಲ್ರೋ?" ಅಂತ ಕೇಳಿದರೆ "ಕಳ್ಳ ಭಾಳಾ ಬುದ್ಧಿವಂತ ನಮ್ಮಿಬ್ಬರ ಕೈ ಹಿಡಿಸಿ ಎಲ್ಲಿ ಮಾಯವಾದ್ನೋ" ಅಂತ ಅಚ್ಚರಿ ಸೂಸಬೇಕೆ?

ಈ ದಾಮ-ದೂಮರ ದಡ್ಡತನ ನೋಡಿ ಇವರ ಬಗ್ಗೆ ನಾನಾ ಕಪೋಲ ಕಲ್ಪಿತ ಕತೆಗಳು ಹುಟ್ಟಿಕೊಂಡಿದ್ದವು. ಒಂದು ದಿನ ದಾಮ-ದೂಮ ನಮ್ಮ ಅಜ್ಜನ ಮನೆ ಕೆರೆ ಹತ್ತಿರ ಹೋಗುತ್ತಿದ್ದಾಗ ಅವರ ನಡುವೆ ಹೀಗೆ ಮಾತುಕತೆ ನಡೆದಿತ್ತಂತೆ.

ದಾಮ : ಒಂದು ವೇಳೆ ಈ ಕೆರೆಗೆ ಬೆಂಕಿ ಬಿದ್ದರೆ ಮೀನುಗಳು ಏನು ಮಾಡ್ತವೆ?

**ದೂಮ :** ಅಷ್ಟು ಗೊತ್ತಾಯಿಲ್ಲ್ಯಾ, ಮೀನುಗಳು ಈ ತೆಂಗಿನ ಮರ ಹತ್ತಿ ಪ್ರಾಣ ಉಳಿಸಿಕೊಳ್ಳುತ್ತಾವೆ.....

**ದಾಮ :** ಇದಕ್ಕೇ ನಿನಗೆ ದಡ್ಡ ಅಂತ ಎಲ್ಲರೂ ಹೇಳೋದು. ತೆಂಗಿನ ಮರ ಹತ್ತಲಿಕ್ಕೆ ಅವೇನು ಕೋಣದ ಮರೀನಾ?

ತಮ್ಮ ಮೂರ್ಖತನದಿಂದ ನಮಗೆ ಮನರಂಜನೆ ನೀಡುತ್ತಿದ್ದ ಇದೇ ಮುಕ್ರಿ ಆಳುಗಳು ದೀಪಾವಳಿ ಹಬ್ಬದ ರಾತ್ರಿಗಳಲ್ಲಿ ನಾನಾ ರೀತಿಯ ಕೋಲಾಟಗಳಿಂದ ಸಂತಸ ನೀಡುತ್ತಿದ್ದರು. ಹಳ್ಳಿಯಲ್ಲಿಯೇ ಸಿಗುವ ವಿವಿಧ ಹೂ-ನಾರು-ಬೇರು-ಎಲೆಗಳಿಂದ ಶೃಂಗರಿಸಿಕೊಂಡು ತಿಂಗಳುಗಟ್ಟಲೆ ಪ್ರಾಕ್ಟೀಸು ಮಾಡಿದ ಕೋಲಾಟವನ್ನು ಹೆಗಡೇರ ಮನೆ ಮುಂದೆ ಪ್ರದರ್ಶಿಸಿ ಉಡುಗೊರೆ ಪಡೆಯುತ್ತಿದ್ದರು.

ಈ ಮುಕ್ರಿ ಆಳುಗಳ ಕುರಿತು ಹತ್ತಾರು ಕತೆಗಳು ಹುಟ್ಟಿಕೊಂಡು ತಲೆ ಬಾಲ ಬೆಳೆಸಿಕೊಂಡದ್ದೂ ಸುಳ್ಳಲ್ಲ. ಕತೆಗೆ ಕಾಲಿಲ್ಲ ಅಂತೀರಾ? ಇರಬಹುದು...

ಈಗ ಅಜ್ಜನ ಮನೆ ಹಿಂದಿನ ಹೂವಿನ ಹಳ್ಳಿಯಲ್ಲ. ಐದು ದಶಕಗಳ ನಂತರ ಬಹಳಷ್ಟು ಬದಲಾವಣೆಗಳಾಗಿವೆ. ಮುಕ್ರಿ ಆಳುಗಳು ಕಲಿತು, ಬುದ್ಧಿವಂತರಾಗುತ್ತಿದ್ದಾರೆ. ಆದರೆ ಅಜ್ಜ-ಅಜ್ಜಿ, ದಾಮ-ದೂಮ ಎಲ್ಲಾ ಕಾಲಗರ್ಭದಲ್ಲಿ ಕಣ್ಮರೆಯಾಗಿದ್ದರೂ, ಈ ಘಟನೆಗಳನ್ನು ನೆನೆದಾಗಲೆಲ್ಲಾ ನಗು ತನ್ನಿಂದ ತಾನೇ ಅರಳುತ್ತದೆ.

ವಿಜಯಾ ಶ್ರೀಧರ್
೧ನೇ ಮುಖ್ಯರಸ್ತೆ, ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪

# ಪ್ರಾದೇಶಿಕ ಪಕ್ಷಗಳ ಆವಶ್ಯಕತೆ

ಡಾ॥ ಪಿ. ವಿ. ನಾರಾಯಣ

**ಕ**ರ್ನಾಟಕವನ್ನು ರಾಜ್ಯವೆಂದೂ ಭಾರತವನ್ನು ರಾಷ್ಟ್ರವೆಂದೂ ಕರೆಯುವುದಕ್ಕೆ ನನ್ನ ವಿರೋಧವಿದೆ. ಏಕೆಂದರೆ ಕರ್ನಾಟಕವು ಒಂದು ರಾಷ್ಟ್ರ, ಭಾರತವು ಇಂಥ ಅನೇಕ ರಾಷ್ಟ್ರಗಳ ಒಂದು ಒಕ್ಕೂಟ. ಬ್ರಿಟಿಷ್ ಪೂರ್ವದಲ್ಲಿ ಭಾರತವೆಂದೂ ಒಂದಾಗಿರಲಿಲ್ಲ; ಅದು ಒಂದೇ ಆಡಳಿತ ಕಕ್ಷೆಗೆ ಬಂದುದು ಬ್ರಿಟಿಷರ ಕಾಲದಲ್ಲೇ; ಅವರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಕಾಲದಲ್ಲಿ ಭಾರತ ಎಂಬ ರಾಷ್ಟ್ರದ ಕಲ್ಪನೆ ಯುಂಟಾದುದು. ಈಗಿನ ಭಾರತದ ಪ್ರತಿಯೊಂದು ರಾಜ್ಯವೂ ಸ್ವತಂತ್ರ ರಾಷ್ಟ್ರವಾಗುವ ಲಕ್ಷಣಗಳನ್ನು ಪಡೆದಿದೆ. ಈ ರಾಜ್ಯಗಳೆನ್ನಿಸಿಕೊಂಡಿರುವ ಭೂಪ್ರದೇಶಗಳು ಯೂರೋಪಿನ ದೇಶಗಳಂತೆಯೇ ಸ್ವತಂತ್ರ ಅಸ್ಮಿತೆ ಅಥವಾ ಅನನ್ಯತೆಯನ್ನು ಪಡೆದಂತಹವು. ಈ ದೃಷ್ಟಿಯಿಂದಲೇ ನಾನು ಪ್ರಾದೇಶಿಕ ಪಕ್ಷವೆಂದು ಕರೆಯಲಾಗುವ ಸಂಘಟನೆಯ ಮಹತ್ವವನ್ನು ಪ್ರತಿಪಾದಿಸುವುದು.

ಅದೇನೇ ಇರಲಿ, ಕರ್ನಾಟಕದ ಹಿತ ಕಾಪಾಡುವಲ್ಲಿ, ಅನ್ಯ ದಾಳಿಯನ್ನು ಸಮರ್ಥವಾಗಿ ಎದುರಿಸುವಲ್ಲಿ ಇಂಥ ಪಕ್ಷದ ಅಗತ್ಯ ನಮ್ಮ ನಾಡಿಗೆ ಎಂದಿಗಿಂತ ಇಂದು ಬಹು ಹೆಚ್ಚಾಗಿದೆ. ಇಲ್ಲಿಯವರೆಗೆ ನಮ್ಮನ್ನಾಳಿದ ಪಕ್ಷಗಳ ಸರ್ಕಾರಗಳೆಲ್ಲ ಸೂತ್ರದ ಗೊಂಬೆಗಳು; ಅವಕ್ಕೆ ಸ್ವತಂತ್ರ ಅಸ್ತಿತ್ವವೇ ಇರಲಿಲ್ಲ, ಈಗಲೂ ಇಲ್ಲ; ದೆಹಲಿಯ ಪ್ರಭುಗಳು ಆಡಿಸಿದಂತೆ ಆಡುವಂತಹವು. ಹೀಗಾಗಿ ಕರ್ನಾಟಕದ ಹಿತ ಕಾಪಾಡುವಲ್ಲಿ ಆ ಎಲ್ಲವೂ ದಯನೀಯವಾಗಿ ವಿಫಲವಾಗಿವೆ. ಆದ್ದರಿಂದ ಕರ್ನಾಟಕ ಮಟ್ಟದ ಪಕ್ಷ ಅಥವಾ ಪಕ್ಷಗಳನ್ನು ಈಗಲಾದರೂ ಸಂಘಟಿಸುವುದು ಆವಶ್ಯಕವಾಗಿದೆ.

ಕರ್ನಾಟಕದಲ್ಲಿ ಪ್ರಾದೇಶಿಕ ಪಕ್ಷಗಳು ಏಳಿಗೆ ಹೊಂದಲಾರವು ಎಂಬ ವಾದವೊಂದಿದೆ; ಹಾಗೆ ಹೇಳುವವರು ನೀಡುವ ನಿದರ್ಶನಗಳೆಂದರೆ ಹಿಂದೆ ಅನೇಕರು ಕಟ್ಟಬಯಸಿದ್ದ ಇಂಥ ಪಕ್ಷಗಳು ವಿಫಲವಾದದ್ದು. ಆದರೆ ಹಿಂದೆ ಪ್ರಾದೇಶಿಕ ಎಂಬ ಹಣೆಪಟ್ಟಿ ಹೊತ್ತ ಪಕ್ಷಗಳನ್ನು ಕಟ್ಟಹೊರಟವರು ತಾವಿದ್ದ ಪಕ್ಷದಲ್ಲಿ ತಮ್ಮ ಬೇಳೆಕಾಳು ಬೇಯಿಸಿಕೊಳ್ಳಲಾಗದವರು. ತಮ್ಮ ವರ್ಚಸ್ಸು ಕರ್ನಾಟಕದಲ್ಲಿ ಎಷ್ಟಿದೆ ಎಂದು ರುಜುವಾತುಪಡಿಸುವ ಆಕಾಂಕ್ಷೆ ಹೊತ್ತವರು. ಅವರಾರಿಗೂ ಕರ್ನಾಟಕದ ಹಿತ ಮುಖ್ಯವಾಗಲಿಲ್ಲ; ಹಾಗಾಗಿ ಜನ ಅಂಥವರನ್ನು ತಿರಸ್ಕರಿಸಿದರು. ನನ್ನ ಆದರ್ಶದ ಪಕ್ಷವೆಂದರೆ ಗಟ್ಟಿ ತಾತ್ವಿಕ ಬುನಾದಿಯ ಮೇಲೆ ನಿಂತ ಸಂಘಟನೆ. ಎಲ್ಲೆಲ್ಲಿ ಇಂಥ ಪಕ್ಷಗಳು ಯಶಸ್ವಿಯಾಗಿವೆ ಎಂಬುದನ್ನು ನೋಡಿದಾಗ ನಮಗೆ ಇಂಥ ಪಕ್ಷಗಳ ಯಶಸ್ಸಿನ ಗುಟ್ಟು ತಿಳಿಯುತ್ತದೆ. ತಮಿಳುನಾಡಿನಲ್ಲಿ ಇಂದು ಡಿಎಂಕೆ ಅಥವಾ ಎಐಎಡಿಎಂಕೆಯಂತಹ ಪಕ್ಷಗಳು ಮಾತ್ರ ಅಧಿಕಾರಕ್ಕೆ ಬರುವ ವಾತಾವರಣವಿದೆ. ಅಲ್ಲಿರುವ ಅನೇಕವು ಇಂಥ ಪಕ್ಷಗಳಾದ್ದರಿಂದ ಅವುಗಳಲ್ಲಿ ಪರ್ಯಾಯವೇರ್ಪಟ್ಟಿದೆಯೇ ಹೊರತು ರಾಜ್ಯ ಪಕ್ಷ ಮತ್ತು ದಿ ಸೋ ಕಾಲ್ಡ್ ರಾಷ್ಟ್ರೀಯ ಪಕ್ಷಗಳ ನಡುವೆ ಅಲ್ಲ. ಇನ್ನು ಅಸ್ಸಾಂನಲ್ಲಿ, ಆಸಾಮ್ ಗಣ ಪರಿಷದ್ ಒಂದೇ ರಾಜ್ಯ ಪಕ್ಷವಾಗಿರುವುದರಿಂದ ರಾಷ್ಟ್ರೀಯ ಪಕ್ಷಗಳಿಗೆ ಅದು ಒಂದು ಪರ್ಯಾಯವಾಗಿದೆ; ಆಂಧ್ರ, ಮಹಾರಾಷ್ಟ್ರಗಳಲ್ಲಿಯೂ ಹೀಗೆಯೇ.

ಈ ರಾಜ್ಯಗಳ ಪ್ರಾದೇಶಿಕ ಪಕ್ಷಗಳು ಅಲ್ಲಿನ ಜನತೆಯ ಹೃದಯವನ್ನು ಗೆದ್ದದ್ದು ಒಂದು ತಾತ್ವಿಕ ಕಾರಣಕ್ಕಾಗಿ. ತಮಿಳುನಾಡಿನಲ್ಲಿ ದ್ರಾವಿಡ ಚಳುವಳಿಯು ಪ್ರಬಲವಾದದ್ದು ತನ್ನ ಅನನ್ಯತೆಯನ್ನು ಕಾಪಾಡಿಕೊಳ್ಳುವುದಕ್ಕಾಗಿ; ಹಿಂದಿ ವಿರೋಧಿ ಚಳುವಳಿಯ ನೆವದಲ್ಲಿ ಈ ಅನನ್ಯತೆಗಾಗಿ ಹೋರಾಟ ನಡೆಯಿತು. ಅಸ್ಸಾಂನಲ್ಲಿ ಅನ್ಯದೇಶೀಯರ ಅತಿಯಾದ ವಲಸೆಯಿಂದ ಕಂಗೆಟ್ಟ ಜನ, ಅದರಲ್ಲೂ ಯುವಕರು, ತಮ್ಮ ಉಳಿವಿಗಾಗಿ ನಡೆಸಿದ ಚಳುವಳಿಯ ಫಲ ಗಣ ಪರಿಷದ್. ದೆಹಲಿಯ ವರಿಷ್ಠರು ತಮಗಿಷ್ಟ ಬಂದಾಗ ರಾಜ್ಯದ ಮುಖ್ಯಮಂತ್ರಿಯನ್ನು ಬದಲಾಯಿಸುವ ಪೈಖರಿಯನ್ನು ಕಂಡು ತೆಲುಗರ ಆತ್ಮಗೌರವವನ್ನು ಎತ್ತಿಹಿಡಿಯಲು ಎನ್. ಟಿ. ರಾಮರಾವ್ ಅವರು ತೆಲುಗು ದೇಶಂ ಪಕ್ಷವನ್ನು ಕಟ್ಟಿದರು. ಅಂದರೆ ರಾಜ್ಯ ಪಕ್ಷಗಳು ಯಶಸ್ವಿಯಾಗುವುದು ನಾಡಿನ ಮತ್ತು ಅಲ್ಲಿನ ಜನಸಮುದಾಯದ ಅನನ್ಯತೆಯನ್ನು ಎತ್ತಿ ಹಿಡಿಯುವ ಆದರ್ಶ ಹೊತ್ತಾಗ ಮಾತ್ರ ಎಂಬುದು ಇದರಿಂದ ಸಾಬೀತಾಗುತ್ತದೆ.

ಕರ್ನಾಟಕದಲ್ಲಿಯೂ ಇಂಥದೇ ಒಂದು ಸನ್ನಿವೇಶ ೧೯೮೨ರ ಹೊತ್ತಿಗೆ ನಿರ್ಮಾಣವಾಗಿತ್ತು. ಮಣ್ಣಿನ ಮಕ್ಕಳ ಹಿತ ಕಾಪಾಡಲು ನಡೆದ ರೈತ ಚಳವಳಿ ಮತ್ತು ನಾಡಿನ ಭಾಷೆಯ ಸಾರ್ವಭೌಮತ್ವಕ್ಕಾಗಿ ನಡೆದ ಗೋಕಾಕ್ ಚಳವಳಿ – ಇವುಗಳ ಬೆನ್ನಿನಲ್ಲಿ ಬಂದ ಚುನಾವಣೆಯಲ್ಲಿ ಮೊದಲ ಬಾರಿಗೆ ಇಲ್ಲಿನ ಜನ ರಾಷ್ಟ್ರಿಯ ಪಕ್ಷವನ್ನು ತಿರಸ್ಕರಿಸಿ ಬೇರೊಂದನ್ನು ಚುನಾಯಿಸಿದರು; ಬೋರ್ಡಿಗೇ ಇರದಿದ್ದ ಜನತಾ ಪಕ್ಷವನ್ನು! ಆಗ ಪ್ರಾದೇಶಿಕ ಹಿತ ಕಾಪಾಡಲು ಕಟಿಬದ್ಧವಾದ ಸುಸಂಘಟಿತ ಪಕ್ಷವೊಂದಿದ್ದರೆ ಖಂಡಿತ ಅದು ಗೆಲ್ಲುತ್ತಿತ್ತು ಮತ್ತು ಈ ಹೊತ್ತಿಗೆ ಅದು ಆಳವಾಗಿ ಬೇರೂರಿರುತ್ತಿತ್ತು. ರಾಮಕೃಷ್ಣ ಹೆಗಡೆ ಆಗ ಭಾರತದಲ್ಲಿ ಅಧಿಕಾರ ಹಿಡಿದ ಜನತಾ ಪಕ್ಷದ ಏಕೈಕ ಮುಖ್ಯಮಂತ್ರಿಯಾದರು. ಆದರೆ ತಾನು ರಾಷ್ಟ್ರೀಯ ನಾಯಕನೆಂಬ ಭ್ರಮೆ ಹೊತ್ತ ಅವರು ಅದನ್ನು ರಾಷ್ಟ್ರಿಯ ಪಕ್ಷವನ್ನಾಗಿ ಮಾಡಲು ಹೋಗಿ ಎಲ್ಲರಂತೆ ಪಕ್ಷವನ್ನು ದೆಹಲಿಯ ಗುಲಾಮತನಕ್ಕೆ ದೂಡಿದರು.

ಹೀಗಾಗಿ ಕರ್ನಾಟಕದ ಜನ ತಮ್ಮ ನಾಡು-ನುಡಿಗಳ ಮೇಲ್ಮೆಗಾಗಿ ಹೋರಾಡಬಲ್ಲ ಸಂಘಟನೆಗಾಗಿ ಹಾತೊರೆಯುತ್ತಿದ್ದಾರೆ. ಕನ್ನಡ ಚಳವಳಿಯ ಹೆಸರಿನಲ್ಲಿ ಒಂದಿಬ್ಬರು ಅಲ್ಲೊಮ್ಮೆ ಇಲ್ಲೊಮ್ಮೆ ಶಾಸನ ಸಭೆಗೆ ಆರಿಸಿ ಬಂದರೂ, ಚಳವಳಿಗೆ ತಾತ್ವಿಕ ನೆಲಗಟ್ಟು ಇಲ್ಲದ್ದರಿಂದ ಅದೊಂದು ಶಕ್ತಿಯಾಗಿ ರೂಪುಗೊಳ್ಳಲಿಲ್ಲ. ಚಳವಳಿ ಗೋಗರೆಯುವ ಮಟ್ಟಕ್ಕೆ ಇಳಿಯಿತು.

ಶುದ್ಧ ಆಡಳಿತ, ಭ್ರಷ್ಟಾಚಾರ ನಿರ್ಮೂಲನೆ, ಉದ್ಯೋಗ ಸೃಷ್ಟಿ, ಆರ್ಥಿಕ ಅಭಿವೃದ್ಧಿಯ ಮಾತುಗಳನ್ನು ಹೇಳಿದರೆ, ಇಂಥ ವಿಚಾರಗಳಿಗಷ್ಟೇ ಪ್ರಣಾಳಿಕೆ ಸೀಮಿತಗೊಂಡರೆ ಅದರಿಂದ ಪ್ರಯೋಜನವಿಲ್ಲ, ಪಕ್ಷದ ಸ್ವಂತಿಕೆ ಅಥವಾ ವೈಶಿಷ್ಟ್ಯವೇನೂ ಅದರಲ್ಲಿ ಕಾಣಿಸುವುದಿಲ್ಲ. ಏಕೆಂದರೆ ಯಾವ ಪಕ್ಷ ತಾನೇ ಭ್ರಷ್ಟಾಚಾರಕ್ಕೆ ಬೆಂಬಲ ನೀಡುವುದಾಗಿ ಘೋಷಿಸಿಕೊಳ್ಳುತ್ತದೆ, ನಿರುದ್ಯೋಗ ಹೆಚ್ಚಿಸುವುದೆ ತಮ್ಮ ಗುರಿ ಎಂದು ಹೇಳುತ್ತದೆ, ಸಾಕ್ಷರತೆಗೆ ವಿರೋಧವಾಗಿ ಹೇಳಿಕೆ ನೀಡುತ್ತದೆ? ಇವೆಲ್ಲವೂ ನಾನ್ಇಶ್ಯೂಸ್. ರಾಜ್ಯಮಟ್ಟದ ಪಕ್ಷವೆಂದರೆ ರಾಜ್ಯದ ಹಿತ ಕಾಪಾಡಲು ತಾನು ಯಾವ ಅಂಶಗಳನ್ನು ಪ್ರತಿಪಾದಿಸುತ್ತದೆ, ಅವುಗಳನ್ನು ಜಾರಿಗೊಳಿಸಲು ಯಾವ ಕಾರ್ಯತಂತ್ರವನ್ನು ರೂಪಿಸುತ್ತದೆ ಎಂಬುದನ್ನು ಜನರಿಗೆ ತಿಳಿಯಪಡಿಸಬೇಕು. ಇಂಥ ಕೆಲವು ಅಂಶಗಳನ್ನು ನಾನಿಲ್ಲಿ ಪ್ರಸ್ತಾಪಿಸಬಯಸುತ್ತೇನೆ.

೧. ನಮ್ಮ ಅಂತಿಮ ಆದರ್ಶವೆಂದರೆ ಭಾರತವನ್ನು ನಿಜವಾದ ಒಕ್ಕೂಟ ವಾಗಿಸುವುದು. ಅದಕ್ಕಾಗಿ ಅಧಿಕಾರ ವಿಕೇಂದ್ರೀಕರಣ, ಎಂದರೆ ಈಗಿನ ಪ್ರತಿ ರಾಜ್ಯವೂ ವಿಶಿಷ್ಟ ಲಕ್ಷಣಗಳನ್ನುಳ್ಳ ರಾಷ್ಟ್ರಗಳೆಂದು ಒಪ್ಪುವುದು. ಅಂತಾರಾಜ್ಯ ವಿಷಯಗಳು ಮತ್ತು ಅಖಿಲ ಭಾರತ ವ್ಯಾಪ್ತಿಯ ವಿಷಯಗಳನ್ನು ಮಾತ್ರ ಕೇಂದ್ರದ

ಈಗಿನ ಭಾರತದ ಪ್ರತಿಯೊಂದು ರಾಜ್ಯವೂ ಸ್ವತಂತ್ರ ರಾಷ್ಟ್ರವಾಗುವ ಲಕ್ಷಣಗಳನ್ನು ಪಡೆದಿದೆ. ಈ ರಾಜ್ಯಗಳೆನ್ನಿಸಿಕೊಂಡಿರುವ ಭೂಪ್ರದೇಶಗಳು ಯೂರೋಪಿನ ದೇಶಗಳಂತೆಯೇ ಸ್ವತಂತ್ರ ಅಸ್ಮಿತೆ ಅಥವಾ ಅನನ್ಯತೆಯನ್ನು ಪಡೆದಂತಹವು. ಈ ದೃಷ್ಟಿಯಿಂದಲೇ ಇಲ್ಲಿ ಪ್ರಾದೇಶಿಕ ಪಕ್ಷವೆಂದು ಕರೆಯಲಾಗುವ ಸಂಘಟನೆಯ ಮಹತ್ವವನ್ನು ಲೇಖಕರು ಪ್ರತಿಪಾದಿಸಿದ್ದಾರೆ.

ಕಕ್ಷೆಯಲ್ಲಿ ಉಳಿಸಿಕೊಳ್ಳುವುದು. ಇದಕ್ಕಾಗಿ ಪ್ರತಿ ರಾಜ್ಯವೂ ಅಥವಾ ನನ್ನ ದೃಷ್ಟಿಯಲ್ಲಿ ಪ್ರತಿ ರಾಷ್ಟ್ರವೂ, ಒಕ್ಕೂಟ ಸಂವಿಧಾನದೊಂದಿಗೆ, ಅದಕ್ಕೆ ವಿರುದ್ಧವಾಗದ ಪ್ರತ್ಯೇಕ ಸಂವಿಧಾನವನ್ನು ಹೊಂದಿರುವುದು.

೨. ಈಗಿನ ಏಕಪೌರತ್ವ ಕಲ್ಪನೆಯಿಂದಾಗಿ ಅಂತರರಾಜ್ಯ ವಲಸೆ ಹೆಚ್ಚಾಗಿ ಕರ್ನಾಟಕದಂತಹ ಕೆಲವು ರಾಜ್ಯಗಳು ಜರ್ಜರಿತವಾಗಿವೆ. ಅದನ್ನು ತಪ್ಪಿಸಲು ದ್ವಿಪೌರತ್ವವನ್ನು ಒಪ್ಪಿಕೊಳ್ಳಬೇಕು. ಭಾರತದ ಪ್ರತಿ ಪ್ರಜೆಯೂ ಏಕಕಾಲಕ್ಕೆ ಭಾರತ ಒಕ್ಕೂಟದ ಮತ್ತು ಒಂದು ರಾಜ್ಯದ ಪ್ರಜೆಯಾಗಿರುತ್ತಾನೆ. ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ವಲಸೆ ಬರುವವರು ಒಕ್ಕೂಟದ ಪ್ರಜೆಯಾಗಿದ್ದರೂ, ನೆಲಸಬೇಕಾದ ರಾಜ್ಯದ ಪೌರನಾಗಲು ಕೆಲವು ಷರತ್ತುಗಳನ್ನು ವಿಧಿಸಬೇಕು. ಒಂದು ರೀತಿಯಲ್ಲಿ ಈಗಿನ ನಮ್ಮ ಸಂವಿಧಾನದ ೩೭೦ನೇ ವಿಧಿಯಂತಹ ಕಾನೂನು ಎಲ್ಲ ಘಟಕಗಳಿಗೂ ಅನ್ವಯವಾಗಬೇಕು.

೩ ಭಾರತದ ಸಂಸತ್ತಿನಲ್ಲಿ ಎಲ್ಲ ರಾಜ್ಯಗಳೂ ಸಮಾನ ಪ್ರಾತಿನಿಧ್ಯವನ್ನು ಹೊಂದಿರಬೇಕು. ಆಗ ಕೆಲವು ರಾಜ್ಯಗಳ ಅಧಿಕ ಪ್ರಸಂಗಿತನ ನಿಲ್ಲುತ್ತದೆ. ಆಗ ಮಾತ್ರ ಭಾರತ ಹಿಂದಿ ಬೆಲ್ಟಿನ ಕಪಿಮುಷ್ಟಿಯಿಂದ ಪಾರಾಗಲು ಸಾಧ್ಯವಾಗುತ್ತದೆ.

೪. ನಮ್ಮ ಭಾಷಾ ಧೋರಣೆ ಬದಲಾಗಬೇಕು. ಈಗಿನ ತ್ರಿಭಾಷಾಸೂತ್ರಕ್ಕೆ ಯಾವ ಅರ್ಥವೂ ಇಲ್ಲ, ಅದಕ್ಕೆ ಯಾವ ಸಾಂವಿಧಾನಿಕ ಒಪ್ಪಿಗೆಯೂ ಇಲ್ಲ; ಅದು ದಕ್ಷಿಣದವರನ್ನು ಗುಲಾಮರಾಗಿಸಿಕೊಳ್ಳುವ ತಂತ್ರ ಮಾತ್ರವಾಗಿದೆ. ಆದ್ದರಿಂದ ದ್ವಿಭಾಷಾಸೂತ್ರವೇ ಈ ರೋಗಕ್ಕೆ ಮದ್ದು. ಆಯಾ ರಾಜ್ಯಭಾಷೆಯ ಜೊತೆಗೆ ಬೇರೊಂದು ಭಾಷೆಯನ್ನು ಕಲಿಯುವ ಆಯ್ಕೆಯನ್ನು ವಿದ್ಯಾರ್ಥಿಗಳಿಗೇ ಬಿಡಬೇಕು. ಕನಿಷ್ಠ ಪ್ರಾಥಮಿಕ ಹಂತದ ಶಿಕ್ಷಣದಲ್ಲಿ ಮಾತೃಭಾಷೆ ಮಾಧ್ಯಮವಾಗಬೇಕು. ಗಡಿ ದಾಟುವ ಅಥವಾ ಸೀಮೋಲ್ಲಂಘನ ಮಾಡುವ ಆಕಾಂಕ್ಷೆ ಹೊಂದಿದವರು ಅಥವಾ ಸ್ವಇಚ್ಛೆಯಿಂದ ಕಲಿಯಬಯಸುವವರು ಯಾವ ಭಾಷೆಯನ್ನು ಬೇಕಾದರೂ ಅಭ್ಯಾಸ ಮಾಡಲಿ. ಜನರನ್ನು ಸಾಕ್ಷರರನ್ನಾಗಿ ಮಾಡುವ ಮೊದಲ ಭಾಷೆಯ ಹೊರತು ಮಿಕ್ಕವೆಲ್ಲ ಐಚ್ಛಿಕವಾಗಿರಬೇಕು.

೫. ಈಗಿರುವಂತೆ ಸಂವಿಧಾನದ ೧೭೦ನೇ ವಿಧಿಯು ಜನರನ್ನು ಹಿಂದಿ-ಹಿಂದಿಯೇತರ ಎಂಬ ತಾರತಮ್ಯ ಮಾಡಿ ಹಿಂದಿಯೇತರರನ್ನು ಎರಡನೆಯ ದರ್ಜೆಗೆ ಇಳಿಸಿದೆ. ಹಾಗೆಯೇ ಹಿಂದಿಯನ್ನು ಏಕೈಕ ಸಂಪರ್ಕ ಭಾಷೆಯೆಂದು ಘೋಷಿಸಿರುವುದು ಮತ್ತು ಅದಕ್ಕಿಂತ ಹೆಚ್ಚು ಶ್ರೀಮಂತವಾದವುಗಳನ್ನು ಪ್ರಾದೇಶಿಕ ಭಾಷೆಗಳೆಂದು ಕರೆದಿರುವುದು ಅವಮಾನಕರವಾಗಿದೆ. ಆದ್ದರಿಂದ ಅವೆಲ್ಲವನ್ನೂ ರಾಷ್ಟ್ರಭಾಷೆಗಳೆಂದು ಘೋಷಿಸಬೇಕು. ಭಾರತ ಸರ್ಕಾರದ ಮತ್ತು ಅಂತಾರಾಜ್ಯ ವ್ಯವಹಾರಗಳಿಗೆ ಈ ಎಲ್ಲ ಭಾಷೆಗಳೂ ಉಪಯೋಗವಾಗಬೇಕು. (ಮೊದಲ ಬಾರಿಗೆ ಎಐಎಡಿಎಂಕೆಯು ಎನ್‌ಡಿಎ ಸರ್ಕಾರಕ್ಕೆ ಬೆಂಬಲ ಕೊಟ್ಟಾಗ ಜಯಲಲಿತಾ ಈ ಷರುತ್ತ ಹಾಕಿದ್ದರು; ಬಿಜೆಪಿ ಅದನ್ನು ಒಪ್ಪಿತ್ತು. ಆದರೆ ಅವರ ಸಖ್ಯ ಹರಿದು ಈ ಸಲಹೆ ಮಣ್ಣುಪಾಲಾಯಿತು).

## ದಡದಂಚಿನ ದೇವತೆಗಳು



ಕುಂಕುಮ ಬಳಿದ ಪುಷ್ಪಾವೃತ
ಕಲ್ಲು ಮಣ್ಣು ಅಥವಾ ಕಂಚಿನ
ತಾಯಂದಿರು ಮತ್ತು ರಣಧೀರರು
ಅವರ ಅಸ್ತಿಭಾರಗಳ ಮೇಲೆ ನಿಂತು
ಯಾವುದೋ ಪುರಾತನ ಭಯದಿಂದ
ಸಮುದ್ರವನ್ನೇ ದಿಟ್ಟಿಸುತ್ತಿದ್ದರು.

ಅದು ಸಂಭವಿಸಬಹುದೆಂದು ಯಾರೂ
ಯೋಚಿಸಿರಲಿಲ್ಲ
ಪಾತಾಳಗರ್ಭದಿಂದ ಬೋರ್ಗರೆಯುತ್ತ ಅಲೆ
ದಡದಂಚಿಗೆ ಉಕ್ಕುತ್ತ ನೊರೆಗಚ್ಚುತ
ಒಳನಾಡಿನ ಬಾಗಿಲ ಅಗುಳಿ ಹಾಕಿತು
ತುಳಿಯುತ್ತಾ ದೇಹಗಳನ್ನು ಮತ್ತು ಮನೆಗಳನ್ನು

ಅವರ ಕಣ್ಣುಗುಂಡಿಗಳಿಗೆ ಉಪ್ಪಿನ ಮೆರಗು
ಬಟ್ಟಲುಗಳು ಅಸಹಾಯಕವಾಗಿ ದಿಟ್ಟಿಸುತ್ತಿದ್ದವು
ಮೊಣಕಾಲು ಮುರಿದವು, ಅವರು ಕುಸಿದು ಬಿದ್ದರು
ಭಕ್ತಾದಿಗಳೊಡನೆ ಮುಳುಗಿದರು
ಅವಶೇಷಗಳಡಿಯಲ್ಲಿ ಮುಚ್ಚಿಹೋದರು.

ಆಂಗ್ಲಮೂಲ : ರೋಮೀನಾ ಹಿಲ್
ಅನುವಾದ : ಮೂಡ್ನಾಕೂಡು ಚಿನ್ನಸ್ವಾಮಿ
ಮುಖ್ಯಲೆಕ್ಕಾಧಿಕಾರಿ ಹಾಗೂ ಆ.ಸ., ಈ.ಕ.ರ.ಸಾ.ಸಂಸ್ಥೆ ಕೇಂದ್ರ ಕಛೇರಿ, ಗುಲಬರ್ಗಾ

೬. ಅಖಿಲ ಭಾರತೀಯ ಸೇವೆಗಳನ್ನು ರದ್ದು ಪಡಿಸಬೇಕು. ಏಕೆಂದರೆ ಅಧಿಕಾರ ವಿಕೇಂದ್ರೀಕರಣದಿಂದಾಗಿ ಕೇಂದ್ರದ ಕಚೇರಿಗಳು ಬೆರಳೆಣಿಕೆಯಷ್ಟಾಗುತ್ತವೆ. ಒಕ್ಕೂಟ ವ್ಯವಹಾರವು ಆಯಾ ರಾಜ್ಯಭಾಷೆಯಲ್ಲಿಯೇ ನಡೆಯಬೇಕು. ಸದ್ಯಕ್ಕೆ ಎಲ್ಲ ವ್ಯವಹಾರಗಳೂ ಇಂಗ್ಲಿಷಿನಲ್ಲಿ ದಾಖಲುಗೊಳ್ಳಬೇಕು. ಸಮಾನ ಸೌಲಭ್ಯ ಅಥವಾ ಅಸೌಲಭ್ಯದ ಕಾರಣ ಇಂಗ್ಲಿಷನ್ನು ಆಯ್ಕೆ ಮಾಡಿಕೊಳ್ಳಬೇಕಾಗಿದೆ, ಅಷ್ಟೆ.

ಒಟ್ಟಾರೆ, ಈಗಿರುವ ರಾಷ್ಟ್ರೀಯ-ಪ್ರಾದೇಶಿಕ ಎಂಬ ದ್ವೈಧೀಕರಣವು ನಿಂತು ದೇಶವು ನಿಜವಾದ ಸಮಾನತೆಯ ನೆಲಗಟ್ಟಿನ ಮೇಲೆ ನಿಲ್ಲಬೇಕು. ಇಂತಹ ಪ್ರಣಾಳಿಕೆಯು ಎಲ್ಲ ರಾಜ್ಯಗಳಿಗೂ ಅನ್ವಯಗೊಳ್ಳಬಹುದಾದುದು. ಮೇಲೆ ಸೂಚಿಸಿರುವ ಅಂಶಗಳು ತಕ್ಷಣ ಎಲ್ಲರಿಗೂ ಒಪ್ಪಿತವಾಗುತ್ತವೆಂಬ ನಂಬಿಕೆಯೇನೂ ನನಗಿಲ್ಲ. ಆದರೆ ಪ್ರಾದೇಶಿಕ ಆಶೋತ್ತರಗಳನ್ನು ಹೊತ್ತ ಪಕ್ಷಗಳು ಇವನ್ನು ಚರ್ಚಿಸಿ ತಮ್ಮ ಧ್ಯೇಯಗಳಲ್ಲಿ ಸೇರಿಸಿಕೊಂಡಾಗ ಮಾತ್ರ ಅವು ವಿಭಿನ್ನವಾಗುತ್ತವೆ; ಇವುಗಳನ್ನು ಸಾಕ್ಷಾತ್ಕರಿಸಿಕೊಳ್ಳುವುದರಲ್ಲಿ ಕ್ರಿಯಾಶೀಲವಾದಾಗ ಮಾತ್ರ ಅವುಗಳು ಅರ್ಥಪೂರ್ಣವೆನಿಸಿಕೊಳ್ಳುತ್ತವೆ. ಹೀಗಾದಾಗ ತಾರತಮ್ಯ ನಿವಾರಣೆಯಾಗಿ ದೇಶದ ಸಮಗ್ರತೆ ಗಟ್ಟಿಗೊಳ್ಳುತ್ತದೆ, ಇಲ್ಲದಿದ್ದರೆ ಶಿಥಿಲತೆಗೆ ನಾವೇ ಅವಕಾಶ ಮಾಡಿಕೊಟ್ಟಂತಾಗುತ್ತದೆ. ದೇಶದ ಎಲ್ಲೆಡೆ ಇಂಥ ಪಕ್ಷಗಳೇ ಅಧಿಕಾರಕ್ಕೆ ಬಂದು ಕೇಂದ್ರದಲ್ಲಿ ಇವುಗಳೆಲ್ಲ ಸೇರಿ ಸರ್ಕಾರ ರಚಿಸಿದರೆ ಸೌಹಾರ್ದ ತಾನಾಗಿ ಮೂಡುತ್ತದೆ.

ಕನ್ನಡದ ಅತ್ಯಂತ ಹಳೆಯ ಉಪಲಬ್ಧ ಗ್ರಂಥವಾದ 'ಕವಿರಾಜಮಾರ್ಗ'ದಲ್ಲಿ ಕನ್ನಡ ನಾಡನ್ನು ''ಕಾವೇರಿಯಿಂದಮಾ ಗೋದಾವರಿವರಮಿರ್ದ'' ನಾಡೆಂದು ಹೇಳುವುದರ ಜೊತೆಗೆ, ಅದನ್ನು ''ವಸುಧಾವಲಯ ವಿಶದವಿಷಯವಿಶೇಷಂ'' ಎಂದು ಬಣ್ಣಿಸಿದೆ. ಎಂದರೆ ಕನ್ನಡ ನಾಡು ಇಡೀ ವಿಶ್ವದ ಅನೇಕ ನಾಡುಗಳಲ್ಲಿ ಒಂದು, ತನ್ನಷ್ಟಕ್ಕೆ ವಿಶಿಷ್ಟವಾಗಿರುವುದು. ಎಂದರೆ ಕನ್ನಡ ನಾಡನ್ನು ವಿಶ್ವದ ಒಂದು ಭಾಗವೆಂದು ಅಲ್ಲಿ ಗುರುತಿಸಿ ಅದರ ಅನನ್ಯತೆಯನ್ನು ಕುರಿತು ಒತ್ತಿ ಹೇಳಿದೆ. ನಮ್ಮ ಅತ್ಯಂತ ಜನಪ್ರಿಯ ಗೋವಿನ ಹಾಡು ಆರಂಭವಾಗುವುದು ''ಧರಣಿಮಂಡಲ ಮಧ್ಯದೊಳಗೆ ಮೆರೆಯುತಿಹ ಕರ್ನಾಟ ದೇಶದೊಳ್'' ಎಂದು. ಎಂದರೆ ಶಿಷ್ಟ ಮತ್ತು ಜಾನಪದದಲ್ಲಿ ಕರ್ನಾಟಕದ ಅಸ್ಮಿತೆಯನ್ನು ಸರಿಯಾಗಿ ಗುರುತಿಸಲಾಗಿದೆ. ಈಗಿರುವುದು ಕೇವಲ ಒಂದು ಶತಮಾನದಷ್ಟು ಹಳೆಯದಾದ, ತಳ ಭದ್ರವಿಲ್ಲದ ಪರಿಕಲ್ಪನೆಯ ಮೇಲೆ ಕಟ್ಟಿರುವ ಕಟ್ಟಡ ಅಷ್ಟೆ. ಹಾಗಾಗಿ ಕನ್ನಡ ಜನರ ಹಿತಕ್ಕೆಂದು ಪ್ರಾಮಾಣಿಕವಾಗಿ ಹೊರಡುವ ಜನರು ಈ ಬಗ್ಗೆ ಗಂಭೀರವಾಗಿ ಆಲೋಚಿಸಬೇಕೆಂಬುದು ನನ್ನ ಪ್ರಾರ್ಥನೆ.

ಡಾ|| ಪಿ. ವಿ. ನಾರಾಯಣ
'ತಂಗಾಳಿ', ನಂ. ೩೦, ಆರ್‌ಬಿಐ ಕಾಲೋನಿ, ಜಯನಗರ ಮೂರನೇ ಬ್ಲಾಕ್ ಪೂರ್ವ, ಬೆಂಗಳೂರು - ೫೬೦ ೦೧೧

# ಎತ್ತ ಸಾಗಿದೆ ಉನ್ನತ ಶಿಕ್ಷಣ ?



ಡಾ|| ಜಂಧ್ಯಾಲ ಬಿ. ಜಿ. ತಿಲಕ್, ಹಿರಿಯ ಮತ್ತು ಮುಖ್ಯಸ್ಥ, ಶೈಕ್ಷಣಿಕ ಹಣಕಾಸು ಘಟಕ (NIEPA), ರಾಷ್ಟ್ರೀಯ ಶೈಕ್ಷಣಿಕ ಯೋಜನೆ ಮತ್ತು ಆಡಳಿತ ಸಂಸ್ಥೆ.

*ಸಂದರ್ಶಕರು*

**ಸುಧಾ ಸೀತಾರಾಮನ್**

ಜಂಧ್ಯಾಲ ತಿಲಕ್ ವಿಶ್ವಸಂಸ್ಥೆಯ ಸಿಬ್ಬಂದಿಯಾಗಿ, ಏಷ್ಯಾ ಅಭಿವೃದ್ಧಿ ಬ್ಯಾಂಕ್, ವಿಶ್ವಸಂಸ್ಥೆ, ಯುನಿಸೆಫ್, ಯುಎನ್‌ಡಿಪಿ ಮತ್ತು ಯುನೆಸ್ಕೊಗೆ ಸಲಹೆಗಾರರಾಗಿ ಕೆಲಸ ಮಾಡಿದ್ದಾರೆ. ಒಟ್ಟು ಏಳು ಪುಸ್ತಕಗಳನ್ನು ಬರೆದಿರುವ ತಿಲಕ್, ಹಲವಾರು ಲೇಖನಗಳನ್ನು ಪ್ರತಿಷ್ಠಿತ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಅವರ ಅಧ್ಯಯನಗಳಿಗೆ ಹಲವಾರು ಪ್ರತಿಷ್ಠಿತ ಪ್ರಶಸ್ತಿಗಳು ಸಂದಿವೆ. ಅವರು ಭಾರತ ಸರ್ಕಾರದ ಹಲವಾರು ಸಮಿತಿಗಳಲ್ಲಿ ಸಕ್ರಿಯರಾಗಿದ್ದಾರೆ ಕೂಡ. 'ಜಂಧ್ಯಾಲ ತಿಲಕ್' ಎಂದೇ ಪ್ರಸಿದ್ಧರಾಗಿರುವ ಶ್ರೀಯುತರು ಪ್ರಸ್ತುತ 'ಶೈಕ್ಷಣಿಕ ಯೋಜನೆ ಮತ್ತು ಆಡಳಿತ' ಪತ್ರಿಕೆಯ ಸಂಪಾದಕರಾಗಿದ್ದಾರೆ. ತಿಲಕ್, ಹಲವು ವೃತ್ತಿಪರ ಪತ್ರಿಕೆಗಳ ಸಂಪಾದಕ ಮಂಡಳಿಗಳಲ್ಲಿ ಕೂಡ ಇದ್ದಾರೆ.

ಪ್ರಸ್ತುತ ಚರ್ಚೆಗೆ ಗ್ರಾಸವಾಗಿರುವ ಕೇಂದ್ರ ವಿಶ್ವವಿದ್ಯಾಲಯಗಳಿಗೆ ಸಂಬಂಧಿಸಿದಂತೆ–ಜಸ್ಟಿಸ್ ಪುಣ್ಣಯ್ಯ ವರದಿ ಮತ್ತು ನಿರ್ದಿಷ್ಟವಾಗಿ ತಾಂತ್ರಿಕ ಶಿಕ್ಷಣ ಮತ್ತು ಉನ್ನತ ಶಿಕ್ಷಣಕ್ಕೆ ಸಂಬಂಧಿಸಿ ಡಾ|| ಸ್ವಾಮಿನಾಥನ್ ಸಮಿತಿ ವರದಿಯು, ಸದರಿ ಸಂಸ್ಥೆಗಳು ಕನಿಷ್ಠ ಶೇ. ೨೦ರಷ್ಟು ಮೊತ್ತವನ್ನು ತಾವೇ ಕ್ರೋಡೀಕರಿಸಲು (ನಿರ್ದಿಷ್ಟವಾಗಿ ಶುಲ್ಕದ ಮೂಲಕ) ಶಿಫಾರಸುಗಳನ್ನು ನೀಡಿದ್ದು, ಇದರ ಪರಿಣಾಮವೇನಾಗಬಹುದು ಎನ್ನುವ ಹಿನ್ನೆಲೆಯಲ್ಲಿ ತಿಲಕ್‌ರೊಂದಿಗೆ ಸಂವಾದ ನಡೆಸಲಾಯಿತು. ಮುಖೇಶ್ ಅಂಬಾನಿ ಮತ್ತು ಕುಮಾರಮಂಗಳಮ್ ಬಿರ್ಲಾ ವರದಿಯು ಈ ನಿಲುವನ್ನು ಪುಷ್ಟೀಕರಿಸಿದ್ದು, ಸರ್ಕಾರ ಪ್ರಾಥಮಿಕ ಶಿಕ್ಷಣಕ್ಕೆ ಸೀಮಿತಗೊಳ್ಳುವಂತೆ ಮತ್ತು ಉನ್ನತ ಶಿಕ್ಷಣದ ವಿಚಾರವನ್ನು ಖಾಸಗಿ ಸಂಸ್ಥೆಗಳಿಗೆ ಬಿಟ್ಟುಬಿಡುವಂತೆ ಶಿಫಾರಸು ನೀಡಿದೆ. ಮಾರುಕಟ್ಟೆ ನಿರ್ದೇಶಿತ ನಿಲುವಿಗೆ ಬದ್ಧರಾಗಿದ್ದಾಗ್ಯೂ, ಇವರುಗಳು ಶುಲ್ಕ ಕಡಿತ ಅಥವಾ ಕೆಳವರ್ಗಕ್ಕೂ ನಿಲುಕುವಂತಹ ವ್ಯವಸ್ಥೆ ಶಿಕ್ಷಣದ ಗುಣಮಟ್ಟವನ್ನು ಕಡಿಮೆ ಮಾಡುವುದಾಗಿ ಆತಂಕ ವ್ಯಕ್ತಪಡಿಸುತ್ತಾರೆ. ಆದರೆ, ಇದುವರೆವಿಗೂ ಶುಲ್ಕ ಕಡಿಮೆಯಾಗಿದ್ದಾಗ್ಯೂ ಕೂಡ, ಉನ್ನತ ಶಿಕ್ಷಣದ ಗುಣಮಟ್ಟ ಅಂತಹ ಕುಸಿತವನ್ನೇನೂ ಕಾಣದಿರುವುದನ್ನು ಮರೆಯುತ್ತಾರೆ. ವಿವಿಧ ದೇಶಗಳಲ್ಲಿರುವ ಉನ್ನತ ಶಿಕ್ಷಣ ವ್ಯವಸ್ಥೆ, ಭಾರತದಲ್ಲಿ ಆಗುತ್ತಿರುವ ಬದಲಾವಣೆಗಳು, ಪರಿಹಾರದ ನಿಟ್ಟಿನಲ್ಲಿ ತೆರೆದುಕೊಳ್ಳುತ್ತಿರುವ ಸಾಧ್ಯತೆಗಳನ್ನು ಗುರುತಿಸುತ್ತಾ , ತಿಲಕ್ ತಮ್ಮ ಚಿಕಿತ್ಸಕ ಆಲೋಚನಾ ಲಹರಿಯನ್ನು ಇಲ್ಲಿ ಹರಿಯಬಿಟ್ಟಿದ್ದಾರೆ.

ಇತ್ತೀಚೆಗೆ ತಿಲಕ್ ಸಿಇಟಿ ಬಿಕ್ಕಟ್ಟು ಪರಿಹರಿಸಲು ರಾಷ್ಟ್ರೀಯ ಕಾರ್ಯನೀತಿ ರೂಪಿಸುವ ನಿಮಿತ್ತ ಬೆಂಗಳೂರಿನ ಸಭೆಗೆ ಹಾಜರಾಗಲು ಬಂದಿದ್ದರು. ಆಗ ಈ ಸಂದರ್ಶನವನ್ನು ನಡೆಸಲಾಯಿತು.

ಈ ಸಂದರ್ಶನವನ್ನು ನಡೆಸಿದ ಡಾ|| ಸುಧಾ ಸೀತಾರಾಮನ್, ಬೆಂಗಳೂರಿನ ಸರ್ಕಾರಿ ಕಲಾ ಕಾಲೇಜಿನಲ್ಲಿ ಸಮಾಜಶಾಸ್ತ್ರದ ಹಿರಿಯ ಉಪನ್ಯಾಸಕರಾಗಿದ್ದಾರೆ.

**ಸುಧಾ** : ಸಂಯುಕ್ತ ಪ್ರಗತಿಪರ ಮೈತ್ರಿ, ಸಾಮಾನ್ಯ ಕನಿಷ್ಠ ಕಾರ್ಯಕ್ರಮದಡಿಯಲ್ಲಿ ಚಾಲನೆಗೆ ತಂದಿರುವ ಕಾರ್ಯಕ್ರಮಗಳ ಬಗೆಗೆ ನಿಮ್ಮ ಅಭಿಪ್ರಾಯವೇನು ?

**ತಿಲಕ್** : ಸರ್ಕಾರ ಪ್ರಕಟಿಸಿರುವ ಪ್ರಸ್ತುತ, ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ಹೊಸತೇನೂ ಇಲ್ಲ. ಅದರ ಸೂಚಕವೇನೆಂದರೆ, ಸರ್ಕಾರ ರಾಷ್ಟ್ರೀಯ ಆದಾಯದ ಶೇ. ೬ನ್ನು ಶಿಕ್ಷಣಕ್ಕಾಗಿ ವ್ಯಯಿಸುವುದಾಗಿ ಭರವಸೆ ನೀಡಿದ್ದು. ಸ್ಪಷ್ಟವಾದ ಕಾಲಮಿತಿಯುಳ್ಳ ಅಥವಾ ಬದ್ಧತೆ ತೋರದೆ ವಿವಿಧ ಸರ್ಕಾರಗಳು ೧೫-೨೦ ವರ್ಷಗಳಿಂದ ಭರವಸೆ ನೀಡುತ್ತಿರುವುದರಲ್ಲಿ ಅಂತಹ ವ್ಯತ್ಯಾಸವೇನೂ ಕಾಣುವುದಿಲ್ಲ. ಬಡವರಿಗೆ ಶಿಕ್ಷಣ ಸೌಲಭ್ಯ ಒದಗಿಸಲು ಮತ್ತು ತಲುಪುವಂತಾಗಲು ಇವರ ಕಾರ್ಯವಿಧಾನಗಳೇನು ಎಂಬುದನ್ನು ಸ್ಪಷ್ಟಪಡಿಸಿಲ್ಲ. ಹಾಗೆ ನೋಡಿದರೆ, ಸರ್ಕಾರ ಸ್ಥಿರವಾದ, ದೀರ್ಘಕಾಲೀನ ಕಾರ್ಯನೀತಿಯನ್ನು ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದಂತೆ ರೂಪಿಸಿಲ್ಲ. ಅದರ ಮಧ್ಯಸ್ಥಿಕೆಗಳೇನಿದ್ದರೂ ತಟಸ್ಥವಾಗಿದೆಯೆಂದು ಅಥವಾ 'ಲೇಸೇ ಫೇರಿಸಂ' (laissez faireism) ಬಂಡವಾಳಶಾಹಿಪರ ನಿಲುವುಗಳಿಗೆ ಸೀಮಿತವಾಗಿರುವುದು ಎಂಬಂತಾಗಿದೆ. ಅದರ ಪರಿಣಾಮ ತೀರಾ ಹಾನಿಕಾರಕವಾಗಿದೆ. ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಅನಿಯಂತ್ರಿತ ಬೆಳವಣಿಗೆಗೆ ಅದು ಎಡೆ ಮಾಡಿಕೊಟ್ಟಿದೆ. ಇದರೊಂದಿಗೆ, ವೃತ್ತಿಪರ ಸಲಹಾ ಸಮಿತಿಗಳನ್ನು ಭಾರತೀಯ ತಾಂತ್ರಿಕ, ವೈದ್ಯಕೀಯ ಮತ್ತು ವೈಜ್ಞಾನಿಕ ಶಿಕ್ಷಣದ ಮೇಲುಸ್ತುವಾರಿಗೆಂದು ಸ್ಥಾಪಿಸಿದ್ದು ಸಮಸ್ಯೆಯನ್ನು ಇನ್ನಷ್ಟು ಕ್ಲಿಷ್ಟಗೊಳಿಸಿದಂತಾಗಿದೆ. ಇದರ ಪರಿಣಾಮ ಏನಾಗಿದೆಯೆಂದರೆ, ನ್ಯಾಯಾಲಯಗಳು ವಿವಾದಗಳಿಂದ ತುಂಬಿಹೋಗಿವೆ. ನ್ಯಾಯಾಲಯಗಳು ಕೆಲವೊಂದು ಒಳ್ಳೆಯದನ್ನು ಮಾಡುತ್ತಿರಬಹುದು. ಆದರೆ, ಸುಸಂಬದ್ಧವಾಗಿ

ಸಂಸ್ಥೆಗಳು ಲಾಭ ಮಾಡುವ ಹಾಗಿಲ್ಲವೆಂದು ನಿರ್ದೇಶನವಿದ್ದಾಗ್ಯೂ, ಹೇರಳವಾಗಿ ಹಣಗಳಿಸಲು ಅವಕಾಶ ಮಾಡಿಕೊಟ್ಟಿದೆ.

**ಸುಧಾ :** ನಾವು ನೆಹ್ರೂ ಕನಸಿನ ಶಿಕ್ಷಣ ವ್ಯವಸ್ಥೆಯನ್ನು ದಾಟಿ ಬಂದಿದ್ದೇವೆಯೇ ? ನೀವು ಶಿಕ್ಷಣದ ವ್ಯವಸ್ಥೆಯ ಬಗೆಗಿನ ಹಿಂದಿನ ಮತ್ತು ಈಗಿನ 'ಕಾಣ್ಕೆ'ಯಲ್ಲಿ (ವಿಷನ್) ಯಾವ ರೀತಿಯ ವ್ಯತ್ಯಾಸಗಳನ್ನು ಕಾಣುವಿರಿ ?

**ತಿಲಕ್ :** ಅಗಾಧ ಬದಲಾವಣೆಗಳಾಗಿವೆ. ಸಂವಿಧಾನವನ್ನು ೧೯೫೦ರಲ್ಲಿ ರಚಿಸಿದ ಕಾಲಕ್ಕೆ ಶಿಕ್ಷಣವನ್ನು ಸಾಮಾಜಿಕ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಪ್ರಮುಖವಾದೊಂದು ಅಂಶವೆಂದು ಪರಿಗಣಿಸಲಾಗಿತ್ತು. ಶಿಕ್ಷಣ ವ್ಯವಸ್ಥೆಯಲ್ಲಿ ಸಮಾನತೆಯನ್ನು ತರಲು ಆರ್ಥಿಕ ಬೆಳವಣಿಗೆಯನ್ನೊಳಗೊಂಡು ಎಲ್ಲಾ ರೀತಿಯ ಬೆಳವಣಿಗೆಗಳಿಗೆ ಅಡಿಪಾಯವೆಂದು ಬಗೆಯಲಾಗಿತ್ತು. ಶಿಕ್ಷಿತರು ಮತ್ತು ಹೆಚ್ಚಿನ ಪ್ರಜ್ಞಾವಂತ ನಾಗರಿಕರು ಅಧಿಕಗೊಂಡಂತೆ ಸಾಮಾಜಿಕ ಪ್ರಯೋಜನ ಹೆಚ್ಚಬಹುದೆಂದು ಭಾವಿಸಲಾಗಿತ್ತು. ಇತರ ಪ್ರಯೋಜನಗಳಾದ ಆರ್ಥಿಕ ಮತ್ತು ಉದ್ಯೋಗ ಮಾರುಕಟ್ಟೆ ಪ್ರಯೋಜನಗಳನ್ನು ಪಕ್ಕಕ್ಕೆ ತಳ್ಳಲಾಗಿತ್ತು. 'ಶಿಕ್ಷಣದಲ್ಲಿ ಲಾಭ ಮಾಡುವುದು' ಎಂಬ ನುಡಿಗಟ್ಟು ಶಿಕ್ಷಣದ ವಿಚಾರಕ್ಕೆ ಸಂಬಂಧಿಸಿದಂತೆ ನಿಷೇಧಕ್ಕೊಳಗಾಗಿ, ಶಿಕ್ಷಣ ನೀಡುವುದು ಸಮಾಜ ಸೇವೆಯೆಂದು ಪರಿಗಣಿಸಲಾಗಿತ್ತು. ಆದರೀಗ ಹಿಂದು-ಮುಂದಾಗಿದೆ. ಎರಡು ದಶಕಗಳಿಂದಾದ ಬದಲಾವಣೆಗಳು ಮಹತ್ತ್ವದ್ದಾಗಿವೆ. ವಿಶಾಲವಾಗಿ ನೋಡುವುದಾದರೆ, ಸಾಮಾಜಿಕ-ಆರ್ಥಿಕ ಕಾರ್ಯನೀತಿಗಳು ಜನಕಲ್ಯಾಣ ನಿರ್ದೇಶಿತವಾಗಿದ್ದವು. ಈಗ ಸಾಮಾಜಿಕ ವಿನ್ಯಾಸಗಳ ಬಗ್ಗೆ ಕೆಲವೇ ಜನರು ಮಾತನಾಡುತ್ತಾರೆ. ಎಲ್ಲರೂ ಈಗ ಮಾರುಕಟ್ಟೆ ತತ್ತ್ವದಿಂದ ನಿರ್ದೇಶಿತರಾಗಿದ್ದು, ಅದರಲ್ಲಿಯೇ ಮುಳುಗಿಹೋಗಿದ್ದಾರೆ.

**ಸುಧಾ :** ಸರ್ಕಾರ ಹಣದ ಕೊರತೆಯನ್ನನುಭವಿಸುತ್ತಿರುವುದರಿಂದ ಉನ್ನತ ಶಿಕ್ಷಣದ ಖಾಸಗೀಕರಣ ಅನಿವಾರ್ಯವೆಂದು ವಾದಿಸಲಾಗುತ್ತಿದೆ. ಲಭ್ಯವಿರುವ ನಿಧಿಯನ್ನೆಲ್ಲ ಪ್ರಾಥಮಿಕ ಶಿಕ್ಷಣಕ್ಕೆ ಬಳಸುವುದು ಮಾತ್ರ ಸೂಕ್ತವೆಂದು ಬಗೆಯಲಾಗುತ್ತಿದೆ...

**ತಿಲಕ್ :** ಎಲ್ಲಾ ಹಂತದ ಶಿಕ್ಷಣದ ನಡುವೆ ಒಂದು ನಿಕಟವಾದ ಸಂಬಂಧವಿದೆ. ವಿರೂಪಗೊಂಡ ಮತ್ತು ಸಮೀಪ ದೃಷ್ಟಿ ಹೊಂದಿರುವಾಗ ಮಾತ್ರ ಶಿಕ್ಷಣವನ್ನು 'ಬಿಡಿ'ಯಾಗಿ ಬಗೆದು ಚಿಂತನೆ ನಡೆಸಬಹುದಾಗಿದೆ. ಉನ್ನತ ಶಿಕ್ಷಣಕ್ಕೆ ಹಣವನ್ನು ಒದಗಿಸಲಾಗುವುದಿಲ್ಲ ಎಂಬ ಸರ್ಕಾರದ ವಾದವೇ ಸರಿಯಲ್ಲ. ಸಾರ್ವಜನಿಕ ಹಿತಾಸಕ್ತಿಗೆಂದು ಹಣವನ್ನು ಕ್ರೋಡೀಕರಿಸಲು ಮತ್ತು ಬಳಸಲು ರಾಜಕೀಯ ಇಚ್ಛಾಶಕ್ತಿಯ ಕೊರತೆಯಿದೆಯಷ್ಟೆ. ಸರ್ಕಾರದಲ್ಲಿ ಸಾರ್ವಜನಿಕ ಸಂಸ್ಥೆಗಳ ಸಲುವಾಗಿ ನಿಧಿಯಿದ್ದು, ಸರ್ಕಾರ ಹಲವಾರು ಮೂಲಗಳಿಂದ ಸಂಪನ್ಮೂಲವನ್ನು ಹುಟ್ಟುಹಾಕಬಹುದು. ಅದು ಪ್ರಗತಿಪರ ತೆರಿಗೆ ವ್ಯವಸ್ಥೆಯ ಮೂಲಕವಾಗಬಹುದು ಅಥವಾ ಸಾಂಸ್ಥಿಕ ಕ್ಷೇತ್ರದ ಮೇಲೆ ಹೇರುವ ಶೈಕ್ಷಣಿಕ ಕರವಿರಬಹುದು. ಅದು ಅನುದಾನದ ಮೂಲಕವೇ ಅಂತೇನೂ ಅಲ್ಲ. ತಾಂತ್ರಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ, ಇತ್ತೀಚಿನ ಸ್ವಾಮಿನಾಥನ್ ಸಮಿತಿ (೧೯೯೪) ವರದಿಯು, ಸಾಂಸ್ಥಿಕ ವಲಯ ಆರ್ಥಿಕ ಸಹಾಯ ನೀಡಲು ಅನುಕೂಲವಾಗುವಂತೆ ಶೈಕ್ಷಣಿಕ ಕರವನ್ನು (ಸೆಸ್) ವಿಧಿಸಬಹುದೆಂದು ಶಿಫಾರಸು ನೀಡಿದೆ. ಆದರದು ಸರ್ಕಾರದ ಗಮನಕ್ಕೆ ಬಂದಿಲ್ಲ.

**ಸುಧಾ :** ಶೈಕ್ಷಣಿಕ ಸಂಸ್ಥೆಗಳು 'ಹಣ ತೆತ್ತು - ಬಳಸು' ('user and pay') ಆಧಾರದಲ್ಲಿ ಆರ್ಥಿಕ ಸಹಾಯ ಪಡೆದುಕೊಳ್ಳಬಹುದೇ ? ಉನ್ನತ ಶಿಕ್ಷಣದ ಆರ್ಥಿಕ ಸಹಾಯ ಪಡೆಯಲು ವ್ಯಾಪಾರಾಧಾರಿತ ಮಾನದಂಡಗಳನ್ನು ಬಳಸುವುದು ಎಷ್ಟರಮಟ್ಟಿಗೆ ಸರಿ ?

**ತಿಲಕ್ :** ಉನ್ನತ ಶಿಕ್ಷಣವನ್ನು ವಿದ್ಯಾರ್ಥಿ ನೀಡುವ ಶುಲ್ಕ ಸಂಗ್ರಹಣೆಯ ಮೂಲಕ ನಡೆಸಬಹುದಾಗಿದೆ. ಆದರೆ 'ಸಮಗ್ರ ಉನ್ನತ ಶಿಕ್ಷಣ ವ್ಯವಸ್ಥೆ' ವಿದ್ಯಾರ್ಥಿ ಶುಲ್ಕವನ್ನ ವಲಂಬಿಸಿಯೇ ನಡೆಸಲಾಗುವುದಿಲ್ಲ. ಈ ನಡುವೆ, ದುರದೃಷ್ಟವಶಾತ್ ಅದೇ ಆಗುತ್ತಿರುವುದು. ವೆಚ್ಚವನ್ನು ಮರಳಿ ಪಡೆಯುವ ಪ್ರಮಾಣ ಹಲವಾರು ಖಾಸಗೀ ಸಂಸ್ಥೆಗಳಲ್ಲಿ ಶೇ.೧೦೦ ಆಗಿದೆ. ಇದರಿಂದ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ವರ್ಗದಿಂದ ಉನ್ನತ ಶಿಕ್ಷಣ ವ್ಯವಸ್ಥೆ ಪ್ರವೇಶವನ್ನು ಕಸಿದುಕೊಂಡಂತಾಗಿದೆ.

**ಸುಧಾ :** ಇತರೆ ದೇಶಗಳಲ್ಲಿ, ಉನ್ನತ ಶಿಕ್ಷಣಕ್ಕೆ ಆರ್ಥಿಕ ಬೆಂಬಲ ಹೇಗೆ ದಕ್ಕಿಸಿಕೊಳ್ಳುತ್ತಾರೆ ?

**ತಿಲಕ್ :** ಅಮೆರಿಕದಂತಹ ದೇಶಗಳಲ್ಲಿ ವಿದ್ಯಾರ್ಥಿಗಳು ಶಿಕ್ಷಣ ಪಡೆಯಲು ಹೆಚ್ಚಿನ ಹಣ ವ್ಯಯಿಸಬೇಕಾಗುತ್ತದೆ ಎಂಬ ಸಾಮಾನ್ಯ ತಪ್ಪು ತಿಳುವಳಿಕೆ ಜನರಲ್ಲಿದೆ. ಸರ್ಕಾರ 'ಸಮುದಾಯ ಕಾಲೇಜು'ಗಳಿಗೆ ಆರ್ಥಿಕ ಬೆಂಬಲ ನೀಡಿದರೆ, ಬೃಹತ್ ಸಂಸ್ಥೆಗಳ ಟ್ರಸ್ಟ್‌ಗಳು, ವಿಶ್ವವಿದ್ಯಾಲಯಗಳ ಬೆಂಬಲಕ್ಕಿರುತ್ತವೆ. ನಾವು ಅಲ್ಲಿ ಕಂಡುಕೊಂಡದ್ದೇನೆಂದರೆ, ಸರ್ಕಾರಿ ಕಾಲೇಜು ಮತ್ತು ವಿಶ್ವವಿದ್ಯಾಲಯದ ಒಟ್ಟು ವೆಚ್ಚದೊಂದಿಗೆ ಹೋಲಿಸಿದರೆ, ವಿದ್ಯಾರ್ಥಿಗಳು ಅಲ್ಪ ಮೊತ್ತವನ್ನು ಭರಿಸುತ್ತಾರೆ. ಹತ್ತಿರ, ಹತ್ತಿರ ಶೇ.೮೫ರಷ್ಟು ಸರ್ಕಾರದಿಂದ ಮತ್ತು ಶೇ.೧೦-೧೫ರಷ್ಟು ಮಾತ್ರ ವಿದ್ಯಾರ್ಥಿಗಳು ತೆರುತ್ತಾರೆ. ಅದು ಸಾಧ್ಯವಾಗಿರುವುದು ಉತ್ತಮವಾದಂತಹ ವಿದ್ಯಾರ್ಥಿ ಕಾರ್ಯವಿಧಾನಗಳಿಂದ. ಇದು ಸಾರ್ವಜನಿಕ ಸಂಸ್ಥೆಗಳಲ್ಲಿ ನಿಜವಾದರೆ, ಖಾಸಗೀ ವಿಶ್ವವಿದ್ಯಾಲಯಗಳಲ್ಲಿ ಶೇ. ೬೦ ರಷ್ಟು ವೆಚ್ಚವನ್ನು ಸರ್ಕಾರಿ ಅನುದಾನ ಮತ್ತು ದೇಣಿಗೆಯ ಮೂಲಕ ಸಂಗ್ರಹಿಸಲಾಗುತ್ತದೆ. ಈ ಒಂದು ವಲಯದ ಉಪಸ್ಥಿತಿ ಭಾರತದಲ್ಲಿ ಇಲ್ಲವೇ ಇಲ್ಲ.

**ಸುಧಾ :** ಸಿಇಟಿ ಸಮಸ್ಯೆಗೆ ಪರಿಹಾರಗಳೇನಿವೆ ? ಸೀಟುಗಳ ಹಂಚಿಕೆಯ ಬಗೆಗೆ



## ಜೀಕೋಣ

**ಜೀಕೋಣ ಬಾ ಗೆಳತಿ ಜೋಕಾಲಿ**
**ತುಂಬೋಣ ಮನಕೆ ಹೊಸಗಾಳಿ ॥ಪ॥**

ನೀನಲ್ಲಿ ನಾನಿಲ್ಲಿ
ಜೋಕಾಲಿ ಮಧ್ಯದಲಿ
ತುಯ್ಯತೈತೆ ಗಾಳ್ಯಾಗ ಅತ್ತಿಂದಿತ್ತ
ನಮ್ಮತ್ತ ಹೇರಾಸೆ ಹೊತ್ತ ॥೧॥

ಎಲ್ಲೆಲ್ಲೂ ಹೂ ಚೆಲ್ಲಿ ತಾ ವಸಂತ
ಕೋಗಿಲೆಯ ಕೊರಳಾಗ ಕರೆದಾನ
ಬಿಂಕ ಬಿಗುಮಾನ ತೊರೆದು ಬಾರ
ಜೊತೆಯಾಗೆ ತೂಗುಮಣೆ ಏರ ! ॥೨॥

ಜೀಕೋಣ ನೆಲಕ ಚಿಮ್ಮೀ ಕಾಲ
ಮುಟ್ಟೋಣ ಚಿಕ್ಕಿ ಚಂದ್ರಮರ ಮುಗಿಲ
ಬಾನಾ ತುದಿಯ ಈ ತುದಿಯ ತನಕ
ಕಟ್ಟೋಣ ಒಲವಿನ ಕಾಮನಬಿಲ್ಲ ॥೩॥

ವಸುಂಧರಾ ದೇಸಾಯಿ
'ಅವನಿ' ೨ನೇ ಕ್ರಾಸ್, 'ಬಿ' ಬ್ಲಾಕ್, ಗಾಂಧಿನಗರ, ಶಿವಮೊಗ್ಗ

ಏನು ಹೇಳುವಿರಿ ? ಏಕೆಂದರೆ, ಆ ವಿಚಾರ ಹಲವಾರು ರೀತಿಯಲ್ಲಿ ಸ್ವಾಯತ್ತತೆಗೆ ಸಂಬಂಧಿಸಿದ್ದು ಕೂಡಾ...

**ತಿಲಕ್** : ಸ್ವಾಯತ್ತತೆಯೆಂದರೆ, ಸರ್ಕಾರ ಅಥವಾ ಸಂಸ್ಥೆಗಳು ಉನ್ನತ ಶಿಕ್ಷಣದ ವಿಚಾರಕ್ಕೆ ಸಂಬಂಧಿಸಿದ ವಿಚಾರಗಳಿಗನ್ವಯ ತಮ್ಮದೇ ಆದ ನೀತಿ-ನಿಯಮಾವಳಿಗಳನ್ನು ರೂಪಿಸುವ ಸ್ವಾತಂತ್ರ್ಯವೆಂದು ಅರ್ಥೈಸಬಹುದಾದರೆ, ಅದು ನಿಜವಾಗಿಯೂ ಮೌಲ್ಯಯುತವಾದ ತತ್ತ್ವ. ಆದರೆ, ಕೇಂದ್ರ ಸರ್ಕಾರ ಸ್ವಾಯತ್ತತೆ ಹೆಸರಿನಲ್ಲಿ ಕಾರ್ಯನೀತಿಯನ್ನು ರೂಪಿಸುವ ಜವಾಬ್ದಾರಿಯಿಂದ ನುಣುಚಿಕೊಂಡಿದೆ. ಹಲವು ರಾಜ್ಯಗಳಲ್ಲಿ, ದುಡ್ಡನ್ನು ಹುಟ್ಟುಹಾಕುವ ಮಾರ್ಗವಾಗಿ ಬಿಟ್ಟಿದೆ, ಸಿಇಟಿ. ಅದನ್ನು ಸಂಸ್ಥೆಗಳು ಬಿಟ್ಟುಕೊಡಲಿಚ್ಛಿಸುವುದಿಲ್ಲ. ಅನೇಕತೆ ಮತ್ತು ಸ್ವಾಯತ್ತತೆ ಹೆಸರಿನಲ್ಲಿ ಎಲ್ಲಾ ರೀತಿಯ ಸಂಸ್ಥೆಗಳು ಬೆಳೆಯಲು ಅವಕಾಶ ಮಾಡಿಕೊಟ್ಟಂತಾಗಿದೆ. ಸಂಸ್ಥೆಗಳು ತಾವೇ ಅನಿವಾಸಿ ಭಾರತೀಯ ವಿದ್ಯಾರ್ಥಿಗಳ ಪ್ರವೇಶ ಸಂಖ್ಯೆಯ ನಿಗದಿ ಮತ್ತು ತೆರುವ ಮೊತ್ತವನ್ನು ನಿರ್ಧರಿಸಬಯಸಿವೆ.

**ಸುಧಾ** : ಹಿಂದೆ ಯುಜಿಸಿಯೇ, ಒಂದು ವಿಶ್ವವಿದ್ಯಾಲಯ ಸ್ಥಾಪನೆ ಅಥವಾ ಪದವಿಯ ಮಾನ್ಯತೆಯನ್ನು ನೀಡಬೇಕಿತ್ತು. ಆದರೀಗ, ಯುಜಿಸಿ ಸಂಸ್ಥೆಗಳ ಮೇಲುಸುತ್ತುವಾರಿ ಮತ್ತು ನಿಯಂತ್ರಣವನ್ನು ಮಾಡುವುದು ಬಿಟ್ಟು, ಗುಣಮಟ್ಟವನ್ನು ನಿಯಂತ್ರಿಸುವ ಸಂಯೋಜನಾ ಅಂಗವಾಗಿದೆ. ಈ ಬದಲಾವಣೆಯ ಪರಿಣಾಮಗಳೇನಾಗಬಹುದು ?

**ತಿಲಕ್** : ಯುಜಿಸಿ, ಸಂಸ್ಥೆಗಳಿಗೆ ಮಾನ್ಯತೆ ನೀಡುವ ಮತ್ತು ನಿಯಂತ್ರಿಸುವ ಪಾತ್ರವನ್ನು ನಿರ್ವಹಿಸುವುದು ಅತೀಮುಖ್ಯ. ಆದರೀಗ ಹಾಗಾಗುತ್ತಿಲ್ಲ. ಆದ್ದರಿಂದ, ಖಾಸಗಿ ಸಂಸ್ಥೆಗಳು ಹೇರಳವಾಗಿಬಿಟ್ಟಿವೆ. ದುರದೃಷ್ಟವಶಾತ್, ಹೆಚ್ಚಾಗಿರುವ ಖಾಸಗಿ ಸಂಸ್ಥೆಗಳಲ್ಲಿ ಎಲ್ಲೋ ಕೆಲವನ್ನು ಬಿಟ್ಟರೆ, ಎಲ್ಲಾ ಕಡೆ ಮೂಲಭೂತ ಸೌಕರ್ಯ, ಶಿಕ್ಷಕರ ಕೊರತೆ ಇದ್ದು, ಬೋಧನೆ-ಕಲಿಕಾ ಪ್ರಕ್ರಿಯೆಯೇ ಸಮರ್ಪಕವಾಗಿ ನಡೆಯುತ್ತಿಲ್ಲ. ಇದು ವ್ಯಕ್ತಿಗತ ಬೆಳವಣಿಗೆಗೆ ಅವಕಾಶ ಮಾಡಿಕೊಡುತ್ತಿಲ್ಲ. ವಿಶ್ವವಿದ್ಯಾಲಯಗಳು ಕಲಿಕೆಯ 'ಅಂಗಡಿ'ಗಳಾಗುತ್ತಿವೆ. ಹೇಗಿದ್ದರೂ, ವಿದ್ಯಾರ್ಥಿಗಳು ಉತ್ತಮವಾಗಿಯೇ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುತ್ತಿದ್ದಾರೆ. ಆದರದು ನಿಜವಾದ ಶಿಕ್ಷಣವಲ್ಲ. ಖಾಸಗಿ ಎನ್ನಲಾದ ವಿಶ್ವವಿದ್ಯಾಲಯಗಳು ಕೆಲವು ವರ್ಗದ ವಿದ್ಯಾರ್ಥಿಗಳನ್ನು ಮಾತ್ರ ತಲುಪುತ್ತಿದ್ದು, ಅದು ಕೆಲವೇ ಅಧ್ಯಯನ ವಿಭಾಗಗಳಿಗೆ ಸೀಮಿತವಾಗಿದೆ. ಇಂತಹ ಪರಿಸ್ಥಿತಿ ನಮ್ಮ ದೇಶಕ್ಕೆ ಮಾತ್ರ ಸೀಮಿತವಾಗೇನೂ ಇಲ್ಲ. ಏಷ್ಯಾದ ಎರಡು ದೇಶಗಳನ್ನುಳಿದು – ಜಪಾನ್, ಕೊರಿಯಾ ಹಾಗೂ ಲ್ಯಾಟಿನ್ ಅಮೆರಿಕ ಮತ್ತು ಇನ್ನಿತರ ದೇಶಗಳನ್ನು ಹೊರತುಪಡಿಸಿದರೆ, ಖಾಸಗೀ ಉನ್ನತ ಶಿಕ್ಷಣ ವ್ಯವಸ್ಥೆ ಕುಸಿದಿದೆ.

**ಸುಧಾ** : ಜನರು 'ಒಂದು ಕಲಿಕಾ ವ್ಯವಸ್ಥೆ'ಯಾಗಿ ವಿಶ್ವವಿದ್ಯಾಲಯದ ಮೇಲಿನ ನಂಬಿಕೆ ಕಳೆದುಕೊಂಡು ಬಿಟ್ಟಿದ್ದಾರೆಯೇ ?

**ತಿಲಕ್** : ಮೊದಲು ನಾವು ವಿಶ್ವವಿದ್ಯಾಲಯವನ್ನು 'ಜ್ಞಾನ ನಿರ್ಮಾಣ ಮತ್ತು ಕಲಿಕೆಯ ರವಾನೆ'ಯ ಒಂದು ಸಂಪೂರ್ಣ ಮಾದರಿಯಾಗಿ ನೋಡುವುದನ್ನೇ ಪುನರಾಲೋಚಿಸಬೇಕಿದೆ. ನಾವೆಲ್ಲಾ ಹೆಚ್ಚಾಗಿ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯನ್ನು ಹಾದುಬಂದಿದ್ದೇವೆ.

ನಾವು ಇನ್ನೂ ಉತ್ತಮವಾದ ಸಾಮಾಜಿಕ ಮೌಲ್ಯಗಳನ್ನು ಸೃಷ್ಟಿಸುವ ವ್ಯವಸ್ಥೆಗಳ ಬಗ್ಗೆ ಯೋಚಿಸಬೇಕೇ ಹೊರತು, ವಿದ್ಯಾರ್ಥಿಗಳು ಇಚ್ಛಿಸುವ ಆರ್ಥಿಕ ಪ್ರಯೋಜನವನ್ನಷ್ಟೆ ನೀಡುವ ಶಿಕ್ಷಣ ವ್ಯವಸ್ಥೆಯ ಬಗೆಗಲ್ಲ.



**ಸುಧಾ** : ಕೊನೆಯದಾಗಿ ಜಾಗತೀಕರಣದ ಬಗ್ಗೆ ಕರ್ನಾಟಕದ ದಲಿತ ಸಮುದಾಯದ ಕೆಲವು ವಲಯಗಳು ನೀಡುತ್ತಿರುವ ಪ್ರತಿಕ್ರಿಯೆಯ ಬಗೆಗೆ. ಇತ್ತೀಚಿನ ದಿನಗಳಲ್ಲಿ, ಜಾಗತೀಕರಣವು ಎಷ್ಟೇ ಸಮಸ್ಯೆಗಳನ್ನು ಹುಟ್ಟುಹಾಕಿದರೂ ಅದು ಸಂಪ್ರದಾಯದ ಕ್ರೂರ ಹಿಡಿತದಿಂದ ತಪ್ಪಿಸಿಕೊಳ್ಳಲು ಅನಿವಾರ್ಯವೆಂಬ ವಾದವು ಈ ವಲಯದಲ್ಲಿದೆ. ಆದರೆ ಜಾಗತೀಕರಣವನ್ನು ಆಧುನಿಕತೆಗೆ ಸಂವಾದಿಯಾದ ಒಂದು ಪ್ರಕ್ರಿಯೆಯೆಂದು ಮತ್ತು ಆಧುನೀಕರಣದಿಂದ ಪಡೆದುಕೊಂಡ ಲಾಭದಂತೆ, ಜಾಗತೀಕರಣದಿಂದಲೂ ಪಡೆದುಕೊಳ್ಳುವುದು ಅನಿವಾರ್ಯವೆಂಬ ತರ್ಕ ಇವತ್ತು ಕೆಲವು ದಲಿತ ಸಮುದಾಯದ ವಲಯಗಳಲ್ಲಿನ ವಾದವಾಗಿದೆ. ಹೀಗಾಗಿ ಜಾಗತೀಕರಣದ ಪರಿಣಾಮಗಳು ದಲಿತರಿಗೆ ಶಿಕ್ಷಣ ಕ್ಷೇತ್ರದಲ್ಲಿ ಮತ್ತು ದಲಿತ ಸಮುದಾಯಗಳಲ್ಲಿ ಹೇಗಾಗಬಹುದು ಎಂದು ಸ್ಪಷ್ಟಪಡಿಸಲು ಸಾಧ್ಯವೇ ?

**ತಿಲಕ್** : ಮೇಲು ಜಾತಿಗಳ ಪ್ರಗತಿಗೆ ಮತ್ತು ಸಾಮಾಜಿಕ ಪ್ರಾಬಲ್ಯಕ್ಕೂ ಭಾಷೆಯೇ ಕಾರಣ ಎಂದು ಬಹಳಷ್ಟು ಶೂದ್ರಾತಿಶೂದ್ರ ಜಾತಿಗಳು ನಂಬಿವೆ. ಹೀಗಾಗಿ ಕೆಳಜಾತಿಗಳ ಸಾಮಾಜಿಕ ಬಿಡುಗಡೆಗೆ ಇಂಗ್ಲಿಷ್ ಭಾಷೆ ಅನಿವಾರ್ಯ ಎಂಬುದು ಅವರ ತರ್ಕ. ಇಂಗ್ಲಿಷ್‌ಯೇತರ (ಇನ್ನಿತರ ಪ್ರಾಂತೀಯ ಭಾಷೆಗಳು) ಭಾಷೆಗಳ ಮಾಧ್ಯಮದ ವಿರುದ್ಧವಾಗಿ ವಾದಿಸುತ್ತ, ಹಿಂದುಳಿದ ಜಾತಿಗಳು ತಮ್ಮ ತಮ್ಮ ಭಾಷೆಗಳಿಗೆ ಅಂಟಿಕೊಂಡರೆ ಅದರ ಪರಿಣಾಮ ಏನು ಎಂದು ಗೊತ್ತಿದೆಯೆಂದು, ಈ ರೀತಿಯ ಭಾಷಾ ನಿಲುವು ತಳೆದಿದ್ದಾರೆ. ಈ ವಿಷಯ ನನಗೆ ಅಪರಿಚಿತವಾದದ್ದೇನೂ ಅಲ್ಲ, ಆದರೆ, ನನಗೆ ಕರ್ನಾಟಕದ ಸನ್ನಿವೇಶದಲ್ಲಿ ಎದ್ದಿರುವ ಪ್ರಸ್ತುತ ವಾದ ಹೊಸತು. ನನಗೆ ಸ್ಪಷ್ಟವಾಗದೆ ಇರುವುದು ಏನೆಂದರೆ ಪ್ರಸ್ತುತ ಜಾಗತೀಕರಣದ ಸನ್ನಿವೇಶದಲ್ಲಿ, ದಲಿತರ ನಿಲುವು, ಆಧುನೀಕರಣ ಮತ್ತು ಜಾತೀಕರಣದ ವ್ಯತ್ಯಾಸಗಳನ್ನು ನಾನು ಅರ್ಥ ಮಾಡಿಕೊಳ್ಳಬಲ್ಲೆ. ಆದರೆ, ಸಮಕಾಲೀನ ಸಾಮಾಜಿಕ ಪರಿಸ್ಥಿತಿಗಳ ಹಿನ್ನೆಲೆಯಲ್ಲಿ ಜಾಗತೀಕರಣ ಏಕರೂಪಿ ಪ್ರಯೋಜನಗಳನ್ನು ನೀಡುವುದು ಎಂಬ ವಾದ ನನಗೆ ಸ್ಪಷ್ಟವಾಗುತ್ತಿಲ್ಲ. ಈಗ ನಾನು ವಿವರಿಸಿದ ಕೆಳ ಜಾತಿಗಳ ಭಾಷಾ ತರ್ಕದ ಬಗ್ಗೆ ಗಂಭಿರವಾಗಿ ಯೋಚಿಸಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ್ದೇನೆ. ಆದರೆ, ಸ್ಥೂಲವಾಗಿ ಹೇಳುವುದಾದರೆ – ಆಧುನೀಕರಣದ ಪರಿಣಾಮವಾಗಿರುವ, ಈ ಭಾಷಾ ತರ್ಕ ಜಾಗತೀಕರಣದ ಸಂದರ್ಭದಲ್ಲಿ ಅನ್ವಯಿಸುವುದೆಂದು ಹೇಳಲಾಗುವುದಿಲ್ಲ. ಈ ಸಂಗತಿಗಳು ನನಗೆ ಹೊಸದು. ನಾನು ಕರ್ನಾಟಕದ ಸನ್ನಿವೇಶದಲ್ಲಿರುವ ಈ ವಾದದ ಬಗೆಗೆ ಇನ್ನೂ ಆಳವಾದ ಚಿಂತನೆ ನಡೆಸಬೇಕಾಗಿದೆ.

(ಅನುವಾದ : ಎಸ್. ಧರ್ಮೇಂದ್ರ)


**ಸುಧಾ ಸೀತಾರಾಮನ್**
೬೩೪, ೩೫ನೆಯ ಕ್ರಾಸ್, ೨೨ನೆಯ ಮುಖ್ಯರಸ್ತೆ,
ಜಯನಗರ ೪ನೆಯ 'ಟಿ' ಬ್ಲಾಕ್, ಬೆಂಗಳೂರು

# ವೈದ್ಯಕೀಯ ಸೇವಾಕ್ಷೇತ್ರ

## ಅಚ್ಚರಿ ಉಂಟುಮಾಡುವ ವಾಸ್ತವಾಂಶಗಳು




ಎಲ್ಲವೂ ಬದಲಾಗುತ್ತಿರುವ ಇಂದಿನ ಕಾಲದಲ್ಲಿ ವೈದ್ಯಕೀಯ ಸೇವೆ (?)ಯೂ ಬದಲಾಗುತ್ತಿದೆ. ಇದರ ಕೆಲವು ತುಣುಕುಗಳು ಇಲ್ಲಿವೆ.

ಬಹು ಹಿಂದಿನಿಂದಲೂ ವೈದ್ಯರನ್ನು ಕಂಡು ಮೂಗು ಮುರಿಯುವವರು ಇದ್ದಾರೆ. ಸಂಸ್ಕೃತದ ಸುಭಾಷಿತವೊಂದು ಈ ಸಣ್ಣ ಕತೆಯನ್ನು ಹೇಳುತ್ತದೆ :

ಒಂದೂರಿನಲ್ಲಿ ಅಣ್ಣ, ತಮ್ಮ ಇಬ್ಬರೂ ಭಿಷಕ್ ರತ್ನರು. ಅಣ್ಣ ದೂರದ ಊರಿಗೆ ಹೋಗಿದ್ದಾನೆ. ರೋಗಿಯೊಬ್ಬನನ್ನು ಪರೀಕ್ಷಿಸಿ ತಮ್ಮ ನೆರೆಯ ಗ್ರಾಮದಿಂದ ಮರಳುತ್ತಿದ್ದಾನೆ. ದಾರಿಯಲ್ಲಿ ಊರ ಜನ ಹೆಣ ಹೊತ್ತು ಸ್ಮಶಾನದೆಡೆಗೆ ಸಾಗುವುದನ್ನು ಕಾಣುತ್ತಾನೆ. ಆಶ್ಚರ್ಯಗೊಂಡು ತನಗೆ ತಾನೇ ಹೇಳಿಕೊಳ್ಳುತ್ತಾನೆ – ಎಲಾ, ನನ್ನಣ್ಣನೂ ಇರಲಿಲ್ಲ, ನಾನೂ ಇರಲಿಲ್ಲ, ಅದು ಹೇಗೆ ಈ ವ್ಯಕ್ತಿ ಸತ್ತುಹೋದ ?

* * *

ವೈದ್ಯ, ವಣಿಕ ಇಬ್ಬರ ವೃತ್ತಿನಾಮವೂ ವಕಾರದಿಂದಲೇ ಪ್ರಾರಂಭವಾಗುತ್ತದೆ. ವಣಿಕನಿಗೆ ದೇಶವೆಲ್ಲ ಸಮೃದ್ಧವಾಗಿರಬೇಕೆಂಬ ಹಂಬಲ ಇರುತ್ತದಂತೆ. ಇದರಿಂದ ಆತನ ವ್ಯಾಪಾರ ಕುದುರಿ ಅಧಿಕ ಲಾಭ ಪಡೆಯುತ್ತಾನಂತೆ. ವೈದ್ಯನಾದರೋ, ಸಮಾಜಕ್ಕೆ ರೋಗ ರುಜಿನಗಳು ಮುತ್ತಿಡಬೇಕೆಂದು ಬಯಸುತ್ತಾನೆ. ಅದರಿಂದ ಅವನ ವ್ಯಾಪಾರ ಕುದುರುತ್ತದೆ !

* * *

ನಾನು ಸಣ್ಣವನಿದ್ದಾಗ ಜಿಲ್ಲಾಡಳಿತ ಕೇಂದ್ರವೊಂದರಲ್ಲಿ ವಾಸಿಸುತ್ತಿದ್ದೆವು. ಈಗಿನಂತೆ ಆಗ ಬೀದಿಗೊಂದು ''ನರ್ಸಿಂಗ್ ಹೋಮು'' ಇರುತ್ತಿರಲಿಲ್ಲ. ನಮ್ಮೂರಿಗೆಲ್ಲಾ ಮೂವರೇ ವೈದ್ಯರು. ಮೂವರಿಗೂ ''ರೋರಿಂಗ್'' ಪ್ರಾಕ್ಟೀಸು. ಟೈಫಾಯಿಡ್ ಮುಂತಾದ ಜ್ವರ ಬಂದ ರೋಗಿಗಳು ಮನೆಯಲ್ಲೇ ಮಲಗಿ ತಾಯಿಂದಿರಿಂದ ಆರೈಕೆ ಪಡೆಯಬೇಕಾಗುತ್ತಿತ್ತು. ನಮ್ಮ ಮನೆಯ ವೈದ್ಯರು ದಿನಂಪ್ರತಿ ಪ್ರಾತಃಕಾಲ ತಮ್ಮ ಸೈಕಲ್ ತುಳಿಯುತ್ತಾ ''ರೌಂಡ್ಸ್'' ಬರುತ್ತಿದ್ದರು. ಅವರು ಬರುತ್ತಿದ್ದದ್ದನ್ನೇ ಕಾಯುತ್ತಿದ್ದ ಮನೆ ಮಂದಿ ಭಕ್ತಿಯಿಂದ ಅವರ ಚೀಲ ಹೊತ್ತು ರೋಗಿಯ ಬಳಿ ವೈದ್ಯರನ್ನು ಒಯ್ಯುತ್ತಿದ್ದರು. ವೈದ್ಯರು ಇಂಜಕ್ಷನ್ ಕೊಡಬೇಕಾದರೆ, ಮನೆಯಲ್ಲೇ ಸೂಜಿ ಕುದಿಸಿ ಕೊಡುತ್ತಿದ್ದರು. ವೈದ್ಯರು ತಮ್ಮ ''ರೌಂಡ್ಸ್'' ಮುಗಿಸಿ, ನೂಕುನುಗ್ಗಲಿರುತ್ತಿದ್ದ ತಮ್ಮ ದವಾಖಾನೆಗೆ ತೆರಳುತ್ತಿದ್ದರು. ತೊಳೆದ ಸೀಸೆ ತೆಗೆದುಕೊಂಡು ಹೋಗಿ ದವಾಖಾನೆಯಿಂದ ರೋಗಿಗೆ ಬೇಕಾದ ಕೆಂಪು ಔಷಧ ತುಂಬಿಸಿಕೊಂಡು ಬರುತ್ತಿದ್ದೆವು. ಇಂದು ಪರಿಸ್ಥಿತಿ ಬದಲಾಗಿದೆ. ''ರೋಗಿ''ಯನ್ನು ನರ್ಸಿಂಗ್ ಹೋಮಿಗೆ ''ಅಡ್ಮಿಟ್'' ಮಾಡುತ್ತೇವೆ. ನಮ್ಮ ಧನಬಲಕ್ಕೆ ತಕ್ಕ ಹಾಗೆ ಸಾಮಾನ್ಯ ''ವಾರ್ಡ್'' ಅಥವಾ ''ಡಿಲಕ್ಸ್'' ವಾರ್ಡ್ ಪಡೆಯುತ್ತೇವೆ. ಧನಬಲ ಹೆಚ್ಚಿದ್ದರೆ ಅಲ್ಲಿ ಕೆಲಸ ಮಾಡುವ ಆಯಾಗಳನ್ನು ನರ್ಸಮ್ಮಗಳನ್ನು ನಮ್ಮ ಖಯಾಲಿಯಂತೆ ಕುಣಿಸಬಹುದು. ಇನ್ನೂ ಹೆಚ್ಚು ಧನಬಲವಿದ್ದರೆ ಡಾಕ್ಟರನ್ನೂ ಕುಣಿಸಬಹುದು.

* * *

ಒಮ್ಮೆ ಬೆಂಗಳೂರಿನ ಪಂಚತಾರಾ ''ನರ್ಸಿಂಗ್ ಹೋಮಿ''ಗೆ ಭೇಟಿಕೊಟ್ಟಿದ್ದೆ. ಅಂದು ರಾತ್ರಿ ಹನ್ನೊಂದು ಗಂಟೆಗೆ ಹೃದಯಾಘಾತವಾದ ರೋಗಿಯೊಬ್ಬರನ್ನು ತುರ್ತು ಚಿಕಿತ್ಸಾ ಕೊಠಡಿಗೆ (ಐಸಿಯು) ಅಡ್ಮಿಟ್ ಮಾಡಿದರು. ಪರೀಕ್ಷಿಸಿದ ಡಾಕ್ಟರು ೪೦,೦೦೦ ರೂಪಾಯಿಗಳ ಇಂಜೆಕ್ಷನ್ ಕೂಡಲೇ ಕೊಡಬೇಕೆಂದರು. ರೋಗಿಯ ಕಡೆಯವರು ಜೇಬು ಮುಟ್ಟಿಕೊಳ್ಳುತ್ತಾ, ಹಿಂದೇಟು ಹಾಕುತ್ತಲೇ ಒಪ್ಪಿಕೊಂಡರು. ಬೆಳಗಿನ ಜಾವ ಮೂರು ಗಂಟೆಗೆ ರೋಗಿ ಕೊನೆಯುಸಿರೆಳೆದ. ಬೆಳಗ್ಗೆ ನರ್ಸಿಂಗ್ ಹೋಮಿನವರು ರೋಗಿಯ ಮನೆಯವರಿಗೆ ಎರಡು ದಿನಗಳ ಬಾಡಿಗೆ ತೆರಲು ಆಜ್ಞಾಪಿಸಿದರು. ಅಲ್ಲಿನ ''ಚೆಕ್ ಔಟ್'' ಟೈಮ್ ಮಧ್ಯರಾತ್ರಿ ಹನ್ನೆರಡು ಗಂಟೆಗಂತೆ. ಅದಕ್ಕೂ ಮೊದಲೇ ಬಂದ ರೋಗಿ ಹನ್ನೆರಡಾಗುತ್ತಲೇ ಒಂದು ದಿನ ಕಳೆದ ಹಾಗಾಯಿತು. ಅಲ್ಲಿಂದ ಬೆಳಗ್ಗೆ ಮೂರರವರೆಗೆ ಎರಡನೆಯ ದಿನ. ಹೆಣ ಬೇಕಾದರೆ ಹಣ ತೆರಲೇಬೇಕು ! ಇದರ ನೀತಿ – ನಿಮಗೆ ಹೃದಯಾಘಾತ ಆಗಲೇಬೇಕೆಂದು ಬಯಸಿದ್ದರೆ, ರಾತ್ರಿ ಹನ್ನೆರಡರ ನಂತರ ಆಗುವಂತೆ ನೋಡಿಕೊಳ್ಳಿ.

* * *

''ಒಂದು ಸೀರೆ ಕೊಳ್ಳಿರಿ, ಮತ್ತೊಂದು ಪುಕ್ಕಟೆ ತೆಗೆದುಕೊಂಡು ಹೋಗಿ'' ನಮಗೆಲ್ಲಾ ಅತಿ ಪರಿಚಿತ ಅರಚಾಟ. ಇದೇ ರೀತಿ ವೈದ್ಯರು, ''ನಿಮ್ಮ ಅಪೆಂಡಿಕ್ಸ್ ಕುಯ್ಯಿಸಿಕೊಳ್ಳಿ, ಪುಕ್ಕಟೆ ನಿಮ್ಮ ಟಾನ್ಸಿಲ್ ಕುಯ್ದುಕೊಡುತ್ತೇವೆ'' ಎನ್ನುವ ಹಾಗಿಲ್ಲವಲ್ಲಾ! ಆದರೆ ಹೀಗೆ ಹೇಳುವ ಹೊಸ ಉಪಾಯ ಇಂದಿನ ವೈದ್ಯರಿಗೆ ತಿಳಿದಿದೆ. ನೀವು ಯಾವ ವಯಸ್ಸಿನವರೇ ಆಗಿರಿ, ವಜ್ರ ದೇಹ ಹೊಂದಿರಿ, ವೈದ್ಯರಿಂದ ವರ್ಷಕ್ಕೊಮ್ಮೆ ಸಮಗ್ರ ತಪಾಸಣೆ ಮಾಡಿಸಿಕೊಳ್ಳುವುದು ಅತ್ಯಂತ ಮುಖ್ಯ ಎಂದು ನಿಮ್ಮನ್ನು ಅವರು ನಂಬಿಸುತ್ತಾರೆ. ನೀವು ಮುಂಗಡ ಹಣ ಕಟ್ಟುವಿರಾದರೆ, ರಕ್ತ ಪರೀಕ್ಷೆ, ಮೂತ್ರ ಪರೀಕ್ಷೆ, ನಿಮ್ಮ ಎದೆ ಸರಿಯಾಗಿ ಬಡಿದುಕೊಳ್ಳುತ್ತಿದೆಯೇ ಎಂಬ ಪರೀಕ್ಷೆ... ಇತ್ಯಾದಿ ಪರೀಕ್ಷೆಗಳನ್ನೆಲ್ಲಾ ಬರಿಯ ಐದು ಸಾವಿರ ರೂಪಾಯಿಗಳಲ್ಲಿ ಮಾಡಿಸಿಕೊಳ್ಳಬಹುದು. ಈ ಪರೀಕ್ಷೆಗಳಿಗೆಲ್ಲಾ ಬೇರೆ ಬೇರೆಯಾಗಿ ಬಿಲ್ ಮಾಡಿದರೆ ಆರು ಸಾವಿರಕ್ಕೂ ಹೆಚ್ಚಾದೀತು. ಸಾವಿರ ರೂಪಾಯಿಗಳಿಗೂ ಮಿಗಿಲಾದ ಉಳಿತಾಯ !

* * *

ಬೆಂಗಳೂರಿನ ಚಿಕ್ಕಪೇಟೆಯಲ್ಲಿ ನಡೆದು ಹೋಗುತ್ತಿದ್ದರೆ ''ಬನ್ನಿ, ಬನ್ನಿ ನಮ್ಮ ಅಂಗಡಿಯಲ್ಲಿ ನಿಮಗೆ ಅತಿ ಅಗ್ಗದಲ್ಲಿ ಸರಕು ದೊರೆಯುತ್ತದೆ'' ಎಂದು ಅರಚಿಕೊಳ್ಳುವ

೩೯ನೇ ಪುಟಕ್ಕೆ

ಎಸ್. ಬಿ. ಜೋಗುರ

# ಪರಿಸರ ಕಾಳಜಿ ದಿನಚರಿಯಾಗಬೇಕು

ನಿಸರ್ಗ ಮುನಿಸಿಕೊಂಡರೆ ಇಡೀ ಜೀವಸಂಕುಲವೇ ಹೈರಾಣಾಗ ಬೇಕಾಗುತ್ತದೆ. ಮಹಾನ್ ಸಾಧನೆ ಮಾಡಿರುವೆನೆಂದು ಮೆರೆಯುವ ಮಾನವನ ಮಿದುಳ ಮಿತಿಗೂ ನಿಸರ್ಗ ಸಿಲುಕುವುದಿಲ್ಲ. ನಿಸರ್ಗದ ಬಗ್ಗೆ ಮನುಷ್ಯನ ಲೆಕ್ಕಾಚಾರಗಳೆಲ್ಲಾ ಕೇವಲ ಹಾಗಾಗಬಹುದು, ಹೀಗಾಗಬಹುದು ಎಂದಿದೆಯೇ ಹೊರತು ಹೀಗಾಗುತ್ತದೆ ಎಂದು ಹೇಳುವ ಸಾಧನಕಾರ ಇನ್ನೂ ಹುಟ್ಟಿಬರಲೇ ಇಲ್ಲ. ನೆಲಮುಗಿಲ ಹೊಟ್ಟೆಗ್ಗಿಳಿದು ಬಂದವರಂತೆ ಹವಾಮಾನದ ಮುನ್ನೆಚ್ಚರಿಕೆಯನ್ನು ನೀಡುವ ನಿಸ್ಸೀಮರಿಗೂ ನಿಸರ್ಗದಾಟದ ಗತ್ತುಗ್ಗಾರಿಕೆ ಹತ್ತುತ್ತಿಲ್ಲ. ಇನ್ನು ಕೈನೋಡಿ, ಮುಖ ನೋಡಿ, ಇನ್ನೂ ಏನೇನೋ ನೋಡಿ ಭವಿಷ್ಯ ಹೇಳುವವರಿಗಂತೂ ಇದು ನಿಲುಕದ ಮಾತು. ಆದಾಗ್ಯೂ ನಾವು ಹಾಗೆಂದು ಮೊದಲೇ ಹೇಳಿಯಾಗಿತ್ತು ಎನ್ನುವ ಭಂಡರಿಗೇನೂ ಕಡಿಮೆಯಿಲ್ಲ.

ಹಿಂದೆ ಗುಜರಾತದಲ್ಲಿ ಭೂಕಂಪ ಸಂಭವಿಸಿದಾಗಲೂ ಕೆಲ ಜ್ಯೋತಿಷಿಗಳು ನಾವು ಮುಂಚೆಯೇ ಹೇಳಿದ್ದೆವು ಎಂದರು. ಹಾಗೆಯೇ ಭೂಗರ್ಭಶಾಸ್ತ್ರಜ್ಞರು ತಾವು ಭೂಕಂಪದ ಪಾಯಿಂಟ್‌ಗಳನ್ನು ಗುರುತಿಸಿಯಾಗಿತ್ತು ಎಂದು ಹೇಳಿದ್ದೂ ಇದೆ. ಆದರೆ ಇವರು ಹೇಳುವ ರೀತಿ ಹೇಗಿರುತ್ತದೆ ಎಂದರೆ ನಮ್ಮ ಗ್ರಾಮೀಣ ಭಾಗದ ಜನತೆ ಬೀಸುವ ಗಾಳಿ, ಮೋಡ ದಟ್ಟನೆಯ ರೀತಿಯನ್ನು ಗಮನಿಸಿ ಎಲ್ಲೆಲ್ಲಿ ಮಳೆಯಾಗಬಹುದೆಂದು ಹೇಳುವ ರೀತಿಯಲ್ಲಿದೆ. ಅಮೂರ್ತವಾದ ದೇವರನ್ನು ನಂಬಲಾಗದ ನಸ್ತಿಕನಿಗೆ ನಿಸರ್ಗವೇ ಒಂದು ಅಗಾಧವಾದ ಶಕ್ತಿ ಎಂಬುದರಲ್ಲಿ ದೃಢ ನಿಲುವು ಮೂಡತೊಡಗಿದೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೇಳುವುದಾದರೆ ಅವೈಜ್ಞಾನಿಕವಾದ, ಅಗೋಚರವಾದ ದೇವರನ್ನು ಮೀರಿದ ಶಕ್ತಿ ನಿಸರ್ಗದಲ್ಲಿದೆ. ಹಾಗಾದರೆ ಅದನ್ನೇ ದೇವರೆಂದು ಕರೆಯಬಾರದೇಕೆ ಎಂದು ವಾದ ಮಾಡುವವರೊಂದಿಗೆ ಸಂವಾದಿಸಲು ನನ್ನ ಮನಸು ಸುತಾರಾಂ ಒಪ್ಪುವುದಿಲ್ಲ.

ಈಚೆಗೆ ಸಮುದ್ರ ತನ್ನ ಸಹಜ ಗುಣದಲ್ಲಿ ಒಂಚೂರು ವ್ಯತ್ಯಾಸ ಮಾಡಿ ಕೊಂಡಿದ್ದರಿಂದಾಗಿ ಲಕ್ಷಾನುಗಟ್ಟಲೆ ಸಾವುನೋವುಗಳು ಸಂಭವಿಸಿದವು. ಕೆಲವೇ ಕೆಲವು ಕ್ಷಣಗಳಲ್ಲಿ ಈ ರೀತಿಯ ಅಲ್ಲೋಲ ಕಲ್ಲೋಲಗಳಾದವು. ಇಡೀ ವಿಶ್ವ ತನ್ನ ಸಾಧನೆಯ ಭರಾಟೆಯಲ್ಲಿ ಮೈಮರೆತಂತಿದ್ದ ಗಳಿಗೆಯಲ್ಲಿ, ನಿಸರ್ಗ ಚೂರು ಮಾತ್ರ ತನ್ನ ತಲೆ ಅಲ್ಲಾಡಿಸಿತು. ಅದರ ಪರಿಣಾಮ ಮಾನವನ ಚರಿತ್ರೆಯಲ್ಲಿ ಒಂದು ಕಪ್ಪುಚುಕ್ಕೆಯಾಗಿ ಉಳಿಯಿತು. ನಿಸರ್ಗ ಮುನಿದುಕೊಂಡರೆ ಗುತ್ತಿಗೆ ಹಿಡಿದಂತೆ ಮನುಷ್ಯನ ಕತ್ತು ಹಿಚುಕುತ್ತದೆ. ಆದರೆ ಮನುಷ್ಯ ಬುದ್ಧಿಜೀವಿ ಎಂಬ ಸೋಗಿನಲ್ಲಿ ತನ್ನ ಹಾಗೆಯೇ ಇರುವ ಇನ್ನೊಂದು ಜೀವವನ್ನು ಜಾತಿ, ಧರ್ಮ, ಜನಾಂಗ, ಭಾಷೆ ಮುಂತಾದವುಗಳ ಮೇಲಿಂದ ತಾರತಮ್ಯ ಮಾಡುತ್ತಾ, ತನ್ನ ನೀಚತನದ ಪರಮಾವಧಿಯನ್ನು ಮೆರೆಯುವಾಗಲೇ ನಿಸರ್ಗ ಒಂದು ಸಣ್ಣ ಪಾಠ ಕಲಿಸುತ್ತದೆ. ಅದೆಂದೂ ಜೀವಗಳನ್ನು ತನ್ನ ತಕ್ಕೆಗೆ ತೆಗೆದುಕೊಳ್ಳುವಾಗ ಜಾತಿ, ಧರ್ಮ, ಜನಾಂಗವನ್ನು ನೋಡಿ, ಕೇಳಿ ತೆಗೆದುಕೊಳ್ಳುವುದಿಲ್ಲ. ಇಂತಹ ಗಳಿಗೆಗಳನ್ನು ಕಂಡಾದರೂ ಮನುಷ್ಯ ಸಂಕುಚಿತತೆಯ ಗೋಡೆಗಳನ್ನು ಮುರಿಯಬಾರದೆ? ಅದು ಸಾಧ್ಯವೇ ಇಲ್ಲ. ಇವನ ನಾಗರಿಕತೆಯ ತೀವ್ರತೆಯಿಂದಾಗಿ, ಐಹಿಕ ಅಭ್ಯುದಯದ ಹಪಾಹಪಿತನದ ಹಿನ್ನೆಲೆಯಲ್ಲಿಯೇ ನಿಸರ್ಗ ಹೀಗೆ ಆಗಿಂದಾಗ್ಗೆ ಮುನಿಸಿಕೊಳ್ಳುತ್ತದೆ.

ನಿಸರ್ಗ ಯಾವ ಗಳಿಗೆಯಲ್ಲಿ ಹೇಗೆ ಎಂದು ಹೇಳುವದು ತುಂಬಾ ಕಷ್ಟ. ಹೆಚ್ಚೆಂದರೆ ಊಹಿಸಬಹುದು ಅಷ್ಟೆ! ಹಿಂದೆ ನಿಮಗೂ ಗೊತ್ತು ಒಂದು ನಿರ್ದಿಷ್ಟ ದಿನ, ವರ್ಷವನ್ನು ಸೂಚಿಸಿ 'ಪ್ರಳಯ'ದ ಬಗ್ಗೆ ಗ್ರಂಥ ಪ್ರಕಟಿಸಿ ಪ್ರಳಯಾಂತಕ ರಾದವರು ಹಾಗಾಗದೇ ಇದ್ದಾಗ ನಿರುತ್ತರಾದದ್ದೂ ಇದೆ. ವಿಶ್ವದ ಯಾವುದೇ ರಾಷ್ಟ್ರದಲ್ಲಿಯೂ ಇಂಥಾ ದಿನ, ಇಂಥಾ ಗಳಿಗೆಯಲ್ಲಿ ಇಂಥಾ ಕಡೆಯಲ್ಲಿ ಭೂಕಂಪ ಸಂಭವಿಸಲಿದೆ, ಎಂದು ಖಚಿತವಾಗಿ ಹೇಳುವಂತಹ ವಿಜ್ಞಾನವಾಗಲೀ, ವಿಜ್ಞಾನಿಗಳಾಗಲೀ ಇನ್ನೂ ಬರಲಿಲ್ಲ. ಅತೀ ಹೆಚ್ಚೆಂದರೆ ಇಂಥಲ್ಲಿ ಹೆಚ್ಚು ಭೂಕಂಪಗಳಾಗುತ್ತವೆ ಎಂದು ಹೇಳಬಹುದೇ ಹೊರತು ಯಾವಾಗ ಎಂದು ಹೇಳಲಾಗದು. ಆ ಕಾರಣದಿಂದಾಗಿಯೇ ನಿಸರ್ಗವೆಂಬುದು ಒಂದು ಅದ್ಭುತವಾದ ಶಕ್ತಿಯನ್ನೊಳಗೊಂಡಿದೆ ಎಂಬುದು ಇಂಥಾ ಆಘಾತಗಳಾದಾಗಲಾದರೂ ಸಾಬೀತಾಗುವುದು.

೬೨ನೇ ಪುಟಕ್ಕೆ

# ಮಾತೃ ಪ್ರಧಾನವೋ ಅಥವಾ ಸ್ತ್ರೀ-ಪುರುಷ ಸಮಾನತೆಯೋ?

**ಸ್ತ್ರೀ-ಪುರುಷ ಸಮಾನತೆಯ ಕುರಿತು ಡಾ|| ಶೈಲಜಾ ಹಿರೇಮಠರವರು ವ್ಯಕ್ತಪಡಿಸಿರುವ ಅಭಿಪ್ರಾಯಗಳು ಸರಿಯಾದ ಪರಿಕಲ್ಪನೆಯಿಂದ ಕೂಡಿದ್ದಾಗಿವೆ. ಆದರೆ ಇವುಗಳನ್ನು ಏಂಗೆಲ್ಸರು ಆಗಾಗಲೇ ಸ್ಪಷ್ಟವಾಗಿ ಧ್ವನಿಸಿದ್ದಾರೆ ಮಾತ್ರವಲ್ಲ, ಸ್ತ್ರೀ-ಪುರುಷ ಸಮಾನತೆಯನ್ನು ಸಾಧಿಸುವುದು ಹೇಗೆ ಎಂಬುದರ ಬಗ್ಗೆಯೂ ಗಮನವನ್ನು ಸೆಳೆದಿರುತ್ತಾರೆ. ಈ ಕುರಿತು ಕಾರ್ಯೋನ್ಮುಖರಾಗುವುದು ಮಾತ್ರ ಈಗ ಬಾಕಿ ಉಳಿದಿರುವುದು.**

ಎಮ್. ಸಿ. ಡೋಂಗ್ರೆ

**ಒ**ಮ್ಮೊಮ್ಮೆ ಶಬ್ದಗಳು ಅನೇಕ ಗೊಂದಲಗಳಿಗೆ, ಅಪಾರ್ಥಗಳಿಗೆ ಎಡೆಮಾಡಿಕೊಡುತ್ತವೆ. ಮೂಲದಲ್ಲಿ ಅವುಗಳನ್ನು ಆಯಾ ಚಾರಿತ್ರಿಕ ಹಿನ್ನೆಲೆಯಲ್ಲಿ ಒಂದು ಉದ್ದೇಶಿತ ಅರ್ಥದಲ್ಲಿ ಬಳಸಲ್ಪಟ್ಟಿದ್ದರೆ, ಮತ್ತೊಂದು ಚಾರಿತ್ರಿಕ ಸಂದರ್ಭದಲ್ಲಿ ಅವುಗಳನ್ನು ತಪ್ಪಾಗಿ ಅರ್ಥೈಸುವ ಅಥವಾ ಬಳಸಲ್ಪಡುವ ಸಾಧ್ಯತೆಗಳನ್ನೂ ಕಾಣುತ್ತೇವೆ. ವೇದಗಳ ಅನೇಕ ಶಬ್ದಗಳಿಗೆ ಈ ದುರ್ಗತಿ ಬಂದೊದಗಿರುವುದನ್ನು ನೋಡುತ್ತಿದ್ದೇವೆ. ಮೂಲಗಳನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ನೋಡದಿದ್ದರೂ ಸಹ ಈ ರೀತಿಯ ತಪ್ಪುಗಳಾಗುವ ಸಾಧ್ಯತೆಗಳಿವೆ. ಅಥವಾ ಒಮ್ಮೊಮ್ಮೆ ಓದುಗನೊಬ್ಬನ **'ಅವಸರದ-ಓದು'** ಸಹ ಶಬ್ದ-ಅರ್ಥಗಳ ಮಧ್ಯೆ ಗೊಂದಲಕ್ಕೆ ಎಡೆಮಾಡಿಕೊಡುತ್ತದೆ.

ಪ್ರಸ್ತುತದಲ್ಲಿ ಡಾ|| ಶೈಲಜ ಹಿರೇಮಠ ಅವರ 'ಮಾತೃಪ್ರಧಾನ ಪರಿಕಲ್ಪನೆ' (ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪) ಎಂಬ ಕಿರುಹೊತ್ತಿಗೆಯು **'ಅವಸರದ ಓದಿ'**ಗೆ ಒಂದು ಉತ್ತಮ ಉದಾಹರಣೆಯನ್ನಾಗಿಸಬಹುದು. ನಿಜ, ಲೇಖಕರು ಈ ಕಿರುಹೊತ್ತಿಗೆಯಲ್ಲಿ ಸೂಕ್ಷ್ಮವಾದ ಅನೇಕ ಪ್ರಶ್ನೆಗಳನ್ನು ಮುಂದಿಟ್ಟಿದ್ದಾರೆ. ಅವರ ಸೂಕ್ಷ್ಮ ಒಳನೋಟಗಳು ಮೆಚ್ಚುವಂತಹವೇ. ಆದರೆ ಅದೇ ವೇಳೆಯಲ್ಲಿ ಲೇಖಕರು ಏಂಗೆಲ್ಸ್ ಹಾಗೂ ಇತರ ಎಡಚಿಂತಕರ (ದೇವಿಪ್ರಸಾದ ಚಟ್ಟೋಪಾಧ್ಯಾಯ, ಡಿ. ಡಿ.ಕೋಸಾಂಬಿ) ಲೇಖನಗಳನ್ನು ಅವಸರದಲ್ಲಿ ಓದಿ, ತಪ್ಪಾಗಿ ಅರ್ಥೈಸಿಕೊಂಡು, ಅನಗತ್ಯವಾದ ಆರೋಪಗಳಿಗೆ ಹಾಗೂ ತಪ್ಪು ತಿಳುವಳಿಕೆಯ ಸಂಭಾವ್ಯತೆಗೆ ಏಂಗೆಲ್ಸ್ ಮತ್ತಿತರರನ್ನು ದೂಡಿದ್ದಾರೆ.

ಡಾ|| ಶೈಲಜ ಅವರ ನಾಜೂಕಿನ ಅವಲೋಕನಗಳನ್ನು ಈ ರೀತಿ ಸಂಗ್ರಹಿಸಬಹುದು :

೧. ಮಾತೃ-ಪ್ರಧಾನತೆ ಅಥವಾ ಪಿತೃ-ಪ್ರಧಾನತೆಗಳನ್ನು ವೈಭವೀಕರಿಸುವುದು ಉಚಿತವಲ್ಲ. ಯಾವ ರೀತಿ ಪುರುಷಕೇಂದ್ರಿತ ಅಧಿಕಾರವನ್ನು, ಅದು ಎಸಗುವ ಶೋಷಣೆ, ತಾರತಮ್ಯವನ್ನು ವಿರೋಧಿಸುತ್ತೇವೆಯೋ, ಅದೇ ರೀತಿಯಲ್ಲಿ ಸ್ತ್ರೀಪ್ರಧಾನತೆಯಲ್ಲಿ ಪುರುಷನ ಮೇಲಾಗುವ ಶೋಷಣೆ, ಅಧಿಕಾರದ ಬೀಸನ್ನು ಸಹ ನಾವು ವಿರೋಧಿಸಬೇಕು. ಯಾರ ಪ್ರಾಧಾನ್ಯವೂ ಇಲ್ಲದ ಸ್ತ್ರೀ-ಪುರುಷ ಸಮಾನತೆಯೇ ಸ್ತ್ರೀವಾದದ ನಿಜವಾದ ಆಶಯ, ಅರ್ಥ ಹಾಗೂ ಗುರಿ ಆಗಿರಬೇಕು.

೨. ವಿಶ್ವದ ಅನೇಕ ದೇಶಗಳಲ್ಲಿ ಈ ಮೊದಲು ಮಾತೃ-ಪ್ರಧಾನ ಸಾಮಾಜಿಕ ವ್ಯವಸ್ಥೆ ಇದ್ದುವು ಎಂದಮಾತ್ರಕ್ಕೆ ಅಲ್ಲಿ ನಿಜವಾಗಿಯೂ ಸ್ತ್ರೀಗೆ ಪ್ರಾಮುಖ್ಯತೆ, ಅಧಿಕಾರಗಳು ಇದ್ದುವು ಎಂಬುದನ್ನು ಕೂಡಲೇ ಸ್ವೀಕರಿಸಲಾಗದು.

೩. ಮಾತೃ-ಪ್ರಧಾನ ನೆಲೆಗಳನ್ನು ಗುರ್ತಿಸಿ ಅವುಗಳನ್ನು ಗಮನಕ್ಕೆ ಅರ್ಹಗೊಳಿಸಿದ ಅನೇಕ ವಿದ್ವಾಂಸರು (ಉದಾ : ದೇವಿಪ್ರಸಾದ ಚಟ್ಟೋಪಾಧ್ಯಾಯ, ಡಿ. ಡಿ. ಕೋಸಾಂಬಿ) ಸ್ತ್ರೀಯ ಕಾರ್ಯವ್ಯಾಪ್ತಿಯ, ಅವಳ ನಿಜವಾದ ಅಧಿಕಾರ, ಸ್ಥಾನ-ಮಾನಗಳ ಬಗ್ಗೆ ನಿರ್ವಚಿಸಿಲ್ಲ.

೪. ಕೇವಲ 'ಮಾತೃತ್ವ'ದ ಕಾರಣ ಒಬ್ಬ ಸ್ತ್ರೀಗೆ ಕುಟುಂಬದಲ್ಲಿ ಅಧಿಕಾರವಿತ್ತೆಂದು ವೈಭವೀಕರಿಸುವುದು ಪಿತೃ-ಪ್ರಧಾನ ವ್ಯವಸ್ಥೆಯ ಧೋರಣೆ, ನಾಜೂಕಿನ ಕಾರ್ಯತಂತ್ರ. ಇಲ್ಲಿ ಒಬ್ಬ ಸ್ತ್ರೀಗೆ ಅವಳು ಸ್ತ್ರೀಯಾಗಿಯೇ (ಅಂದರೆ ಮಾತೃತ್ವದ ವಿನಾ) ಸಿಗಬೇಕಾದ ಗೌರವ, ಯಜಮಾನಿಕೆಯ ಸ್ವರೂಪ, ಆರ್ಥಿಕ ಸಂಪನ್ಮೂಲಗಳ ಮೇಲೆ ಆಕೆ ಹೊಂದಿದ್ದ ಮಾಲಿಕತ್ವದ ಸ್ವರೂಪ ಇವುಗಳ ನೈಜ ಚಿತ್ರಣ ಸಿಗುವುದಿಲ್ಲ.

ಡಾ|| ಶೈಲಜಾ ಅವರು ಏಂಗೆಲ್ಸ್‌ರ ಹೇಳಿಕೆಗಳನ್ನು ಈ ವಸ್ತು-ವಿಷಯದ ಹಿನ್ನೆಲೆಯಲ್ಲಿ ಉಲ್ಲೇಖಿಸುವಾಗ ಏಂಗೆಲ್ಸ್‌ರ ಅವಲೋಕನಗಳ ಕುರಿತು ತಪ್ಪು ಅಭಿಪ್ರಾಯ ತಾಳುವಂತೆಯೂ ಹಾಗೂ ಅಪೂರ್ಣವಾಗಿಯೂ ಉಲ್ಲೇಖಿಸಿರುತ್ತಾರೆ. ಲೇಖಕಿಯು ಏಂಗೆಲ್ಸ್‌ರವರ 'ಕುಟುಂಬ, ಖಾಸಗೀ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ' ಎಂಬ ವಿಶಿಷ್ಟ-ನೋಟದ ಕೃತಿಯನ್ನು ಬಹುಶಃ ಓದಿರಲಾರರು ಅಥವಾ ಅವಸರದ ಓದಿನಿಂದಾಗಿ ಈ ಮೊದಲು ಪಟ್ಟಿಮಾಡಿದ ಗೊಂದಲಗಳಿಗೆ ಸಿಲುಕಿರುತ್ತಾರೆ ಎಂಬುದು ದೃಢವಾಗುತ್ತದೆ.

**ಸ್ತ್ರೀಯ ಸ್ಥಾನಮಾನ ಮತ್ತು ಏಂಗೆಲ್ಸ್**

'ಮಾತೃ-ಅಧಿಕಾರ' ಎಂಬ ಸತ್ಯವನ್ನು ಗುರ್ತಿಸಿ, ಸಿದ್ಧಾಂತ ರೂಪಿಸಿದ ಬಾಹೊಫೆನ್‌ರ ಕುರಿತು ಏಂಗೆಲ್ಸ್‌ರು ಹೀಗೆನ್ನುತ್ತಾರೆ :

''ವಂಶಾವಳಿಯನ್ನು ಹೀಗೆ ಸಂಪೂರ್ಣವಾಗಿ ತಾಯಿಯ ಮೂಲಕವೇ ಗುರುತು ಹಚ್ಚುವುದನ್ನು ಮತ್ತು ಕಾಲಕ್ರಮೇಣ ಇದರಿಂದ ಉದ್ಭವಿಸಿದ ಉತ್ತರಾಧಿಕಾರೀ ಸಂಬಂಧಗಳನ್ನು ಅವರು (ಬಾಹೊಫೆನ್) 'ಮಾತೃ ಅಧಿಕಾರ' ಎಂದು ಕರೆಯುತ್ತಾರೆ. ....ಆದರೆ ಈ ಪದಪುಂಜದ ಆಯ್ಕೆ ಅಷ್ಟು ತೃಪ್ತಿಕರವೇನಲ್ಲ, ಏಕೆಂದರೆ ಈ ಸಾಮಾಜಿಕ-ಘಟ್ಟದಲ್ಲಿ ಕಾನೂನಿನ ಅರ್ಥದಲ್ಲಿ ಇನ್ನೂ ಯಾವುದೇ ಹಕ್ಕು ಅಥವಾ ಅಧಿಕಾರ ಎಂಬುದು ಇರಲಿಲ್ಲ'' (ಏಂಗೆಲ್ಸ್, ಕುಟುಂಬ, ಖಾಸಗೀ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ, ಪ್ರಗತಿ ಪ್ರಕಾಶನ, ಮಾಸ್ಕೊ, ೧೯೮೦, ಪುಟ ೬೧.)

ಹಾಗಿದ್ದಲ್ಲಿ, ಇಲ್ಲಿ ಏಂಗೆಲ್ಸ್ ಉಲ್ಲೇಖಿಸಿದ ''ಸಾಮಾಜಿಕ ಘಟ್ಟ'' ಯಾವುದಾಗಿತ್ತು? ಏಂಗೆಲ್ಸ್‌ರು ಮುಂದುವರೆದು ಮಾತೃ-ಅಧಿಕಾರದ ಈ ಸ್ಥಿತಿಯನ್ನು ಎಲ್ಲ ಕಿರಾತಾವಸ್ಥೆಯ ಜನರ ಮಧ್ಯೆಯೂ ಮತ್ತು ಅನಾಗರಿಕಾವಸ್ಥೆಯ ಕೆಳಮಜಲಿನ ಜನತೆಯ ಮಧ್ಯೆಯೂ ಕಾಣಬಹುದು ಎಂದು ವಿಮರ್ಶಿಸಿದ್ದಾರೆ.

ಮಾನವನ ವಿಕಾಸದ ಹಾದಿಯಲ್ಲಿ ಕಿರಾತಾವಸ್ಥೆಯು ಮಾನವಕುಲದ ಶೈಶವದಿಂದ, ಮೀನು ಹಿಡಿಯುವಿಕೆ, ಬಿಲ್ಲು-ಬಾಣಗಳ ಆವಿಷ್ಕಾರ, ಬೆಂಕಿಯ ಬಳಕೆ ಹಾಗೂ ನವಶಿಲಾಯುಗದವರೆಗೆ ಹರಡಿದೆ.

ಅನಾಗರಿಕಾವಸ್ಥೆಯ ಕೆಳಮಜಲು ಎಂಬುದು ಕುಂಬಾರ ಕಲೆಯ ಆವಿಷ್ಕಾರ, ಪಶುಪಾಲನೆ ಹಾಗೂ ಬೇಕಾದ ಬೆಳೆಯನ್ನು ಬೆಳೆವ ಘಟ್ಟದವರೆಗೂ ಹರಡಿದೆ. (ಏಂಗೆಲ್ಸ್, ಪುಟ ೩೪-೩೬.)

ಆದರೆ ಯಾಕೋ ಏನೊ ಡಾ|| ಶೈಲಜಾ ಅವರು ''ಮಾತೃ-ಅಧಿಕಾರ ಎಂಬ ಪದ-ಪುಂಜ ಅಷ್ಟು ತೃಪ್ತಿಕರ ವೇನಲ್ಲ' ಎಂಬ ಏಂಗೆಲ್ಸರ ಹೇಳಿಕೆಯನ್ನು ಉಲ್ಲೇಖಿಸಿಲ್ಲ. ಇದಕ್ಕೆ ಮಿಗಿಲಾಗಿ ಲೇಖಕರು ''ಮಾತೃ ಅಧಿಕಾರ''



## ಬನ್ನಿ ಕಿರಣಗಳೇ, ಬನ್ನಿ ನನ್ನೆದೆಗೆ

ಬನ್ನಿ ಕಿರಣಗಳೇ, ಬನ್ನಿ ನನ್ನೆದೆಗೆ
ಇಲ್ಲೇ ನೆಲೆಸಬನ್ನಿ;
ಬೆಳಗಿನಿಂದ ಸಂಜೆಯವರೆಗೂ
ಎಡೆಬಿಡದೆ ಚೆಲ್ಲಿ ಬೆಳಕ.

ಚುಮುಚುಮು ಬಿಸಿಲೊಳು ಇಬ್ಬನಿ ಹನಿಗಳು
ಮುತ್ತಿನ ರೂಪವ ತಳೆವಂತೆ;
ಹಚ್ಚನೆ ಹಸುರಿನ ಮಲ್ಲಿಗೆ ಲತೆಯಲಿ
ಬೆಳ್ಳನೆ ಹೂಗಳು ಬಿರಿವಂತೆ;

ಝುಳು ಝುಳು ಹರಿಯುವ ನೀರಿನ ಕಲರವ,
ಹಸುರಿನ ಮರೆಯಲಿ ಉಲಿಯುವ ಖಗರವ,
ಗಿರಿ–ಕಂದರ, ವನ ಸುಂದರ ಸೃಷ್ಟಿಗೆ,
ಅಚ್ಚರಿಯಲಿ ಮನ ನಲಿವಂತೆ;

ಪಡುವಣ ಕಡಲಲಿ ಮುಳುಗುವ ಅರುಣನು
ಮತ್ತೆ ಮೂಡಣದಿ ಬೆಳೆವಂತೆ;
ಅನಂತ ತಾರಾಗಣಗಳ ಜೊತೆಯಲಿ
ಚಂದಿರನಿರುಳಲಿ ಹೊಳೆವಂತೆ;

ನನ್ನೀ ಹೃದಯದಿ ತುಂಬಿಹ ತಮಂಧ –
ಘನವನು ತೊಡೆಯಿರಿ ಬೆಳಕುಗಳೇ;
ಮಾನವಕುಲ ಒಂದೆನ್ನುವ ಭಾವವ
ತುಂಬಿರಿ ನನ್ನೊಳು ಕಿರಣಗಳೇ.

ದಿನವೊಂದಳಿದರೂ ಅನುದಿನ ಬೆಳೆಯುವ
ಪರಿಯನು ಕಲಿಸಿರಿ ಹಸಿರುಗಳೇ,
ಮನದಲಿ ಹುದುಗಿದ ಅಹಮಿಕೆ ಬಿಮ್ಮನು
ಕಿತ್ತೊಗೆಯಿರಿ ಪ್ರಕೃತಿಯ ಸಹಚರರೇ.

ಡಾ|| ಬಿ. ಜಿ. ಕನಕೇಶಮೂರ್ತಿ
ಕನ್ನಡ ಉಪನ್ಯಾಸಕ, ಜಿ.ಪಿ.ಪಿ.ಪಿ. ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಹಗರಿಬೊಮ್ಮನಹಳ್ಳಿ - ೫೮೩ ೨೧೨

ಎಂಬುದು ಅನಾಗರಿಕ, ಕಿರಾತಾವಸ್ಥೆಯ ಘಟ್ಟವಾಗಿ ಗುರುತಿಸಲ್ಪಟ್ಟಿದೆ; ಪಿತೃ-ಪ್ರಧಾನ ವ್ಯವಸ್ಥೆಯು ನಾಗರಿಕ, ಸುಸಂಸ್ಕೃತ ಘಟ್ಟವಾಗಿ ಗೌರವಿಸಲ್ಪಟ್ಟಿದೆ'', ಎಂದು ಏಂಗೆಲ್ಸ್‌ರ ವಿರುದ್ಧ ಅನಗತ್ಯವಾಗಿ ಆರೋಪಿಸಿದ್ದಾರೆ. (ಶೈಲಜಾ ಹಿರೇಮಠ, ಪುಟ ೨೭)

ಶಬ್ದಗಳನ್ನು ಹೇಗೆ ತಪ್ಪಾಗಿ ಓದಲಾಗುತ್ತದೆ ಮತ್ತು ಹೇಗೆ ಅವು ಸರಿಯಾದ ಓದಿನ ಅಭಾವದಿಂದಾಗಿ ತಿರುಚಲ್ಪಡುತ್ತವೆ ಎಂಬುದಕ್ಕೆ ಡಾ|| ಶೈಲಜಾರ ಈ ಮೇಲಿನ ಮಾತುಗಳು ಅತ್ಯುತ್ತಮ ಉದಾಹರಣೆಗಳಾಗಿವೆ.

ಏಂಗೆಲ್ಸ್‌ರ ''ಕುಟುಂಬ, ಖಾಸಗೀ ಆಸ್ತಿ...'' ಕೃತಿಯನ್ನು ಸರಿಯಾಗಿ ಓದದ ಡಾ|| ಶೈಲಜಾ ಅವರು ಅನೇಕ ತಪ್ಪು ಅಭಿಪ್ರಾಯಗಳಿಗೆ ಬಲಿಯಾಗಿದ್ದಾರೆ. ಆ ಕಾರಣ ಕಿರಾತಾವಸ್ಥೆ, ಅನಾಗರಿಕಾವಸ್ಥೆ ಹಾಗೂ ನಾಗರಿಕಾವಸ್ಥೆಯ ಬಗ್ಗೆ ಏಂಗೆಲ್ಸ್‌ರ ಅವಲೋಕನಗಳನ್ನು ಸ್ವಲ್ಪ ಹೆಚ್ಚಾಗಿ ವಿವರಿಸುವ ಅಗತ್ಯತೆಗೆ ಡಾ|| ಶೈಲಜಾರವರು ಅವಕಾಶ ಕಲ್ಪಿಸಿಕೊಟ್ಟಿದ್ದಾರೆ.

ಮಾನವನ ವಿಕಾಸದ ಹಾದಿಯಲ್ಲಿ ಆಹಾರ ಸಂಗ್ರಹಣೆ ಮತ್ತು ಆಹಾರೋತ್ಪಾದನೆಯ ವಿಧಾನಗಳಲ್ಲಿ ಕಂಡುಬಂದ ವಿವಿಧ ಘಟ್ಟಗಳಿಗೆ ಈ ಹಿಂದಿನವರು ಏನು ಹೆಸರುಗಳನ್ನಿಟ್ಟಿದ್ದರೋ ಅವುಗಳನ್ನೇ ಮಾರ್ಕ್ಸ್ ಮತ್ತು ಏಂಗೆಲ್ಸ್‌ರು ಮುಂದುವರೆಸಿಕೊಂಡು ಬಂದರು. ಅಲ್ಲದೆ ಕಿರಾತಾವಸ್ಥೆ, ಅನಾಗರಿಕಾವಸ್ಥೆ ಇತ್ಯಾದಿ ಹೆಸರುಗಳನ್ನು ನೀಡಿದ್ದು ಅಮೆರಿಕಾದ ಪುರೋಗಾಮಿ ವಿಜ್ಞಾನಿ ಎಲ್.ಜೆ. ಮಾರ್ಗನ್.

ಬಾಹೊಫೆನ್‌ರ ಕೆಲವು ವ್ಯಾಖ್ಯೆಗಳನ್ನು ಅವೈಜ್ಞಾನಿಕ ಹಾಗೂ ಕಾಲ್ಪನಿಕ ಎಂದು ಅವುಗಳನ್ನು ತಿರಸ್ಕರಿಸಿದ ಮಾರ್ಕ್ಸ್ ಮತ್ತು ಏಂಗೆಲ್ಸ್‌ರು ಅದರ ಬದಲು ಎಲ್. ಜೆ. ಮಾರ್ಗನ್‌ರ ಸಂಶೋಧನೆ, ನಿಲುವುಗಳನ್ನು ಮಾನ್ಯ ಮಾಡುತ್ತಾರೆ. ಅವುಗಳ ಆಧಾರದ ಮೇಲೆಯೇ ಏಂಗೆಲ್ಸ್‌ರ 'ಕುಟುಂಬ, ಖಾಸಗೀ ಆಸ್ತಿ...' ಕೃತಿ ರಚನೆಯಾಗಿದೆ.

ಕಿರಾತಾವಸ್ಥೆ, ಅನಾಗರೀಕಾವಸ್ಥೆ ಈ ಹೆಸರುಗಳು ಆಯಾ ಕಾಲದ ಸಾಮಾಜಿಕ ವ್ಯವಸ್ಥೆಯ ಕುರಿತಾಗಿರದೆ ಆಹಾರವನ್ನು ಗಳಿಸಿಕೊಳ್ಳುವ (ಅಂದರೆ ಆರ್ಥಿಕ ಚಟುವಟಿಕೆ) ವಿಧಾನಕ್ಕೆ ಮಾತ್ರ ಸಂಬಂಧಿಸಿದ್ದಾಗಿರುತ್ತದೆ ಎಂದು ಇಲ್ಲಿ ಇನ್ನೊಮ್ಮೆ ಹೇಳಬೇಕಾಗುತ್ತದೆ. ಡಾ|| ಶೈಲಜಾರು ಈ ಅಂಶವನ್ನು ಗಮನಿಸಿಲ್ಲ ಅಥವಾ ಉದ್ದೇಶಪೂರ್ವಕವಾಗಿ ಮರೆಮಾಚಿರುತ್ತಾರೆ.

ಡಾ|| ಶೈಲಜಾ ಅವರ ಮತ್ತೊಂದು ಮುಖ್ಯ ಸಂದೇಹ, ''ಸ್ತ್ರೀಯರಿಗೆ ಈ ಮಾತೃ-ಅಧಿಕಾರ ಕೇವಲ ಅವಳ ಮಾತೃತ್ವದಿಂದ ಬಂದು ಅದಕ್ಕೆ ಮಾತ್ರ ಸೀಮಿತವಾಗಿತ್ತೇ ಅಥವಾ ನಿಜವಾಗಿಯೂ ಒಬ್ಬ ಸ್ತ್ರೀಯಾಗಿ ಅವಳಿಗೆ ಅಧಿಕಾರ, ಗೌರವಗಳು ಇದ್ದುವೇ ?'' ಎಂಬುದು.

ಇದಕ್ಕೆ ಉತ್ತರವನ್ನು ಎಂಗೆಲ್ಸ್‌ರೇ ಬಹಳ ಸ್ಪಷ್ಟವಾಗಿ ನೀಡಿರುತ್ತಾರೆ –

''ಕಿರಾತಾವಸ್ಥೆಯ ಎಲ್ಲ ಜನತೆಗಳ ಮಧ್ಯೆಯೂ, ಅನಾಗರಿಕಾವಸ್ಥೆಯ ಎಲ್ಲ ಕೆಳ ಹಾಗೂ ಮಧ್ಯಮ ಮಜಲಿನ ಜನರ ಮಧ್ಯೆಯೂ, ಭಾಗಶಃ ಅನಾಗರಿಕಾವಸ್ಥೆಯ ಮೇಲಿನ ಮಜಲಿನ ಮಧ್ಯೆಯೂ ಸಹ ಸ್ತ್ರೀ ಸ್ವತಂತ್ರವಾದ ಸ್ಥಾನವನ್ನಷ್ಟೇ ಅಲ್ಲ, ಅತ್ಯಂತ ಗೌರವದ ಸ್ಥಾನವನ್ನೂ ಪಡೆದುಕೊಂಡಿದ್ದಳು''. (ನೋಡಿ, ಏಂಗೆಲ್ಸ್, ಪುಟ ೭೦-೭೧)

ಇದಕ್ಕೆ ಉದಾಹರಣೆಯಾಗಿ ಸೆನೆಕಾ ಇರಾಕೆಸ್ ಜನರ ಮಧ್ಯೆ ಅನೇಕ ವರ್ಷ ಮತ ಪ್ರಚಾರಕ್ಕಾಗಿ ನೆಲೆಸಿದ್ದ ಆಷೆರ್‌ರೈಟರ ಅಧ್ಯಯನಗಳನ್ನು ಏಂಗೆಲ್ಸರು ಉದಾಹರಿಸಿದ್ದಾರೆ.

ಈ ಘಟ್ಟವನ್ನು ಏಂಗೆಲ್ಸರು ಕಮ್ಯುನಿಸ್ಟ್ ಲಕ್ಷಣದ ಮನೆ-ಆರ್ಥಿಕತೆ ಎಂದು ಕೊಂಡಾಡಿದ್ದಾರೆ. ಯಾಕೋ ಏನೋ ಡಾ|| ಶೈಲಜಾಅವರು ಅತಿಮುಖ್ಯವಾದ ಈ ಸಂಗತಿಗಳನ್ನು ಉಲ್ಲೇಖಿಸಿಲ್ಲ, ಗಮನಕ್ಕೆ ತಂದಿಲ್ಲ.

ಇನ್ನು ''ನಾಗರಿಕ ಸಮಾಜ'' ಎಂದು ಕರೆಯಲ್ಪಡುವ ಘಟ್ಟವನ್ನು (ಅಂದರೆ ಕಬ್ಬಿಣದ ನೇಗಿಲಿನ ಆವಿಷ್ಕಾರದ ಘಟ್ಟ ಹಾಗೂ ತದನಂತರದ ಕಾಲ) ಏಂಗೆಲ್ಸ್‌ರು ''ಸುಸಂಸ್ಕೃತ'' ಎಂದು ಎಲ್ಲೂ ಹೇಳಿಲ್ಲ.

ಈ 'ನಾಗರಿಕ ಸಮಾಜ'ದಲ್ಲಿ ಸ್ತ್ರೀಯ ಸ್ಥಿತಿಯೇನಾಯಿತೆಂಬುದರ ಬಗ್ಗೆ ಏಂಗೆಲ್ಸ್ ಏನು ಹೇಳುತ್ತಾರೆಂದು ನೋಡೋಣ :

''ನಾಗರಿಕ ಸಮಾಜದಲ್ಲಿ ಮಹಿಳೆಯು ಎಲ್ಲ ನಿಜವಾದ ಕೆಲಸದಿಂದಲೂ ದೂರವಿರುತ್ತಾಳೆ ಮತ್ತು ಸೋಗಿನ ಗೌರವದಿಂದ ಸುತ್ತುವರೆಯಲ್ಪಟ್ಟಿರುತ್ತಾಳೆ''. (ಏಂಗೆಲ್ಸ್, ಪುಟ ೭೨)

ಅದೇ ರೀತಿ ಪುಟ ೮೨ರಲ್ಲಿ,

''(ನಾಗರಿಕ ಸಮಾಜದಲ್ಲಿ) ಮಾತೃ-ಅಧಿಕಾರದ ಪತನವು ಸ್ತ್ರೀಸಂಕುಲದ ವಿಶ್ವೈತಿಹಾಸಿಕ ಪರಾಭವವಾಗಿತ್ತು... ಮಹಿಳೆಯನ್ನು ಕೆಳದರ್ಜೆಗೆ ಇಳಿಸಲಾಯಿತು... ಪುರುಷನ ವಿಷಯಾಭಿಲಾಷೆಗೆ ಗುಲಾಮಳನ್ನಾಗಿ ಮಾಡಲಾಯಿತು... ಇದನ್ನು ಕ್ರಮೇಣ ಅಂದಗೊಳಿಸಲಾಯಿತು, ಮರೆಮಾಚಲಾಯಿತು...''

ಏಂಗೆಲ್ಸರ ಇಷ್ಟು ಸ್ಪಷ್ಟ ಹಾಗೂ ಗಟ್ಟಿಯಾದ ಮಾತುಗಳನ್ನು ಶೈಲಜಾ ಅವರು ಉಲ್ಲೇಖಿಸಲೂ ಇಲ್ಲ.

ದೇವಿಪ್ರಸಾದ ಚಟ್ಟೋಪಾಧ್ಯಾಯರಾಗಲಿ, ಡಿ. ಡಿ. ಕೋಸಾಂಬಿ ಯವರಾಗಲೀ ಏಂಗೆಲ್ಸ್‌ರ ಕೃತಿ ಹಾಗೂ ಸಿದ್ಧಾಂತಗಳ ಪೂರ್ಣ ಪರಿಚಯವಿದ್ದ ವಿದ್ವಾಂಸರು ಎಂಬುದನ್ನು ಮತ್ತೊಮ್ಮೆ ಇಲ್ಲಿ ಸ್ಪಷ್ಟಪಡಿಸುವ ಅಗತ್ಯವಿದೆ.

ಶೈಲಜಾ ಅವರು ಮಹಿಳಾ-ಪೂಜಾರಿಗಳ ಸ್ಥಾನಮಾನ, ಸ್ಥಿತಿಗತಿ ಕುರಿತಂತೆ ಕ್ಷೇತ್ರ ಕಾರ್ಯ ಮಾಡಿದ್ದರ ಬಗ್ಗೆ ಹೇಳಿಕೊಳ್ಳುತ್ತ ಈ ಮಹಿಳಾ ಪೂಜಾರಿಗಳಿಗೂ ಯಾವುದೇ ಸ್ಥಾನಮಾನಗಳಾಗಲೀ, ಅಧಿಕಾರವಾಗಲೀ ಇಲ್ಲವೆಂದು ಹೇಳುತ್ತ, ಇವರಿಗೆ ''೫೦ರಿಂದ ೨೫೦ ವರ್ಷಗಳವರೆಗಿನ ಚರಿತ್ರೆಯಿದ್ದುದು ಕಂಡುಬಂದಿತು'' ಎಂದಿದ್ದಾರೆ (ಪುಟ ೨೬). ಅವರು ಇಲ್ಲಿ ಹೇಳಿದ ಕಾಲಾವಧಿಯು 'ನಾಗರಿಕ ಸಮಾಜ'ದ ಕಾಲಘಟ್ಟಕ್ಕೇ ಸೇರಿರುವುದರಿಂದ ಈ ಘಟ್ಟದಲ್ಲಿ ಸ್ತ್ರೀಯ ಸ್ಥಾನಮಾನ ಏನಾಯಿತೆಂಬುದನ್ನು ಈಗಾಗಲೇ ಎಂಗೆಲ್ಸ್‌ರು ಹೇಳಿರುವುದನ್ನು ನೋಡಿದ್ದೇವೆ.

ಏಂಗೆಲ್ಸ್‌ರು ಸ್ತ್ರೀಯ ಸಾಮಾಜಿಕ ಸ್ಥಿತಿ-ಗತಿಗಳಲ್ಲಿ ಆ ವೈಪರೀತ್ಯಗಳನ್ನು ಕೇವಲ ದಾಖಲಿಸುವುದಕ್ಕೆ ಮಾತ್ರ ತಮ್ಮನ್ನು ಸೀಮಿತಗೊಳಿಸಿಕೊಂಡಿಲ್ಲ, ಬಹಳ ಗಂಭೀರ ಹಾಗೂ ಅತಿಮುಖ್ಯವಾದ ಅವಲೋಕನವನ್ನೂ ಅವರು ಮುಂದಿಟ್ಟಿದ್ದಾರೆ.

''(ನಾಗರಿಕ ಸಮಾಜದಲ್ಲಿ ಮೈತಾಳಿದ) ಏಕಪತ್ನಿ ವಿವಾಹ ಪದ್ಧತಿಯಲ್ಲಿ ಗಂಡಸು ಹಾಗೂ ಹೆಂಗಸಿನ ಮಧ್ಯೆ ವೈಷಮ್ಯ ಹುಟ್ಟಿಕೊಂಡಾಗಲೇ ಇತಿಹಾಸದಲ್ಲಿ ಮೊದಲ ವರ್ಗ ವೈಷಮ್ಯ ಹುಟ್ಟಿಕೊಂಡಿತು. ಮತ್ತು ಪುರುಷ ವರ್ಗವು, ಸ್ತ್ರೀವರ್ಗದ ಮೇಲೆ ದಬ್ಬಾಳಿಕೆ ನಡೆಸುವುದರೊಂದಿಗೆ ಮೊದಲ ವರ್ಗ ದಬ್ಬಾಳಿಕೆಯು ಆರಂಭ ವಾಯಿತು''. (ಏಂಗೆಲ್ಸ್, ಪುಟ ೬೩-೬೪)

ಕಿರಾತಾವಸ್ಥೆಯ ಹಾಗೂ ಅನಾಗರಿಕಾವಸ್ಥೆಯ 'ಮಾತೃ-ಅಧಿಕಾರ'ದ ಕಾಲದಲ್ಲಿ ಪುರುಷನ ಮೇಲೆ ಸ್ತ್ರೀಯ ದಬ್ಬಾಳಿಕೆ ಇರಲಿಲ್ಲ, ಬದಲಾಗಿ, ಸ್ತ್ರೀ-ಪುರುಷರ ಮಧ್ಯೆ ಸಮಾನತೆಯಿತ್ತು. 'ನಾಗರಿಕ ಸಮಾಜ'ದಲ್ಲಿ ಮೊದಲ ವರ್ಗ ಸಂಘರ್ಷ ಸ್ತ್ರೀಯ ಮೇಲೆ ಪುರುಷನ ದಬ್ಬಾಳಿಕೆಯಿಂದ ಆರಂಭಗೊಂಡಿತು ಎಂಬುದೇ ಏಂಗೆಲ್ಸರ ಮೇಲಿನ ಮಾತಿನ ಅರ್ಥ.




'ಮಾತೃ-ಅಧಿಕಾರ'ದ ಕಾಲಾವಧಿಯಲ್ಲಿ ಸ್ತ್ರೀ-ಪುರುಷರ ನಡುವಿನ ಸಮಾನತೆಗೆ ಮುಖ್ಯ ಕಾರಣವೆಂದರೆ, ''ಮನೆಯ ನಿರ್ವಹಣೆಯು ಸಾರ್ವಜನಿಕ ಲಕ್ಷಣದಿಂದ ಕೂಡಿತ್ತು. ಅಂದರೆ ಇದು ಸ್ತ್ರೀ ಸಮುದಾಯದ ಗುಂಪು ಕೆಲಸವಾಗಿತ್ತು. ಪುರುಷರು ಒಟ್ಟಾಗಿ ಗುಂಪಿಗೆ ಆಹಾರವನ್ನು ಒದಗಿಸುತ್ತಿದ್ದರು. ಅವರ ಕೆಲಸವು ಸಾರ್ವಜನಿಕ ಲಕ್ಷಣದಿಂದ ಕೂಡಿದ್ದಾಗಿತ್ತು. (ಏಂಗೆಲ್ಸ್, ಪುಟ ೧೦೪)

ಆದರೆ 'ನಾಗರಿಕ ಸಮಾಜ'ದಲ್ಲಿ ಸ್ತ್ರೀಯನ್ನು ಸಾಮುದಾಯಿಕ ಕಾರ್ಯಸ್ಥಳದಿಂದ ಬಿಡಿ ಕುಟುಂಬಕ್ಕೆ ನಿರ್ಬಂಧಿಸಿದ್ದರಿಂದ, ಅವಳ ಪ್ರಾಮುಖ್ಯತೆ, ಸಾಮಾಜಿಕ ಸ್ಥಾನಮಾನ ಇತ್ಯಾದಿಗಳನ್ನು ಕೆಳದರ್ಜೆಗೆ ಇಳಿಸಲಾಯಿತು.

ಹಾಗಾದರೆ ಸ್ತ್ರೀ-ಪುರುಷರ ಸಮಾನತೆ ಹೇಗೆ ಸಾಧ್ಯವಾಗುತ್ತದೆ, ಸ್ತ್ರೀಗೆ ಪುನಃ ನಿಜವಾದ ಗೌರವ, ಸ್ಥಾನಮಾನ ಯಾವಾಗ ಸಾಧ್ಯ ಎಂಬ ಪ್ರಶ್ನೆಗೆ ಏಂಗೆಲ್ಸ್‌ರು ತಮ್ಮ ಕ್ರಾಂತಿಕಾರಿ ಅವಲೋಕನದ ಮೂಲಕ ವಿಶದೀಕರಿಸಿದ್ದಾರೆ.

''ಸ್ತ್ರೀಯು ಪುನಃ ಶ್ರಮ-ಮಾರುಕಟ್ಟೆಗೆ ಸಾಮುದಾಯಿಕ ರೀತಿಯಲ್ಲಿ ಬಂದಾಗ ಮಾತ್ರ ಸ್ತ್ರೀ-ಪುರುಷರ ಸಮಾನತೆ ಮೈತಳೆದು ನಿಲ್ಲುವುದು. ಮಹಿಳಾ ವರ್ಗವನ್ನು ಸಾರ್ವಜನಿಕ ಉದ್ಯಮದಲ್ಲಿ ಮತ್ತೆ ತೊಡಗಿಸು ವುದರ ಮೂಲಕ, ಬಿಡಿ ಕುಟುಂಬವು ಸಮಾಜದ ಆರ್ಥಿಕ ಘಟಕವಾಗಿರುವುದನ್ನು ತೊಡೆದುಹಾಕುವುದರ ಮೂಲಕ ಮಾತ್ರ ಸ್ತ್ರೀಗೆ ಅವಳು ಕಳೆದುಕೊಂಡ ಸ್ಥಾನ, ಮಾನ, ಗೌರವ ಹಾಗೂ ಅಧಿಕಾರಗಳು ಲಭ್ಯವಾಗುವುದು.'' (ಏಂಗೆಲ್ಸ್, ಪುಟ ೧೦೫/೧೦೬)

ಸ್ತ್ರೀ-ಪುರುಷ ಸಮಾನತೆಯ ಕುರಿತು ಡಾ|| ಶೈಲಜಾ ಹಿರೇಮಠರವರು ವ್ಯಕ್ತ ಪಡಿಸಿರುವ ಅಭಿಪ್ರಾಯಗಳು ಸರಿಯಾದ ಪರಿಕಲ್ಪನೆಯಿಂದ ಕೂಡಿದ್ದಾಗಿವೆ. ಆದರೆ ಇವುಗಳನ್ನು ಎಂಗೆಲ್ಸ್‌ರು ಈಗಾಗಲೇ ಸ್ಪಷ್ಟವಾಗಿ ಧ್ವನಿಸಿದ್ದಾರೆ ಮಾತ್ರವಲ್ಲ, ಸ್ತ್ರೀ-ಪುರುಷ ಸಮಾನತೆಯನ್ನು ಸಾಧಿಸುವುದು ಹೇಗೆ ಎಂಬುದರ ಬಗ್ಗೆಯೂ ಗಮನವನ್ನು ಸೆಳೆದಿರುತ್ತಾರೆ. ಈ ಕುರಿತು ಕಾರ್ಯೋದ್ಯುಕ್ತರಾಗುವುದು ಮಾತ್ರ ಈಗ ಬಾಕಿ ಉಳಿದಿರುವುದು. ಇಷ್ಟಾಗಿಯೂ, ಡಾ|| ಶೈಲಜಾ ಅವರ ಸೂಕ್ಷ್ಮ ಅವಲೋಕನಾ ಸಾಮರ್ಥ್ಯವು ಮೆಚ್ಚುವಂತಹುದೇ ಆಗಿದೆ. ಅವರಿಂದ ಇನ್ನೂ ಉತ್ತಮ 'ಕಾಣ್ಕೆ'ಗಳನ್ನು ಸಾರಸ್ವತ ಲೋಕವು ನಿರೀಕ್ಷಿಸುತ್ತದೆ.

ಎಮ್. ಸಿ. ಡೋಂಗ್ರೆ
ಭಾರತೀಯ ಜೀವವಿಮಾ ನಿಗಮ, ಹಾಸನ

---

೩೫ ಪುಟದಿಂದ

ಅಂಗಡಿಯ ಕಾರಕೂನರು ನಮ್ಮನ್ನು ಅಡ್ಡಗಟ್ಟಿದರೂ ಆಶ್ಚರ್ಯವಿಲ್ಲ. ದೊಡ್ಡ ಪಟ್ಟಣಗಳಲ್ಲಿನ ಕೆಲವು ಪಂಚ ತಾರಾ ಆಸ್ಪತ್ರೆಗಳು ಇಂತಹ ಉಪಾಯಗಳನ್ನೂ ಕಲಿತಿವೆ. ಈ ಆಸ್ಪತ್ರೆಗಳ ದಲ್ಲಾಳಿಗಳು ಮಧ್ಯಪ್ರಾಚ್ಯ ಮುಂತಾದ ದೇಶಗಳಲ್ಲಿದ್ದು ಅಲ್ಲಿಯ ಜನರಿಗೆ ಬಲೆ ಬೀಸುತ್ತಿರುತ್ತಾರೆ.

* * *

ದೊಡ್ಡ ನರ್ಸಿಂಗ್ ಹೋಮುಗಳ ಸಹವಾಸವೇ ಬೇಡವೆಂದು ನೀವು ರಸ್ತೆ ಬದಿಯ ''ಸೈಕಲ್ ಡಾಕ್ಟರರ'' (ಇವರು ಸೈಕಲ್ ತುಳಿಯಲಾರರು!) ಬಳಿ ಹೋದಿರೆನ್ನಿ. ಅಪಾಯ ಇಲ್ಲಿಯೂ ನಿಮಗಾಗಿ ಕಾದಿದೆ. ದೊಡ್ಡ ಆಸ್ಪತ್ರೆಗಳ ವಿಶಾಲ ಬಲೆ ಇಲ್ಲಿಯೂ ನಿಮ್ಮನ್ನು ಬಿಡುವುದಿಲ್ಲ. ವಿಪರೀತ ಕಾಫಿ ಸೇವಿಸಿಯೋ, ಬಾಯಿ ಚಟ ಜಾಸ್ತಿಯಾಗಿ ತುಂಬಾ ಮೆಣಸಿನಕಾಯಿ ಬೋಂಡಾ ತಿಂದೋ ನಿಮ್ಮ ಹೊಟ್ಟೆಯಲ್ಲಿ ಆ್ಯಸಿಡ್ ಜಾಸ್ತಿಯಾಗಿ ನಿಮಗೆ ಎದೆ ಕುಕ್ಕುತ್ತಿರಬಹುದು. ಆದರೆ ನಿಮ್ಮ ಡಾಕ್ಟರಿಗೆ ನಿಮ್ಮ ಆರೋಗ್ಯದ ಬಗ್ಗೆ ಬಹಳ ಕಾಳಜಿ. ಎದೆ ಕುಕ್ಕುತ್ತಿದೆ ಎನ್ನುತ್ತಿದ್ದಂತೆ ಅವರು ನಿಮ್ಮ ಹೃದಯದ ಆರೋಗ್ಯದ ಬಗ್ಗೆ ತವಕಪಟ್ಟುಕೊಳ್ಳುತ್ತಾರೆ. ಅದನ್ನು ಸರಿಯಾಗಿದೆಯೇ ಪರೀಕ್ಷಿಸಿ ತಿಳಿದುಕೊಳ್ಳುವ ಕಳಕಳಿ ತೋರಿಸುತ್ತಾರೆ. ಅವರ ಬಳಿ ಸರಿಯಾದ ಉಪಕರಣ ಇಲ್ಲದುದರಿಂದ, ''ಹೈಟೆಕ್'' ಆಸ್ಪತ್ರೆಯಿಂದ ತಪಾಸಣೆ ಮಾಡಿಸಿಕೊಂಡು ಬರಲು ನಿಮಗೆ ಬರೆದುಕೊಡುತ್ತಾರೆ. ಹಾಗೆಯೇ ನಿಮಗೆ ನಿದ್ದೆ ಕಡಿಮೆಯಾಗಿ ತಲೆ ತಿರುಗುತ್ತಿದೆ ಅನ್ನಿಸಿದ್ದರೆ, ನಿಮ್ಮ ತಲೆಯನ್ನು ''ಸ್ಕ್ಯಾನ್'' ಮಾಡಿಸುತ್ತಾರೆ. ನಿಮಗೆ ತಿಳಿಯದ ಅಂಶವೆಂದರೆ, ಹೈಟೆಕ್ ಆಸ್ಪತ್ರೆಯಿಂದ ಎಷ್ಟು ದೊಡ್ಡ ಚೆಕ್ ನಿಮ್ಮ ಡಾಕ್ಟರಿಗೆ ನಂತರ ರವಾನೆ ಆಗುತ್ತದೆ ಎಂಬುದು. ಇಂತಹ ಚೆಕ್ಕುಗಳನ್ನು ಹೈಟೆಕ್ ಆಸ್ಪತ್ರೆ ಗಳಲ್ಲದೇ, ಹಲವಾರು ''ಡಯಾಗ್ನಾಸ್ಟಿಕ್ ಸೆಂಟರ್''ಗಳೂ ಸೈಕಲ್ ವೈದ್ಯರಿಗೆ ಕಳಿಸುತ್ತವೆ.

* * *

ನಿಮ್ಮ ಬಳಿಯಿರುವ ವಾಹನಕ್ಕೆ ನೀವು ಇನ್ಶೂರೆನ್ಸ್ ಮಾಡಿಸಿಯೇ ಇರುತ್ತೀರಿ. ವರ್ಷವಿಡೀ ನೀವು ಯಾವ ಆಕ್ಸಿಡೆಂಟನ್ನೂ ಮಾಡದಿದ್ದರೆ ನಿಮಗೇ ಲಾಸು. ಆಕ್ಸಿಡೆಂಟ್ ಮಾಡಿದಿರೆನ್ನಿ. ನೀವು ಕಟ್ಟಿರುವ ಸಾವಿರ ರೂಪಾಯಿಗಳಿಗೆ ಇನ್ಶೂರೆನ್ಸ್ ಕಂಪನಿಯಿಂದ ಯಾವ ಮುಲಾಜಿಲ್ಲದೆ ಹತ್ತು ಸಾವಿರ ಕಕ್ಕಿಸಬಹುದು. ಇದೇ ರೀತಿ ನೀವು ''ಹೆಲ್ತ್ ಇನ್ಶೂರೆನ್ಸ್'' ಮಾಡಿಸಿರಬಹುದು. ಕಾಯಿಲೆ ಬಿದ್ದರೆ ನೀವು ಖುಷಿಪಡಬಹುದು. ನೀವು ಕಟ್ಟಿರುವ ಹಣಕ್ಕೆ ಹತ್ತು ಪಟ್ಟು ಹಣವನ್ನು ನೀವು ಕಂಪೆನಿಯಿಂದ ವೈದ್ಯರಿಗೆ ಕೊಡಿಸಬಹುದು. ಆಸ್ಪತ್ರೆ ಗಳಲ್ಲಿ ಕೂಡ ನಿಮಗೆ ಇನ್ಶೂರೆನ್ಸ್ ಇದೆಯೇ ಎಂದು ಕೇಳುತ್ತಾರೆ. ಏಕೆಂದರೆ, ಅವರಿಗೆ ನೀವು ಸಂತೋಷ ದಿಂದಿರಬೇಕೆಂಬ ಹಂಬಲ ಬಲವಾಗಿರುತ್ತದೆ. ನೀವು ಇನ್ಶೂರೆನ್ಸ್ ಇದೆ ಎಂದರೆ, ನಿಮಗೆ ಬೇಕಾದ ಬೇಡವಾದ ಎಲ್ಲ ಪರೀಕ್ಷೆಗಳನ್ನೂ ಮಾಡಿಸಿ ಇನ್ಶೂರೆನ್ಸ್ ಕಂಪನಿ ಯಿಂದ ಹಣ ಕಕ್ಕಿಸುತ್ತಾರೆ. ನಿಮಗೆ ಖುಷಿಯೋ ಖುಷಿ.

ಪ್ರೊ|| ಎಮ್.ಆರ್.ಎನ್. ಮೂರ್ತಿ
ಮಾಲಿಕ್ಯೂಲರ್ ಬಯೋಫಿಸಿಕ್ಸ್ ಯುನಿಟ್,
ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸಾಯಿನ್ಸ್, ಬೆಂಗಳೂರು - ೧೨

# ಜನಪದ ಚಿತ್ರಕಲೆಯಲ್ಲಿ ಮಣ್ಣೇ ಬಣ್ಣ !

## ಒಂದು ದೇಸೀ ಚಿಂತನೆ

ಚಿತ್ರವೆಂದರೆ ಬಣ್ಣಗಳು ನಮ್ಮ ಕಣ್ಣೆದುರು ಬರುತ್ತವೆ. ಗ್ರಾಮೀಣ ಚಿತ್ರಕಾರರು ಯಾವ ಬಣ್ಣಗಳನ್ನು ಬಳಸಿದರು ? ಅವರು ಬಳಸಿದ ಬಣ್ಣಗಳ ಮೂಲಗಳು ಯಾವುದು ? ಕುಂಚಗಳು ಹೇಗಿದ್ದವು ? ಅವರ ಕ್ಯಾನ್ವಾಸ್ ಯಾವುದು ? – ಈ ಪ್ರಶ್ನೆಗಳಿಗೆ ಉತ್ತರಗಳ ಹುಡುಕಾಟವೇ ರೋಚಕವಾಗಿದೆ. ಸಸ್ಯಜನ್ಯ ಮತ್ತು ಮಣ್ಣುಗಳೇ ಬಣ್ಣಗಳಾಗಿದ್ದವು. ಗೋಡೆ, ಭೂಮಿ ಹುಣ್ಣಿಮೆ ಬುಟ್ಟಿ, ಮನೆಯ ಮುಂದಿನ ನೆಲವೇ ಕ್ಯಾನ್ವಾಸ್ !

ಬಂದಗದ್ದೆ ರಾಧಾಕೃಷ್ಣ

ಕರ್ನಾಟಕದ ಜನಪದ ಚಿತ್ರಕಲೆಯನ್ನು ಒಂದು ವಿಷಯವನ್ನಾಗಿ ಅಧ್ಯಯನ ಮಾಡಿ, ಮಹಾ ಪ್ರಬಂಧ ಬರೆದಿರುವ ಡಾ|| ಎಸ್. ಸಿ. ಪಾಟೀಲರು ''ಜನಾಂಗದ ಬದುಕು ಜೀವನ ಚರಿತ್ರೆಯೆನಿಸಿದರೆ, ಕಲೆಗಳು ಅದರ ಆತ್ಮಚರಿತ್ರೆಯೆನಿಸುತ್ತದೆ. ಜನಪದ ಚಿತ್ರಕಲೆಯೆಂದರೆ ಕೇವಲ ಬಣ್ಣವಲ್ಲ, ರೇಖೆಯಲ್ಲ, ಸುಣ್ಣ, ಕಾವಿಗಳ ಬೊಟ್ಟುಗಳಲ್ಲ. ಧಾರ್ಮಿಕ ಸಂಪ್ರದಾಯಗಳು, ಪ್ರಕೃತಿಯ ಶಕ್ತಿಮೂಲಗಳು, ಮನುಷ್ಯನ ಸುಪ್ತ ಶಕ್ತಿಗಳು ಅಡಕಗೊಂಡಿರುವ, ಸೌಂದರ್ಯ ತುಂಬಿರುವ, ವೃತ್ತಿ ಮೂಲವಾಗಿರುವ ದೈನಂದಿನ ಬದುಕೇ ಆಗಿರುವ ಕಲೆ ಈ ಚಿತ್ರಕಲೆ. ಈ ಅರ್ಥದಲ್ಲಿ ಜನಪದ ಚಿತ್ರಕಲೆಯೆಂದರೆ ಜನಪದ ಜೀವನದ ಅಧ್ಯಯನವೇ ಆಗಿದೆ'' –ಎಂದು ಹೇಳುತ್ತಾರೆ. ಕರ್ನಾಟಕದ ಮಲೆನಾಡು ಪ್ರದೇಶವಾದ ಶಿವಮೊಗ್ಗ ಜಿಲ್ಲೆಯ ಸಾಗರ, ಹೊಸನಗರ, ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕುಗಳಲ್ಲಿ ಕಂಡುಬರುವ ಜನಪದ ಚಿತ್ರಕಲೆ ಹಸೆ. ಈ ಕಲೆ ಬೆಳೆದು ಬಂದಿರುವ ಕ್ರಮಗಳನ್ನು ಗಮನಿಸಿದಾಗ ಡಾ|| ಎಸ್. ಸಿ. ಪಾಟೀಲರ ಮಾತುಗಳನ್ನೇ ಪುನರುಚ್ಚರಿಸಬೇಕಾಗುತ್ತದೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಸೆ-ಕಾರ್ಯಾಗಾರ ಮಾಡುವಾಗ ಭೇಟಿಯಾದ ಇವರು ಮಲೆನಾಡಿನ ಹಸೆ ಕಲೆ ಬಗ್ಗೆ ಹೆಚ್ಚು ಅಧ್ಯಯನ ಮಾಡಲು ಆಗಲಿಲ್ಲ ಎಂದು ಹೇಳಿದರು. ಈಗ ನನಗನಿಸುತ್ತದೆ, ಕರ್ನಾಟಕ ಮಾತ್ರವಲ್ಲ, ಪ್ರಪಂಚದ ಯಾವುದೇ ಭಾಗದ ಜನಪದ ಚಿತ್ರಕಲೆ ಅಭ್ಯಾಸ ಮಾಡತೊಡಗಿದರೂ ಡಾ|| ಎಸ್. ಸಿ. ಪಾಟೀಲರು ಹೇಳಿದ ಮಾತುಗಳು ಬಹಳ ಪ್ರಸ್ತುತವೆನಿಸುತ್ತದೆ.

ನಮ್ಮ ಗ್ರಾಮೀಣ ಜೀವನದಲ್ಲಿ ಯಾವುದೇ ಕಲಾಶಿಕ್ಷಣ ಈಗಿನ ಶಾಲಾ, ಕಾಲೇಜುಗಳಂತೆ ಇರಲಿಲ್ಲ. ಸಂಪ್ರದಾಯ, ಹಬ್ಬ , ಹುಣ್ಣಿಮೆಗಳ ಆಚರಣೆಯಲ್ಲೇ ಶಿಕ್ಷಣ ಬೆರೆತುಕೊಂಡಿದೆ. ಗಣಪತಿ ಹಬ್ಬದ ಸಮಯದಲ್ಲಿ ಊರಿನ ಹಿರಿಯರೊಬ್ಬರು ವಿವಿಧ ರೀತಿಯ ಮಾವಿನ ತೋರಣ ಕಟ್ಟುವುದು ಹೇಗೆ ಎಂಬುದನ್ನು ಕಲಿಸಿದ್ದರು. ನಾಗರಪಂಚಮಿಯಿಂದ ಗಣಪತಿ ಹಬ್ಬಕ್ಕೆ ಒಂದು ತಿಂಗಳ ಕಾಲಾವಕಾಶವಿರುತ್ತದೆ. ನಾಗರಪಂಚಮಿಗೆ ಕುಂಬಾರ ಮಣ್ಣು ತಂದು ಗಣಪತಿ, ಇಲಿ, ಹಾವು ಮುಂತಾದವುಗಳ ಮೂರ್ತಿಗಳನ್ನು ರಚಿಸುವುದು ಸಂಪ್ರದಾಯ. ನಮ್ಮ ಮನೆತನದವರೇ ಆದ ಭಟ್ಟನ ಕೃಷ್ಣಪ್ಪನವರು ಪೊಳ್ಳು ಗಣಪತಿ ಮಾಡುವುದನ್ನು ಕಲಿಸಿದ್ದರು. ಪಕ್ಕದ ಊರು ಬೆಳೆಯೂರಲ್ಲಿ ಶ್ರೀ ಮಹಾಗಣಪತಿ ಯಕ್ಷಗಾನ ಮಂಡಳಿಯಿದೆ. ಒಂದು ಕಲೆ ಮತ್ತೊಂದು ಕಲೆಯ ಮೇಲೆ ಹೇಗೆ ಪ್ರಭಾವ ಬೀರಿರುತ್ತದೆ ಎಂಬುದನ್ನು ಅಲ್ಲಿ ಕಂಡಿದ್ದೇನೆ. ಆ ಊರಿನ ಯಕ್ಷಗಾನ ಕಲಾವಿದ ವೆಂಕಟರಾವ್ ಮಣ್ಣಲ್ಲಿ ಮೂರ್ತಿ ಮಾಡುವವರು. ಅವರು ಯಕ್ಷಗಾನ ವೇಷದ ಮೂರ್ತಿಗಳನ್ನೂ, ಭಾಗವತ, ಮದ್ದಲೆಕಾರ, ಚಂಡೆಕಾರರ ಮೂರ್ತಿಗಳನ್ನೂ ಮಾಡಿದ್ದಾರೆ. ಕೃಷಿ ಜೀವನದ ಬಿಡುವಿನ ವೇಳೆಯಲ್ಲೇ ಯಕ್ಷಗಾನ ಕಲಿಕೆಯೂ ಆಗುತ್ತದೆ. ಹೀಗೆ ನಮಗೆ ಅರಿವೇ ಇಲ್ಲದಂತೆ ಕಲೆಗಳು ಚಿಗುರಿಕೊಳ್ಳುತ್ತವೆ.



ನಮ್ಮ ಪ್ರದೇಶದ ಜನಪದ ಚಿತ್ರಕಲೆ ಅಭ್ಯಾಸ ಮಾಡುವಾಗ ಜೀವನದಲ್ಲಿ ಅನ್ನ ಮುಖ್ಯವೇ, ಕಲೆ ಮುಖ್ಯವೇ ಎಂಬ ಪ್ರಶ್ನೆ ಎದುರಾಯಿತು. ಬಡತನ ಎಂಬುದನ್ನು ಯಾವುದಕ್ಕೆ ಹೇಳಬೇಕೆಂಬ ಪ್ರಶ್ನೆಯಿದ್ದರೂ ಆರ್ಥಿಕ ಹಿಂದುಳಿಯುವಿಕೆಗೆ ನಮ್ಮಲ್ಲಿ ಬಡತನವೆಂಬುದು ರೂಢಿಯಲ್ಲಿದೆ. ಕೆಲವು ಕುಟುಂಬಗಳು ವರ್ಷದ ಎಲ್ಲಾ ದಿನಗಳು ಸರಿಯಾದ ಊಟ ಪಡೆದುಕೊಳ್ಳಲೂ, ಕಷ್ಟದಲ್ಲಿವೆ. ಈ ಹಿನ್ನೆಲೆಯಲ್ಲಿ ಮೇಲಿನ ಪ್ರಶ್ನೆ ಎದುರಾಗುತ್ತದೆ. ಹೊಟ್ಟೆ ತುಂಬಿದ ನಂತರವೇ ಕಲೆ ಎಂಬುದು ರೂಢಿಗತವಾದ ಮಾತು. ಆದರೆ ಮನುಷ್ಯನ ಜೀವನದಲ್ಲಿ ಈ ಮಾತು ನಿಜವಲ್ಲ. ಕೃಷಿಪದ್ಧತಿ ರೂಢಿಸಿಕೊಂಡ ನಂತರ ಮನುಷ್ಯನ ಬದುಕು ಇಡೀ ಒಂದು ವರ್ಷಕ್ಕೆ ಯೋಜನೆಗೊಂಡಿರುತ್ತದೆ. ಹೊಟ್ಟೆಗೆ ಅನ್ನ ಗಳಿಸಿಕೊಳ್ಳುವ ಕೆಲಸದ ಜೊತೆಗೇ ಮನಸ್ಸಿಗೆ ಆನಂದ ನೀಡುವ ಕಲೆಗಳನ್ನು ಆತ ರೂಢಿಸಿಕೊಳ್ಳುತ್ತಾ ಬಂದಿದ್ದಾನೆ. ನಾವು ಯಾರೂ ರಾಮಾಯಣ, ಭಾರತ ಕತೆಗಳನ್ನು ಕುಳಿತು ಓದಿದವರಲ್ಲ. ಅಜ್ಜ, ಅಜ್ಜಿ ಹೇಳಿದ್ದು, ಹಾಡು, ಹರಿಕಥೆ, ನಾಟಕ, ಸಿನೆಮಾ, ಯಕ್ಷಗಾನ, ದೊಡ್ಡಾಟಗಳ ಮೂಲಕ ಆ ಕತೆಗಳು ನಮ್ಮ ಅರಿವಿಗೆ ಬಂದಿವೆ. ನಮ್ಮ ಬದುಕಿನಲ್ಲಿ ಆ ಕತೆಗಳು ಹಾಸುಹೊಕ್ಕಾಗಿವೆ. ಇದೇ ರೀತಿ ಉಳಿದೆಲ್ಲ ಕಲೆಗಳೂ ಬೆಳೆಯುತ್ತ ಬಂದಿವೆ. ಹೀಗಾಗಿ ಅನ್ನ ಮತ್ತು ಕಲೆ ಒಟ್ಟೊಟ್ಟಾಗಿಯೇ ಬೆಳೆಯುತ್ತವೆ. ಹುಟ್ಟಿದ ಮಗುವಿಗೆ ಮೊದಲು ದೇಹ ಬೆಳಸಿ, ಆಮೇಲೆ ಬುದ್ಧಿ ತುಂಬಲು ಸಾಧ್ಯವೇ? ದೇಹ, ಬುದ್ಧಿಗಳು ಒಟ್ಟೊಟ್ಟಾಗಿಯೇ ಬೆಳೆಯಬೇಕಲ್ಲವೇ ?

ಚಿತ್ರವೆಂದರೆ ಬಣ್ಣಗಳು ನಮ್ಮ ಕಣ್ಣೆದುರು ಬರುತ್ತವೆ. ಗ್ರಾಮೀಣ ಚಿತ್ರಕಾರರು ಯಾವ

ಬಣ್ಣಗಳನ್ನು ಬಳಸಿದರು ? ಅವರು ಬಳಸಿದ ಬಣ್ಣಗಳ ಮೂಲಗಳು ಯಾವುವು ? ಕುಂಚಗಳು ಹೇಗಿದ್ದವು ? ಅವರ ಕ್ಯಾನ್ವಾಸ್ ಯಾವುದು ? – ಈ ಪ್ರಶ್ನೆಗಳಿಗೆ ಉತ್ತರಗಳ ಹುಡುಕಾಟವೇ ರೋಚಕವಾಗಿದೆ. ಸಸ್ಯಜನ್ಯ ಮತ್ತು ಮಣ್ಣುಗಳೇ ಬಣ್ಣಗಳಾಗಿದ್ದವು. ಗೋಡೆ, ಭೂಮಿ, ಹುಣ್ಣಿಮೆ ಬುಟ್ಟಿ, ಮನೆಯ ಮುಂದಿನ ನೆಲವೇ ಕ್ಯಾನ್ವಾಸ್ ! ಬಿಳಿ ಮಣ್ಣಿನಪುಡಿ-ರಂಗೋಲಿಯೂ ಚಿತ್ರಕ್ಕೊಂದು ಬಣ್ಣ. ಹುಲ್ಲಿನ ಕಡ್ಡಿ, ಪುರಡಿನಾರು, ಹಿಟ್ಟಂಡೆ ಹುಲ್ಲಿನ ಹಿಡಿಯೇ ಕುಂಚಗಳು ! ಈ ಹಿನ್ನೆಲೆಯಿಂದ ಈ ಬಗೆಗೆ ತಿಳಿಯುವುದೇ ಒಂದು ಕುತೂಹಲಕರ ಕ್ರಿಯೆ.

**ಮಣ್ಣಿನ ಬಣ್ಣಗಳಿಂದ ಚಿತ್ರರಚನೆ – ಹೇಗೆ ? ಏಕೆ ?**

ಮಲೆನಾಡಿನ ಗ್ರಾಮೀಣ ಚಿತ್ರಕಾರರು ಕೆಮ್ಮಣ್ಣು, ಜೇಡಿ, ಅರಿಶಿಣ, ಮಣ್ಣು – ಇವನ್ನು ಬಣ್ಣಗಳನ್ನಾಗಿ ಬಳಸಿದರು. ಗುರಗೆ ಹಿಟ್ಟು, ಕಾರೆಕಾಯಿ, ಅರಿಶಿಣ ಮುಂತಾಗಿ ಸ್ಥಳೀಯವಾಗಿ ಸಿಗುವ ಸಸ್ಯಸಜನ್ಯಗಳನ್ನು ಬಣ್ಣದ ರೂಪದಲ್ಲಿ ಬಳಸಿದರು. ನೆಲ ಚೊಕ್ಕಾ ಮಾಡಲು, ಗೋಡೆಗಳನ್ನು ಅಲಂಕರಿಸಲು ಸಗಣಿ ಬಳಸಿದರು. ಮನೆ ಮುಂದೆ, ಕಡುಕಪ್ಪು ಅಥವಾ ಕಡುಹಸಿರಾದ ಸಗಣಿ ಸಾರಿಸಿ ಕ್ಯಾನ್ವಾಸ್ ಸಿದ್ಧಮಾಡಿ ಬಿಳಿ ರಂಗೋಲಿ ಹಿಟ್ಟಿನಿಂದ ಚಿತ್ರ ರಚಿಸುತ್ತಿದ್ದರು. ಕೆಮ್ಮಣ್ಣು, ಸುಣ್ಣ, ಬೆಲ್ಲ ಕಲಸಿ ನೆಲಕ್ಕೊರೆದರೆ ಮನೆಯ ಜಗುಲಿ ಈಗಿನ ಗ್ರಾನೈಟಿಗೂ ಬಿಟ್ಟುಕೊಡದೆ ಫಳಫಳ ಹೊಳೆಯುತ್ತಿತ್ತು. ಈ ರೀತಿಯ ಸೌಂದರ್ಯಪ್ರಜ್ಞೆಯೇ ಸಂಪ್ರದಾಯವಾಗಿ ಬೆಳೆದುಬಂತು. ಅಕ್ಕಿಯಿಂದ ಬಿಳಿ, ಕಪ್ಪು ಬಣ್ಣ ತಯಾರಿಸುವ ಚಮತ್ಕಾರವೂ ಅವರಿಗೆ ತಿಳಿದಿತ್ತು. ಅಕ್ಕಿ ಬೀಸಿದಾಗ ಬಿಳಿ ಬಣ್ಣ ಬಂದರೆ, ಅಕ್ಕಿ ಹುರಿದು ಬೀಸಿದಾಗ ಕಪ್ಪು ಬಣ್ಣ ಸಿಗುತ್ತಿತ್ತು. ಆದರೆ ಈ ರೀತಿ ಬಣ್ಣಗಳು ಬಾಳಿಕೆ ಬರುತ್ತಿರಲಿಲ್ಲ. ಕ್ರಿಮಿಕೀಟಗಳಿಗೆ ಆಹಾರವಾಗುತ್ತಿತ್ತು. ಈ ಬಣ್ಣಗಳನ್ನು ಕಾಗದಕ್ಕೆ ಅಂಟಿಸಿ, ಬಾಳಿಕೆ ಬರುವಂತೆ ಮಾಡಲು ರಾಸಾಯನಿಕ ಚಿಕಿತ್ಸೆ ಅಗತ್ಯವಿದೆ.

**ಪ್ರಯೋಗ ಶುರುವಾದ ಬಗೆ...**

ಈಗಾಗಲೇ ಹೇಳಿದಂತೆ ಕೃಷಿ ಜೀವನದಲ್ಲಿ ಚಿತ್ರರಚನೆಗೆ ಪೂರ್ಣಾವಧಿ ಸಮಯವಿರುವುದಿಲ್ಲ. ಚಿತ್ರರಚನೆಗೆ ತೊಡಗಿದಾಗ ಸದಾ ಬಣ್ಣಗಳು ಸಿದ್ಧವಿರುವುದು ಅನಿವಾರ್ಯ. ಆದರೆ ಒಮ್ಮೊಮ್ಮೆ ಕೆಲವು ಚಿತ್ರಗಳು ೩-೪ ತಿಂಗಳವರೆಗೂ ಪೂರ್ಣಗೊಳ್ಳದೇ ಇರುವುದುಂಟು. ಹೀಗಾದಾಗ ರಾಸಾಯನಿಕ ಬಣ್ಣಗಳು ಒಣಗಿಹೋಗುವ ಸಾಧ್ಯತೆಗಳಿವೆ. ರಾಸಾಯನಿಕ ಬಣ್ಣಗಳು ದುಬಾರಿ ಕೂಡ. ಜೊತೆಗೆ, ಇವತ್ತಿನ ಚಿತ್ರರಚನೆ ಸಂದರ್ಭದಲ್ಲಿ ಹೊಸತನ ಕಾಣುವುದು ಹೇಗೆ ಎಂದು ಮನಸ್ಸು ತುಡಿಯುತ್ತಿತ್ತು. ನೋಟಕ್ಕೆ ಆಪ್ತವೆನಿಸುವ, ಸಾಂಪ್ರದಾಯಿಕ ಹಿನ್ನೆಲೆಯುಳ್ಳ, ಹೊಸ ಶೈಲಿಯನ್ನೇ ಪ್ರಾರಂಭಿಸಬಹುದಾದ ಮಣ್ಣಿನ ಬಣ್ಣಗಳ ಹುಡುಕಾಟ ಪ್ರಾರಂಭವಾಯಿತು. ಊರು, ತೋಟ, ಗುಡ್ಡ ಬೆಟ್ಟಗಳಲ್ಲಿ ಓಡಾಡುವಾಗ, ಆಕರ್ಷಕ ಮಣ್ಣುಗಳ ಸಂಗ್ರಹ ಪ್ರಾರಂಭವಾಯಿತು. ಇವುಗಳನ್ನೇ ಬಣ್ಣವಾಗಿ ಸಿದ್ಧಗೊಳಿಸಿ ಚಿತ್ರ ರಚನೆ ಮಾಡಲಾಯಿತು. ಪ್ರಾರಂಭದ ಪ್ರಯೋಗಗಳು ಯಶಸ್ಸು ಕಂಡವು. ಅಲ್ಲದೆ ಮುಂದೆ ಮಾಡಬಹುದಾದ ಪ್ರಯೋಗಗಳಿಗೆ ಅವಕಾಶವಿದೆ ಎಂಬ ಮುನ್ಸೂಚನೆಗಳೂ ದೊರಕಿದವು.

ನೀಲಿ, ನೇರಳೆ, ಕಡುಗೆಂಪು ಮುಂತಾದ ಬಣ್ಣಗಳ ಕೊರತೆ ಮಣ್ಣಿನಲ್ಲಿರುತ್ತಾ ಚಿತ್ರ ರಚನೆಗೆ ತೊಡಕೇನೂ ಆಗಲಾರದು. ಈ ಬಣ್ಣಗಳಿಗೆ ಸಸ್ಯ, ಬೀಜ ಇತ್ಯಾದಿಗಳನ್ನು ಆಶ್ರಯಿಸಬಹುದು.

**ಮಣ್ಣು – ಗುಣ, ಬಣ್ಣಗಳ ಹುಡುಕಾಟ**

ಪ್ರತಿಯೊಂದು ಬಣ್ಣದ ಮಣ್ಣಿಗೂ ಅದರದ್ದೇ ಆದ ಗುಣಗಳಿವೆ. ಪ್ರಾಕೃತಿಕವಾದ ರಾಸಾಯನಿಕ ಕ್ರಿಯೆಗಳಿಗೆ ಒಳಪಟ್ಟ ಮಣ್ಣುಗಳೂ ನಮಗೆ ಸಿಗುತ್ತವೆ. ಉದಾಹರಣೆಗೆ, ಹುತ್ತದ ಮಣ್ಣು ಮತ್ತು ಅಡಿಕೆ ತೋಟಗಳಲ್ಲಿ ಏಡಿ ಒತ್ತಿದ ಹಳದಿ ಮಣ್ಣು, ಕುಲ್ಡಿಹುಳು

## ಸಾದರ ಸ್ವೀಕಾರ

**ಬಾಗಿಲಾಚೆಯ ಮೌನ** (ಕವಿತಾ ಸಂಕಲನ) ರೂಪ ಹಾಸನ
ಪುಟ : ೮೮ ಬೆಲೆ : ರೂ. ೫೦

**ರಂಗಸೋ ಮಲೆ ಮಂಗನೋ** (ಕಾದಂಬರಿ)
ತುಳು ಮೂಲ : ಯಜ್ಞಾವತಿ ಕೇಶವ ಕಂಗೆನ್
ಅನು : ಮುಹಮ್ಮದ್ ಕುಳಾಯಿ
ಪುಟ : ೬೬ ಬೆಲೆ : ರೂ. ೩೦

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿ ನಗರ, ಬಳ್ಳಾರಿ - ೫೮೩ ೧೦೩

**ಬಣ್ಣದ ಹಕ್ಕಿ** (ಎರಡು ಮಕ್ಕಳ ನಾಟಕಗಳು)
ಆರ್. ವಿ. ಭಂಡಾರಿ
ಪುಟ : ೫೨ ಬೆಲೆ : ರೂ. ೧೫
**ಬಂಡಾಯ ಪ್ರಕಾಶನ**, ಅರೇಅಂಗಡಿ, ಹೊನ್ನಾವರ, ಉತ್ತರ ಕನ್ನಡ - ೫೮೧ ೪೩೦

**ಆಳು ಕೂಗಿನ ಹಕ್ಕಿ** (ಕವನ ಸಂಕಲನ) ಬಸವರಾಜ ವಕ್ಕುಂದ
ಪುಟ : ೧೧೬ ಬೆಲೆ : ರೂ. ೯೦
**ಸಿವಿಜಿ ಪಬ್ಲಿಕೇಷನ್ಸ್**, ನಂ.೭೦, ೨ನೇ ಮುಖ್ಯರಸ್ತೆ, ಜಬ್ಬಾರ್‌ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು - ೩

**ಮಳೆ ನೀರ ಕುಡಿ** (ಹಾಡುಗಳು-ಲೇಖನಗಳು)
ಕೃಷ್ಣಮೂರ್ತಿ ಬಿಳಿಗೆರೆ
ಪುಟ : ೫೮ ಬೆಲೆ : ರೂ. ೧೫
**ನಮ್ಮ ಪ್ರಕಾಶನ**, ಬಿಳಿಗೆರೆ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ - ೫೭೨ ೧೧೪

**ಶಿವ-ರಹಸ್ಯ** (ವೈಚಾರಿಕ ಲೇಖನಗಳು) ಶಂ. ಬಾ. ಜೋಶಿ
ಪುಟ : ೭೨ ಬೆಲೆ : ರೂ. ೩೦
**ಶಂ.ಬಾ. ವಿಚಾರ ವೇದಿಕೆ**, 'ಶ್ರೇಯಸ್', ೭೩೭(೨೬೨) ಕೃಷ್ಣಾನದಿ ರಸ್ತೆ, ಪೈಪ್‌ಲೈನ್, ಶ್ರೀನಗರ, ಬೆಂಗಳೂರು - ೫೬೦ ೦೫೦

**ಹನಿಮುತ್ತುಗಳು** (ಚುಟುಕ ಸಂಕಲನ)
ಎಂ. ಎಂ. ಸಂಗಣ್ಣನವರ
ಪುಟ : ೪೮ ಬೆಲೆ : ರೂ. ೩೦
**ಗಂಗಾಧರ ಪ್ರಕಾಶನ**, ಹುಣಸಿಕಟ್ಟಿ - ೫೯೧ ೧೫೩

**ಇತಿಹಾಸ ಮರೆತವರು** (ಕವನ ಸಂಕಲನ)
ಮರಿಯಪ್ಪ ನಾಟೇಕರ್
ಪುಟ : ೬೦ ಬೆಲೆ : ರೂ. ೩೫
**ಅಭಿಜಿತ್ ಪ್ರಕಾಶನ**, A-೪೦೪, ವಿನಾಯಕ್ ಆಶಿಷ್, ಎಂ.ಎಂ. ರಸ್ತೆ, P&T. ಕಾಲನಿ ಸಮೀಪ, ಮುಳುಂದ, ಮುಂಬೈ - ೪೦೦ ೦೮೦

**ಮುತ್ತೆತ್ತೂರಿನ ದರ್ಗಾ** (ಕಥಾ ಸಂಕಲನ)
ಕಿದೂರು ವೇಣುಗೋಪಾಲ ಶೆಟ್ಟಿ
ಪುಟ : ೯೧ ಬೆಲೆ : ರೂ. ೪೫

**ಔಷಧೀಯ ವೃಕ್ಷ ಸಂಪದ** - ಸಂಪುಟ ೧
ಡಾ॥ ಸತ್ಯನಾರಾಯಣ ಭಟ್. ಪಿ.
ಪುಟ : ೧೯೨ ಬೆಲೆ : ರೂ.೯೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಪುಸ್ತಕನಿಧಿ**, ಗಾವಳಿ, ಹಳ್ನಾಡಿ-ಹರ್ಕಾಡಿ, ಕುಂದಾಪುರ- ೨೧೦

**ಕಲಾಮನೋವಿಜ್ಞಾನ** (ಲೇಖನ ಸಂಗ್ರಹ)
ಎನ್. ವಿಶ್ವರೂಪಾಚಾರ್
ಪುಟ : ೬೪ ಬೆಲೆ : ರೂ. ೧೫
**ವಿಶ್ವರೂಪ ಪ್ರಕಾಶನ**, ಬಿಲ್ಡಿಂಗ್ ನಂ. ೧೬೮, ೨ನೇ ಮಹಡಿ, ಕೆಎಚ್‌ಬಿ ಕಾಲೋನಿ, ಕೆಂಗೇರಿ ಉಪನಗರ, ಬೆಂಗಳೂರು-೬೦

**ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ**, ಸರಸ್ವತಿ ಗೋದಾಮು, ಗುಲಬರ್ಗಾ - ೫೮೫ ೧೦೧
ಇವರಿಂದ ವಿವಿಧ ಲೇಖಕರು ಬರೆದಿರುವ ೧೮ ಕಿರು ಹೊತ್ತಿಗೆಗಳು ಪ್ರಕಟವಾಗಿವೆ. ಪ್ರತಿಯೊಂದು ಪುಸ್ತಕದ ಬೆಲೆ ರೂ.೧೨

**ಗೌತಮ ಬುದ್ಧ, ಹಡಪದ ಅಪ್ಪಣ್ಣ, ಉರಿಲಿಂಗ ಪೆದ್ದಿ, ಶರಣಬಸವೇಶ್ವರರು, ಅಂಬಿಗರ ಚೌಡಯ್ಯ, ಮಹಾತ್ಮ ಗಾಂಧಿ, ಹೇಮರೆಡ್ಡಿ ಮಲ್ಲಮ್ಮ, ಆಯ್ದಕ್ಕಿ ಲಕ್ಕಮ್ಮ, ಮಾದಾರ ಚೆನ್ನಯ್ಯ, ಡಾ॥ ಎಸ್. ರಾಧಾಕೃಷ್ಣನ್, ಸರದಾರ ವಲ್ಲಭಭಾಯಿ ಪಟೇಲ್, ಬಸವಣ್ಣ, ಝಾನ್ಸಿ ರಾಣಿ ಲಕ್ಷ್ಮೀಬಾಯಿ, ಇಂದಿರಾ ಗಾಂಧಿ, ಡಾ॥ ಸಿದ್ದಯ್ಯ ಪುರಾಣಿಕ, ವೀರರಾಣಿ ಚೆನ್ನಮ್ಮ, ಪುರಂದರದಾಸರು, ಲಾಲಬಹದ್ದೂರ ಶಾಸ್ತ್ರಿ**

**ಚಿಲಿಪಿಲಿ ಪ್ರಕಾಶನ**, ೫೬, ೪ನೇ ಅಡ್ಡರಸ್ತೆ, ಶಿವಾನಂದ ನಗರ, ಧಾರವಾಡ ಇವರಿಂದ ವಿವಿಧ ಲೇಖಕರು ಬರೆದಿರುವ ಹದಿಮೂರು ಪುಸ್ತಕಗಳು ಪ್ರಕಟವಾಗಿವೆ.

**ಬೆಳೆಯುವ ಸಿರಿಗೆ ಜೀವಜಲ - (ರೂ. 25), ಉಪಕಾರ - (ರೂ. 25), ಕನ್ನಡ ನಿಬಂಧಗಳು - (ರೂ. 15) ಕನ್ನಡ ಗಾದೆ ಮಾತುಗಳು - (ರೂ. 15), ಚಿಲಿಪಿಲಿ ಕ್ರಿಯಾತ್ಮಕ ಶಬ್ದ ಭಂಡಾರ - (ರೂ. 10), ಆಡುತ್ತ ಇಂಗ್ಲಿಷ್ ಕಲಿ - (ರೂ. 15) ತಿರುಳ್ಗನ್ನಡ ಕನ್ನಡತಿಯರು - (ರೂ. 20), ಪುಟ್ಟ ಇಟ್ಟ ಹೆಜ್ಜೆ - (ರೂ. 25), ಚಿಲಿಪಿಲಿ - (ರೂ. 20), ಚಿಣ್ಣರ ಚಿಂವ್ ಚಿಂವ್ - (ರೂ. 15), ನಗುವ ಕಂದ - (ರೂ. 25), ನಲಿಯುವ ಚಿಣ್ಣರು ನಾವು - (ರೂ. 25), ದೈಹಿಕ ಶಿಕ್ಷಣ ಮಾರ್ಗಸೂಚಿ - (ರೂ. 25), ಮಕ್ಕಳಿಗಾಗಿ ನೂರಾರು ಮೋಜಿನ ಪ್ರಶ್ನೆಗಳು - (ರೂ. 8)**

ತಯಾರಿಸಿದ ಗೂಡಿನ ಮಣ್ಣು, ಇವು ಆಯಾ ಕ್ರಿಮಿಗಳ ಜೊಲ್ಲು ರಸವೋ ಅಥವಾ ಜಠರ ರಸವೋ ಮುಂತಾದವುಗಳ ಜೊತೆ ಸೇರಿ, ಕಲ್ಲುಗಳೇ ಇಲ್ಲದ ಅವುಗಳದ್ದೇ ಆದ ಬಣ್ಣ ಹೊಂದಿರುತ್ತವೆ. ನೋಟಕ್ಕೆ ತಂಪಾಗಿಯೂ ಇರುತ್ತವೆ. ಉತ್ತರ ಕನ್ನಡ ಜಿಲ್ಲೆಯ ಸಿದ್ಧಾಪುರ ತಾಲ್ಲೂಕಿನ ಭುವನಗಿರಿ ದೇವಾಲಯದ ಸಮೀಪ ಗುಡ್ಡದಲ್ಲಿ ಅರಿಶಿಣ ಬಣ್ಣದ ಮಣ್ಣು ಸಿಗುತ್ತದೆ. ಸ್ಥಳೀಯ ಜನರೂ ಕೂಡ, ಮನೆಯ ಗೋಡೆಗಳಿಗೆ ಈ ಬಣ್ಣ ಬಳಸುತ್ತಾರೆ. ಈ ಹಳದಿಗೂ ಅಡಿಕೆ ತೋಟದಲ್ಲಿ ಸಿಗುವ ಹಳದಿಗೂ ಗಮನಾರ್ಹ ವ್ಯತ್ಯಾಸಗಳಿವೆ.

**ನಮ್ಮ ಓಟ ಎತ್ತ ಕಡೆ...?**

ಬೆಳಗ್ಗೆ ಎದ್ದು ಮನೆ ಮುಂದೆ ಸಾರಿಸಿ ರಂಗೋಲಿ ಹಾಕುವುದರಿಂದ ಮಣ್ಣು, ಸಗಣಿ, ಚಿತ್ರಕಲೆಗಳ ಸಂಬಂಧ ಪ್ರಾರಂಭವಾಗುತ್ತದೆ. ಸುಗ್ಗಿ ಕಾಲದಲ್ಲಿ ನೃತ್ಯ, ನಾಟಕ, ಕೋಲಾಟಗಳ ಮೂಲಕ ದೃಶ್ಯಕಲೆಗೂ ಮುಂದುವರೆದು ಸಂತೋಷ ಹೀಗೆ ತಣಿಯುತ್ತದೆ. ಆದರೆ ಇವತ್ತು ಈ ಕ್ರಮಗಳು ಏನಾಗುತ್ತಿವೆ ?

ಸಮೃದ್ಧವಾಗಿದ್ದ ಕಾಡು ಕಡಿದಿದ್ದೇವೆ. ಹೆಚ್ಚು ಬೆಳೆ ತೆಗೆದು ಹಣವಂತರಾಗಬೇಕೆಂದು ರಾಸಾಯನಿಕ ಗೊಬ್ಬರ ಬಳಸಿ ಮಣ್ಣಿನ ಮೂಲ ಗುಣಗಳನ್ನೇ ಹಾಳು ಮಾಡಿದ್ದೇವೆ. ಮಡಿಕೆ, ಮರಗಳ ಬದಲು ಪ್ಲಾಸ್ಟಿಕ್ ಬಳಕೆ ಅತಿಯಾಗಿದೆ. ದೊಡ್ಡ ದೊಡ್ಡ ಕೈಗಾರಿಕೆ ಮಾಡ ಹೊರಟು ವಾಯುಮಂಡಲ, ನದಿಗಳು ರಾಸಾಯನಿಕಗಳಿಂದ ಕಲುಷಿತಗೊಂಡಿವೆ. ಹಳ್ಳಿಯ ಯುವಕರು ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ಹಳ್ಳಿಯಲ್ಲಿ ವಾಸಿಸುವ ಜನರೂ ಸಿಮೆಂಟು, ಗ್ರಾನೈಟು, ನಕಲಿ ಕಲ್ಲುಗಳು, ಪ್ಲಾಸ್ಟಿಕ್‌ನ ಪೀಠೋಪಕರಣಗಳು, ಆಟಿಕೆಗಳು ಮುಂತಾದ ಬಳಕೆಯಿಂದ ಮಣ್ಣಿನಿಂದ ಮಾನಸಿಕವಾಗಿ ದೂರವಾಗುತ್ತಿದ್ದಾರೆ. ದೇಸೀ ಚಿಂತನೆಗಳನ್ನು ಮರೆಯುತ್ತಿದ್ದಾರೆ.



**ವಿಜ್ಞಾನ ಅಂದರೇನು ?**

ನಾವೆಲ್ಲಾ ವಿಜ್ಞಾನ ಅಂದರೆ ಏನೆಂದುಕೊಂಡಿದ್ದೇವೆ ? ವಿಜ್ಞಾನವೆಂದಾಗ – ಪ್ರಯೋಗಾಲಯ, ರಾಸಾಯನಿಕ ಅಣು, ಪರಮಾಣು, ರಾಕೆಟ್, ಉಪಗ್ರಹ ಇಂಥವುಗಳೇ ನೆನಪಿಗೆ ಬರುವುದು ! ಈ ಭೂಮಿ ಮೇಲೆ ಆರಾಮವಾಗಿ ಬದುಕಲು ಗಾಳಿ, ನೀರು, ಆಹಾರ ಇವೆಲ್ಲಾ ಸರಿ ಇರಬೇಡವೇ ? ರಾಸಾಯನಿಕ ಗೊಬ್ಬರಗಳನ್ನು ಬಳಸಿ ಬೆಳೆದ ಬೆಳೆಯಿಂದ ತಯಾರಾಗುವ ಆಹಾರ ಪದಾರ್ಥಗಳು ಮನುಷ್ಯನ ಆರೋಗ್ಯದ ಮೇಲೆ ದುಷ್ಪರಿಣಾಮ ಮಾಡುತ್ತಿರುವುದು ತಿಳಿಯುತ್ತಿದೆ. ಇವತ್ತು ನಾವೆಣಿಸುವ ಎಲ್ಲಾ ಪ್ರಗತಿಕಾರ್ಯಗಳಲ್ಲೂ ವ್ಯಾಪಕವಾಗಿ ಪರಿಸರಕ್ಕೆ ಹಾನಿಯಾಗುತ್ತಿದೆ. ಇದರಿಂದ ನಮ್ಮ ಬದುಕಿಗೆ ತೊಂದರೆಯಾಗುತ್ತಿದೆ. ಈಗೀಗ ಇವೆಲ್ಲವೂ ನಮ್ಮ ಅನುಭವಕ್ಕೂ ಬಂದಿವೆ. ಮನುಷ್ಯನ ಬದುಕಿನ ಪ್ರಗತಿಗೆ ಸಹಕರಿಸುವ ಜ್ಞಾನ ವಿಜ್ಞಾನವೇ ಹೊರತು, ತೊಂದರೆ ಉಂಟುಮಾಡುವುದು ವಿಜ್ಞಾನ ಹೇಗಾದೀತು ?

ಎರಡು, ಮೂರು ವರ್ಷಗಳವರೆಗೆ ಕೆಡದಂತೆ ಅಜ್ಜಿ ಮಾಡುತ್ತಿದ್ದ ಉಪ್ಪಿನಕಾಯಿ ರಚನೆಯ ಹಿಂದೆ ವಿಜ್ಞಾನವಿಲ್ಲವೇ ? ಸ್ವಾತಿ ಮಳೆಗೆ ಹೊಸಮಜ್ಜಿಗೆ ಮಾಡಬೇಕೆಂಬ ಶಾಸ್ತ್ರದಲ್ಲಿ ವಿಜ್ಞಾನವಿಲ್ಲವೇ ? ಗ್ರಾಮೀಣ ಚಿತ್ರಕಾರರು ಪರಿಸರದಿಂದಲೇ ಬಣ್ಣ ಕಂಡುಕೊಂಡಿದ್ದು ವಿಜ್ಞಾನವಲ್ಲವೇ ? ಗ್ರಹಣಗಳು ಇಂಥಾ ದಿನಕ್ಕೆ ಇಂಥಾ ಹೊತ್ತಿಗೇ ಆಗುತ್ತವೆ ಎಂದು ಲೆಕ್ಕಾಚಾರದ ಮೂಲಕ ಕರಾರುವಾಕ್ಕು ಹೇಳುವುದು ನಮ್ಮ ಖಗೋಳ ವಿಜ್ಞಾನವಲ್ಲವೇ ? – ಹೀಗೆ ನಾವು ಆಚರಿಸುವ ಸಂಪ್ರದಾಯಗಳಲ್ಲಿ, ಪದ್ಧತಿಗಳಲ್ಲಿ ಹೆಜ್ಜೆ ಹೆಜ್ಜೆಗೆ ವಿಜ್ಞಾನವಿದೆ.

ಹರಪ್ಪ-ಮೊಹೆಂಜೆದಾರೋ ನಾಗರಿಕತೆಗಳು ಮಣ್ಣಿನಿಂದಲೇ ಕಟ್ಟಲ್ಪಟ್ಟವು. ಮಡಿಕೆಗಳು, ಮಣ್ಣಿನ ಆಭರಣಗಳು, ಮಣ್ಣಿನ ಸ್ಲೇಟುಗಳು ಎಲ್ಲವನ್ನೂ ನಾವಲ್ಲಿ ಕಾಣಬಹುದು. ಈಗ ನಾವು ಹೇಳುತ್ತಿರುವ ಪೊಳ್ಳು ಆಧುನಿಕತೆ ಎಂಬುದು ನಾವು ದೇಸೀ ಚಿಂತನೆಯನ್ನು ಮರೆಯುವಂತೆ ಮಾಡಿದೆ. ಕೈಗಾರಿಕೀಕರಣ, ಜಾಗತೀಕರಣಗಳು ನಮ್ಮನ್ನು ಹೊಟ್ಟೆಬಾಕರಂತೆ ಎಲ್ಲವನ್ನು ಕೊಂಡು ಬಾಚಿಕೊಳ್ಳುವಂತಹ ವ್ಯಕ್ತಿಗಳನ್ನಾಗಿ ರೂಪಿಸಿವೆ. ಬೆಳಗ್ಗೆ ಹಲ್ಲುಜ್ಜುವ ಬ್ರಷ್‌ಗಳಿಂದ ಪ್ರಾರಂಭವಾಗುವ ಈ ಪಟ್ಟಿ, ಪ್ಲಾಸ್ಟಿಕ್ ವಸ್ತುಗಳು, ಹಣೆಗೆ ಅಂಟಿಸುವ ಟಿಕಲಿ, ಬಾಗಿಲಿಗೆ ಹಚ್ಚುವ ರಂಗೋಲಿ ಸ್ಟಿಕ್ಕರ್, ಸಿಮೆಂಟು, ಕಬ್ಬಿಣ, ಡಿಸ್ಟೆಂಪರು, ರಾಸಾಯನಿಕ ಗೊಬ್ಬರ – ಹೀಗೆ ಸ್ವಾವಲಂಬಿ ಜೀವನಕ್ಕೆ ವಿರುದ್ಧವಾದ ವಸ್ತುಗಳನ್ನೇ ಕೊಳ್ಳುವಂತೆ ಮಾಡಿ ಮಾರುಕಟ್ಟೆಯ ಹಿಡಿತದಲ್ಲೇ ನಾವು ಇರುವಂತೆ ನೋಡಿಕೊಳ್ಳುತ್ತಿವೆ.

ರೈತರು ಹೆಚ್ಚು ಬೆಳೆ ತೆಗೆದು ಹಣ ಗಳಿಸುವ ಆಸೆಯಿಂದಲೇ ರಾಸಾಯನಿಕ ಗೊಬ್ಬರ ಬಳಸಿದೆವು. ಈಗ ಉಣ್ಣುವ ಆಹಾರವೇ ವಿಷವಾಗಿ ನಮ್ಮ ಪ್ರಗತಿ ನಮ್ಮನ್ನೇ ಅಣಕಿಸುತ್ತಿದೆ. ಚಿನ್ನ ಬೆಳ್ಳಿಯ ಬಗೆಗೆ ಅಪಾರ ಮೋಹ, ಕಬ್ಬಿಣ ಮತ್ತಿತರ ಲೋಹಗಳ ಅತಿ ಉಪಯೋಗ ಮಾಡುತ್ತಿರುವ ನಾವು ಗಣಿಗಾರಿಕೆಯನ್ನು ವಿರೋಧಿಸುವುದಾದರೂ ಹೇಗೆ ? ಗಣಿಗಾರಿಕೆ ವಿರೋಧಿಸಲು ನಮಗೆ ಯಾವ ನೈತಿಕತೆ ಇದೆ ?

ಈ ಹಿನ್ನೆಲೆಯಲ್ಲಿ ನಮ್ಮ ಸಂಸ್ಕೃತಿಯ ಅವಲೋಕನ ಆಗಬೇಕಿದೆ. ನಮ್ಮ ಸಂಪ್ರದಾಯದಲ್ಲಿ, ಜೀವನ ಕ್ರಮದಲ್ಲಿ ಅನೇಕ ವೈಜ್ಞಾನಿಕ ಅಂಶಗಳಿವೆ. ಇದು ಜೀವವಿಕಾಸ ವಿಜ್ಞಾನ. ಇದರಲ್ಲೇ ಅಡಗಿರುವ ಚಿತ್ರಕಲೆಯಲ್ಲೂ ದೇಸೀ ಕ್ರಮಗಳಿವೆ. ಇವನ್ನು ನಾವೀಗ ಅಭಿವೃದ್ಧಿಪಡಿಸಬೇಕಾಗಿದೆ.

**ಬಂದಗದ್ದೆ ರಾಧಾಕೃಷ್ಣ**
ಕೆಳದಿ - ೫೭೭ ೪೦೧, ಸಾಗರ ತಾಲೂಕು, ಶಿವಮೊಗ್ಗ ಜಿಲ್ಲೆ

*೩೬ನೇ ಪುಟದಿಂದ*

ಹಳೆಯ ವರ್ಷದ ನಿರ್ಗಮನ ಹಾಗೂ ಹೊಸ ವರ್ಷದ ಆಗಮನದ ಒಂದು ಪರ್ವಕಾಲದಲ್ಲಿ ಈ ಸುನಾಮಿ ಭೀಕರತೆ ಉಂಟಾಯಿತು. ನಿಸರ್ಗವನ್ನು ನಿರ್ಲಕ್ಷಿಸಿ ಸಾಧ್ಯವಾದಷ್ಟು ಬಾಚಿಕೊಳ್ಳುತ್ತಾ ದೋಚುತ್ತಾ ಬದುಕುತ್ತಿರುವ ನಮಗೆ ಒಂದು ಚಿಕ್ಕ ಶಾಕ್ ಕೊಡುವ ಕೆಲಸ ನಿಸರ್ಗ ಮಾಡುತ್ತಲೇ ಇದೆ. ಮನುಷ್ಯನಿಗೆ ಯಾವತ್ತಿಗೂ ಯಾವುದೂ ಸಾಲುವುದಿಲ್ಲ. ನಿಸರ್ಗ ಅವನಿಗಾಗಿ ನೀಡದಿದ್ದರೂ ತನಗಾಗಿಯೇ ಎಂದು ಕಲ್ಲು, ಮಣ್ಣು, ನೀರು, ಗಿಡ, ಮರ, ವನ್ಯಜೀವಿ ಮುಂತಾದವುಗಳನ್ನು ತನ್ನ ಭೌತಿಕ ಸಾಧನೆಗಾಗಿ ಬಳಸಿಕೊಳ್ಳುವ ಈತ, ಪ್ರತಿಯಾಗಿ ನಿಸರ್ಗಕ್ಕೆ ಕೊಡುವುದು ತುಂಬಾ ಕಡಿಮೆ. ಇಂಥಾ ಕೃತಘ್ನತೆಗೆ ಪಾಠ ಕಲಿಸಲೆಂದೇ ನಿಸರ್ಗ ಹೀಗೆ ಪ್ರಕೋಪಗಳ ರೂಪದಲ್ಲಿ ಪರಿಚಯ ವಾಗುತ್ತದೇನೋ ಎನಿಸುತ್ತದೆ.

ನಮ್ಮಲ್ಲಿ ಇಂದಿಗೂ ಪರಿಸರದ ಬಗ್ಗೆ ಕಾಳಜಿಯಿರುವವರು ತುಂಬಾ ಕಡಿಮೆ. ಭೌಗೋಳಿಕ ಹಾಗೂ ಸಾಮಾಜಿಕ ಪರಿಸರಗಳೆರಡೂ ಸಾಕಷ್ಟು ಕಲುಷಿತವಾಗಿವೆ. ಹೀಗಿರುವಾಗಲೂ ಮಳೆ ಸರಿಯಾಗಿ ಬಾರದಿದ್ದರೆ ಕತ್ತೆಗಳನ್ನು ಹುಡುಕುವ ಬುದ್ಧಿವಂತರಿಗೆ ಕೊರತೆಯಿಲ್ಲ. ಇಂಥಾ ನೈಸರ್ಗಿಕ ಗಂಡಾಂತರಗಳು ಸಂಭವಿಸಿದಾಗಲಾದರೂ ಮನುಷ್ಯ ನಿಸರ್ಗದ ಬಗ್ಗೆ ಯೋಚಿಸಲಾರ. ನಿಸರ್ಗದಿಂದಾಗಿ ಉಂಟಾದ ಆಘಾತವನ್ನು ಸರಿಪಡಿಸುವ ನಿಟ್ಟಿನಲ್ಲಿರುವ ಒಟ್ಟು ಗಮನದ ಪೈಕಿ ಸ್ವಲ್ಪವಾದರೂ ನಿಸರ್ಗ ಯಾಕೆ ಹೀಗೆ ಮುನಿಸಿಕೊಳ್ಳುತ್ತದೆ ಎಂಬುದರ ಬಗ್ಗೆ ತಜ್ಞರಿಂದ ಮಾಹಿತಿ ನೀಡುವುದು ಮಾತ್ರವಲ್ಲದೇ ನಿಸರ್ಗವನ್ನು ಪ್ರತಿಯೊಬ್ಬನೂ ಪ್ರೀತಿಸುವ, ಗೌರವಿಸುವ, ಆರಾಧಿಸುವ ಗುಣ ಬೆಳೆಸಿಕೊಳ್ಳುವ ಜರೂರತ್ತಿದೆ. 'ಈ ರೀತಿ ಸಮುದ್ರದ ಹೊಟ್ಟೆಯಲ್ಲಿ ಭೂಕಂಪವಾಗುವುದು ನಾವು ಕೇಳಿರಲೇ ಇಲ್ಲ' ಎಂಬ ಧ್ವನಿಗಳೇ ಹೆಚ್ಚಾಗಿವೆ. ಆ ದಿಶೆಯಲ್ಲಿ ಸೂಕ್ತಮಾರ್ಗದರ್ಶನ, ಅರಿವು ಅವಶ್ಯ.

**ಎಸ್. ಬಿ. ಜೋಗುರ**
ಸಮಾಜಶಾಸ್ತ್ರದ ಉಪನ್ಯಾಸಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು, ಹಿರೇಕೆರೂರು

# ನಕ್ಸಲೀಯರ ಪ್ರಶ್ನೆಯೋ, ಗಿರಿಜನರ ದಮನವೋ ?

**ಪ**ಶ್ಚಿಮ ಘಟ್ಟ ಅರಣ್ಯ ಪ್ರದೇಶದಲ್ಲಿ ದನಿಯಿಲ್ಲದ ಜನರಿಗೆ ದನಿಯಾಗುತ್ತಿದ್ದ ಸಾಕೇತ ರಾಜನ್ ಭೂಗತಲೋಕದ ಪಾತ್ರವನ್ನು ನಿರ್ವಹಿಸಿ ಕಡೆಗೆ 'ತಲೆದಂಡ' ಕೊಟ್ಟು (೬-೨-೨೦೦೫) ಕಾಡ ಹೆಣವಾಗಿ ಹೋದ ನಂತರದ ರಾಜ್ಯ ರಾಜಕೀಯ ವಿದ್ಯಮಾನಗಳನ್ನು ಪರ್ಯಾಲೋಚಿಸಬೇಕಾಗಿದೆ. ಆತ ಯಾರ ಉದ್ಧಾರಕ್ಕಾಗಿ ಶ್ರಮಿಸಿದನೋ ಆ ಉದ್ದೇಶ ವಿಫಲವಾಗುವ ಸೂಚನೆಗಳೇ ಎದ್ದು ಕಾಣುತ್ತಿವೆ.

ಮೆಣಸಿನಹಾಡ್ಯ ಎನ್‌ಕೌಂಟರ್ ತರುವಾಯ ಆದಿವಾಸಿ ಗಿರಿಜನರ ಪಾಡು ಬಾಣಲೆಯಿಂದ ಬೆಂಕಿಗೆ ಬಿದ್ದಂತಾಗಿದೆ. ಭಯದ ನೆರಳಿನಲ್ಲಿಯೇ ಅವರು ಯಾವತ್ತೂ ಬದುಕಬೇಕಾಗಿದೆ. ಇದು ವಿಭಾಗಾಧಿಕಾರಿ ಮೋಹನ್‌ಕುಮಾರ್ ಸಾಸನೂರ್ ಅವರು ಮೆಣಸಿನಹಾಡ್ಯದಲ್ಲಿ ನಡೆಸಿದ ವಿಚಾರಣೆ (೨-೩-೨೦೦೫)ಯ ಹಾಗೂ ಕಳಸ ಠಾಣೆಗೆ ಹೋಗಿ ಸಹಿ ಹಾಕಿ ಬರುತ್ತಿರುವ ಈದು ಎನ್‌ಕೌಂಟರಿನಲ್ಲಿ ಬದುಕಿ ಉಳಿದಿರುವ ಯಶೋಧಳ ಪ್ರತಿಕ್ರಿಯೆಗಳಿಂದ ವ್ಯಕ್ತವಾಗುತ್ತಿದೆ.

ರಾಜ್ಯ ಅಭಿವೃದ್ಧಿ ಕಮೀಶನರ್ ಚಿರಂಜೀವಿ ಸಿಂಗ್ ಅವರ ಹೇಳಿಕೆಗಳೂ ಅರಣ್ಯವಾಸಿಗಳ ಭವಿಷ್ಯದ ಬದುಕಿಗೆ ದಿಕ್ಸೂಚಿಗಳಂತಿವೆ. ಅವರಿಗೆ ಅರವತ್ತು ಕೋಟಿ ಅಥವಾ ಈಗಿನ ಇಪ್ಪತ್ತು ಕೋಟಿ ಮುಂತಾದ ವಿಶೇಷ ಪ್ಯಾಕೇಜ್ ಯಾವುದೂ ಇಲ್ಲ, ಮಲೆನಾಡಿನ ಅಭಿವೃದ್ಧಿಗಾಗಿ ಕೇಂದ್ರಕ್ಕೆ ಮನವಿ ಸಲ್ಲಿಸಲಾಗಿದೆ. ಆದರೆ ಸದ್ಯಕ್ಕೆ 'ಬಲವಂತವಾಗಿ ಯಾರನ್ನೂ ಒಕ್ಕಲೆಬ್ಬಿಸುವುದಿಲ್ಲ' (೧೪-೩-೨೦೦೫) ಎಂದಿದ್ದಾರೆ ಸಿಂಗ್. ಇದೂ ಹಳೆಯ ರಾಗವೇ ಆಗಿದೆ. ಈ ಅರಣ್ಯವಾಸಿಗಳು ಇದುವರೆಗೂ ತಮಗೆ 'ಅದಿಲ್ಲ ಇದಿಲ್ಲ' ಎಂದು ನಾಗರಿಕ ಸೌಲಭ್ಯಗಳಿಗೆ ಕೊರಗಿದವರಲ್ಲ. ಕಾಡನ್ನು ಅವಲಂಬಿಸಿ ಹೇಗೋ ಬದುಕು ಸಾಗಿಸುತ್ತಿದ್ದರು. ಆದರೆ ಈಗ ಅದಕ್ಕೂ ನಿರ್ಬಂಧ ಹೇರಲಾಗುತ್ತಿದೆ. ಕಾಡಿನ ಉತ್ಪನ್ನಗಳನ್ನು ಮುಟ್ಟಿದರೆ ಅರಣ್ಯ ಅಧಿಕಾರಿಗಳು ಕೇಸು ಜಡಿಯುತ್ತಾರೆ; ''ಊರು ಬಿಟ್ಟು ತೊಲಗಿ'' ಎಂದು ಗದರಿಸುತ್ತಿದ್ದಾರೆ. ಇದಕ್ಕೂ ಹೆಚ್ಚಾದ ಕಿರುಕುಳವೆಂದರೆ ಪೊಲೀಸರು ಬಂದು ನಕ್ಸಲರ ಬಗ್ಗೆ ಕೇಳುತ್ತಾರೆ; ನಕ್ಸಲರು ಬಂದು ''ಭಯ ಬೇಡ, ನಿಮ್ಮ ಉದ್ಧಾರಕ್ಕಾಗಿ ಇದ್ದೇವೆ, ಅನ್ನ ನೀರು ಕೊಡಿ'' ಎಂದು ಗೋಗರೆಯುತ್ತಾರೆ. ಒಟ್ಟಾರೆ ಬಲಿಗೇ ಗುಡ್ಡದ ಘಟನೆಯ ನಂತರ ಅರಣ್ಯವಾಸಿಗಳ ಬದುಕು ಇನ್ನಷ್ಟು ಅತಂತ್ರವಾಗಿ ''ಅತ್ತ ದರಿ-ಇತ್ತ ಪುಲಿ'' ಎಂಬಂತಾಗಿದೆ.

ಲೂಟಿಕೋರ ನವ ಸಾಮ್ರಾಜ್ಯ ಶಕ್ತಿಗಳು ಈಗ ಪಶ್ಚಿಮ ಘಟ್ಟ ವಲಯದಲ್ಲಿ ನಿರಾತಂಕ ಪ್ರವೇಶಿಸಲು ಅನುಕೂಲಕರ ವಾತಾವರಣ ಏರ್ಪಡುತ್ತಿದೆ. ಡಾಲರ್ ಆಮಿಷ ತೋರಿಸಿ ಇಲ್ಲಿ ದೊರೆಯುವ ಅಪರೂಪದ ಜೀವಾಣು ಜಾಲವನ್ನು ಅರಸಿ ಬರುವ ಬೈಯೋಟೆಕ್ ಕಂಪನಿಗಳೂ, ಗಿಡಮೂಲಿಕೆಗಳನ್ನು ಅರಸಿ ಬರುವ ಪರಿಸರ ವಾದೀ ವೈದ್ಯಕೀಯ ಕಂಪನಿಗಳೂ, ಪ್ರವಾಸಿಗರ ವೀಕ್ಷಣಾಲಯಗಳನ್ನು ನಿರ್ಮಿಸುವ ಕಾಂಟ್ರ್ಯಾಕ್ಟ್ ಕಂಪನಿಗಳೂ ಹಾಗೂ ರಿಸಾರ್ಟ್ ಹೋಟೆಲ್ ಉದ್ಯಮಿಗಳೂ ಕುದುರೆಮುಖ ನ್ಯಾಷನಲ್ ಪಾರ್ಕ್ ಪ್ರವೇಶಿಸಲು ತುದಿಗಾಲ ಮೇಲೆ ನಿಂತಂತಿದೆ.

ಸುಪ್ರೀಮ್ ಕೋರ್ಟ್ ಆದೇಶದ ಮೇರೆಗೆ ೨೦೦೫ರ ಡಿಸೆಂಬರ್‌ನಲ್ಲಿ ತನ್ನ ಗಣಿಗಾರಿಕೆಯನ್ನು ನಿಲ್ಲಿಸಬೇಕಾಗಿರುವ ಕುದುರೆಮುಖ ಕಂಪನಿಯು ''ಇನ್ನೂ ಅಧಿಕ ಆದಾಯವಿದೆ, ಮತ್ತೆ ಕೆಲವು ವರ್ಷಗಳವರೆಗೆ ಮುಂದುವರಿಸಿ'' ಎಂದು ಸರ್ಕಾರಕ್ಕೆ ಮನವಿ ಸಲ್ಲಿಸಿದೆ. ಅದಕ್ಕಾಗಿ ಸರ್ಕಾರ ಒಂದು ಸಮಿತಿಯನ್ನು ರಚಿಸಿದೆ. ಅದು ಕಂಪನಿ ಪರವಾಗಿಯೇ ವರದಿ ಕೊಡುವುದರಲ್ಲಿ ಅನುಮಾನವಿಲ್ಲ. ಹಾಗೇನಾದರೂ ಪರವಾನಗಿ ದೊರೆತಲ್ಲಿ ಈಗಾಗಲೇ ಹೂಳು ತುಂಬಿಹೋಗಿರುವ ನೇತ್ರಾವತಿ, ತುಂಗಾ, ಭದ್ರಾ ಜೀವನದಿಗಳು ಮುಂದೆ ಒಣಗಿಹೋಗುವ ಸಂಭವವುಂಟು. ಆಮೇಲೆ ಏಳೆಂಟು ಜಿಲ್ಲೆಗಳು ಜಲಕ್ಷಾಮಕ್ಕೆ ಈಡಾಗುತ್ತವೆ.

ಕುದುರೆಮುಖ ನ್ಯಾಷನಲ್ ಪಾರ್ಕನ್ನು ಊರ್ಜಿತಗೊಳಿಸುವ, ಆದಿವಾಸಿ ಗಿರಿಜನರನ್ನು ಅಲ್ಲಿಂದ ಎತ್ತಂಗಡಿ ಮಾಡುವ ಪ್ರಕ್ರಿಯೆಗೆ ಈಗ ಯಾವ ಅಡೆತಡೆಯೂ ಕಾಣುತ್ತಿಲ್ಲ. ಯಾಕೆಂದರೆ ಹಿಂದೆ ಟೊಂಕಕಟ್ಟಿ ದುಡಿದ ಕುದುರೆಮುಖ ವಿರೋಧಿ ಒಕ್ಕೂಟದಂತಹ ಸಂಘಟನೆಗಳು ಈಗ ದನಿ ಎತ್ತಿದರೆ ಪ್ರಭುತ್ವ ಶಕ್ತಿ ಸುಮ್ಮನೆ ಬಿಡಲಾರದು. ಆದ್ದರಿಂದ ಅವು ಈ ಅಘೋಷಿತ ತುರ್ತು ಪರಿಸ್ಥಿತಿಯಲ್ಲಿ ದನಿ ಕಳೆದುಕೊಂಡಂತೆ ಕಾಣುತ್ತಿವೆ. ಆದ್ದರಿಂದ ಶೋಷಕ ಭೂಮಾಲೀಕರ ಎದುರು ನಿಂತು ಪ್ರಶ್ನಿಸುವ ತರಬೇತಿಯಲ್ಲಿದ್ದ ಅರಣ್ಯವಾಸೀ ಜನರು ತ್ರಿಶಂಕು ಸ್ಥಿತಿಯಲ್ಲಿದ್ದಾರೆ. ಊಳಿಗಮಾನ್ಯ ಒಡೆಯರ ಪರವಾದ ವಿರೋಧಪಕ್ಷ ಬಿಜೆಪಿಯು ಆಳುವ ಸಮ್ಮಿಶ್ರ ಸರ್ಕಾರಕ್ಕಿಂತಲೂ ತೀವ್ರವಾಗಿ ಪ್ರತಿಕ್ರಿಯಿಸುತ್ತಿದೆ. ಬಾಬಾಬುಡನ್ ಗಿರಿ ವಿವಾದದಲ್ಲಿ ಆದ ಮುಖಭಂಗವನ್ನು ನಿವಾರಿಸಿಕೊಳ್ಳಲು ಅದು ಸಮಯ ಕಾಯುತ್ತಿದ್ದು ಈಗ ಅವಕಾಶ ದೊರಕಿಸಿಕೊಂಡಂತೆ ಕಾಣುತ್ತಿದೆ.

ಈ ಪ್ರಸಂಗದಲ್ಲಿ ಅನೇಕ ಅಪ್ರಜಾತಾಂತ್ರಿಕ ಚಟುವಟಿಕೆಗಳು ಜರುಗಿದವು. ಅವನ್ನೆಲ್ಲಾ ಇಲ್ಲಿ ಪಟ್ಟಿ ಮಾಡುವ ಅಗತ್ಯವಿಲ್ಲ. ಪ್ರಭುತ್ವ ಶಕ್ತಿಯನ್ನು ಚಲಾಯಿಸುವ ಒಂದೇ ಮಾರ್ಗದಿಂದ ನಕ್ಸಲೀಯ ಚಟುವಟಿಕೆಗಳನ್ನು ಕೊನೆಗಾಣಿಸಲಾಗದೆಂದು ಹೇಳಿ ಶಾಂತಿ ಪ್ರಕ್ರಿಯೆಗಾಗಿ ಮನವಿ ಸಲ್ಲಿಸಿದವರನ್ನೆಲ್ಲಾ ನಕ್ಸಲೀಯರು ಎಂಬ ರೀತಿಯಲ್ಲಿ ಚಿತ್ರಿಸಹೊರಟದ್ದು ಈಚಿನ ದಶಕದಲ್ಲಿ ನಡೆದ ದೊಡ್ಡ ವಿಪರ್ಯಾಸ ವೆನ್ನಬೇಕು. ಬಿಜೆಪಿ ಕಡೆಯವರು ಮಾಡಿದ ಇನ್ನೊಂದು ಆರೋಪ ತುಂಬಾ ಗಂಭೀರವಾದ್ದು. ''ವಿಶ್ವವಿದ್ಯಾಲಯಗಳು ನಕ್ಸಲರ ತರಬೇತಿ ಕೇಂದ್ರಗಳಾಗಿವೆ'' ಎಂದ ಇವರ ಆರೋಪಕ್ಕೆ ಪ್ರಾಧ್ಯಾಪಕ ವರ್ಗ ಚಕಿತಗೊಂಡಿತು. ಕೆಲವರು ಸಭೆ ಸೇರಿ ''ನಾವು ನಕ್ಸಲರ ಪರ ಅಲ್ಲ, ಹಿಂಸೆಯನ್ನು ವಿರೋಧಿಸುತ್ತೇವೆ'' ಎಂದು ಹೇಳಿಕೆಯಿತ್ತರು. ಈ ಸಂಬಂಧವಾಗಿ ಶಿಕ್ಷಣ ಮಂತ್ರಿ ಶ್ರೀ ಡಿ. ಮಂಜುನಾಥ ಸಹ ಆರೋಪವನ್ನು ಅಲ್ಲಗಳೆದು ಹೇಳಿಕೆ ನೀಡಿದರು. ಇಷ್ಟಾಗಿಯೂ ವಾರಪತ್ರಿಕೆಯೊಂದು ''ನಮ್ಮ ಬುದ್ಧಿಜೀವಿಗಳು ಎಂದು ಗಾಂಧಿವಾದಿಗಳಾದರು ?'' ಎಂಬುದಾಗಿ ಕುಹಕ ವಾಡುವುದನ್ನು ಬಿಡಲಿಲ್ಲ. ಕೆಲವು ಶಾಸಕರಾದರೂ ''ಹೀಗೆ ಬುದ್ಧಿಜೀವಿ ಅಧ್ಯಾಪಕರ ಬಗ್ಗೆ ಹಗುರ ಮಾತನಾಡುವುದು ಸಲ್ಲದು'' ಎಂದು ಎಚ್ಚರಿಸಿದ್ದು ಪ್ರಜಾತಂತ್ರದಲ್ಲಿ ನಂಬಿಕೆ ಬರುವ ಮಾತಾಗಿತ್ತು.

**ಪ್ರೊ॥ ಶಿವರಾಮಯ್ಯ**
ನಂ. ೧೭೨, ಐಸೆಕ್ ರೋಡ್, ಟೀಚರ್ಸ್ ಕಾಲೋನಿ, ನಾಗರಬಾವಿ,
ಬೆಂಗಳೂರು - ೫೬೦ ೦೭೨

## ನಿದ್ರೆ ಮತ್ತು ಹಸಿವು

**ನಾ**ನು ನಿದ್ರಿಸುತ್ತಿದ್ದೇನೆ
ನನ್ನ ಮೌನದೊಂದಿಗೆ
ಗಡಿಯಾರದ ಮುಳ್ಳುಗಳು
ಸಮಯ ಕಳೆಯುತ್ತಿವೆ

ನನ್ನ ಕನಸುಗಳೊಂದಿಗೆ
ಇರುಳು ಗೋರಿಯಾಗುತಿದೆ,
ನೆನಪಿನೊಂದಿಗೆ ನೆರಳು
ಸರಸವಾಡುತಿದೆ

ನನ್ನ ವಾಸ್ತವದಲಿ
ಇರುವೆ ಗೆದ್ದಲುಗಳು
ಗೂಡ ಕಟ್ಟುತಿವೆ

ನಾನು ನಿದ್ರಿಸುತ್ತಿರುವಂತೆಯೇ
ನನ್ನ ಉಸಿರಿನೊಂದಿಗೆ
ಹಸಿವು ಸಹಾ
ಒಂದು ಪ್ರಶ್ನೆಯಾಗುತಿದೆ

ಇರುಳು ಉರುಳುವ ಮೊದಲು
ನೆರಳು ಕರಗುವ ಮೊದಲು
ನಾನು ಎಚ್ಚೆತ್ತುಕೊಳ್ಳಬೇಕು
ನನ್ನ ಹಸಿವಿಗೆ ಉತ್ತರಿಸಬೇಕು.

**ಗಣೇಶ ಹೊಸ್ಮನೆ**
ಜಾನ್ಮನೆ-೫೮೧ ೩೧೫, ಶಿರಸಿ (ಉತ್ತರ ಕನ್ನಡ)



# ಕಾಗೆಯ ಹಸ್ತಕ್ಷೇಪ

**ಮೇ** ತಿಂಗಳಿನ ಬೂದು ಬಣ್ಣದ ಆಕಾಶ ಸಂಜೆಯಾದೊಡನೆ ಕಪ್ಪಾಗುತ್ತದೆಯಷ್ಟೇ. ನೀಲಿಯಾಗುವುದಿಲ್ಲ. ತೆಳ್ಳನೆಯ ಮೋಡ ಇರುವುದರಿಂದ ನಕ್ಷತ್ರಗಳೇ ಇಲ್ಲವೇನೋ ಎನ್ನಿಸಬಹುದು. ಆದರೆ ವಾಸ್ತವವಾಗಿಯೂ ಆಕಾಶದಲ್ಲಿ ಅದರಲ್ಲೂ ನೆತ್ತಿಯಲ್ಲಿ ಆ ನಕ್ಷತ್ರಗಳೇ ವಿರಳವಾಗಿರುತ್ತವೆ. ನೆತ್ತಿಯ ಮೇಲೆ ಕಂಗೊಳಿಸುವ ಸಿಂಹರಾಶಿಯಲ್ಲಿಯ ಮಘ ನಕ್ಷತ್ರವೊಂದೇ ಮೋಡವಿದ್ದರೂ ಕಾಣುವಷ್ಟು ಪ್ರಕಾಶಮಾನವಾದ ನಕ್ಷತ್ರ. ನೆತ್ತಿಯಿಂದ ಪಶ್ಚಿಮದತ್ತ ದೃಷ್ಟಿ ಹಾಯಿಸಿದಾಗ ಪುನರ್ವಸುಗಳು ಮತ್ತು ಶನಿ ಕಾಣುತ್ತವೆ. ಮಹಾವ್ಯಾಧ ಕ್ಷೀಣವಾಗಿ ಕಾಣುತ್ತದೆ. ನೆತ್ತಿಯಿಂದ ಸ್ವಲ್ಪ ಪೂರ್ವಕ್ಕೆ ಕಾಣುವ ಪ್ರಕಾಶಮಾನವಾದ ಚುಕ್ಕೆಯೇ ಗುರುಗ್ರಹ. ಮೇ ೧೯ರಂದು ಚಂದ್ರ ಈ ಚುಕ್ಕೆಯ ಪಕ್ಕವೇ ಕಾಣುತ್ತದೆ ಎಂಬ ಅಂಶದಿಂದ ಇದು ಗುರುಗ್ರಹ ಎಂಬುದನ್ನು ಖಚಿತಪಡಿಸಿಕೊಳ್ಳಬಹುದು. ಅನತಿ ದೂರದಲ್ಲೇ ಇರುವ ನೀಲಿ ನಕ್ಷತ್ರ ಚಿತ್ರಾ. ಚಿತ್ರಾದಿಂದ ದಕ್ಷಿಣಕ್ಕೆ ಕಣ್ಣು ಹೊರಳಿಸಿದರೆ ಕಾಣುವ ಅಡ್ಡಾದಿಡ್ಡಿ ಚೌಕವೊಂದು ಕಣ್ಣಿಗೆ ಬೀಳುತ್ತದೆ. ಅಂಗೈಯಂತೆ ಕಾಣುವ ಈ ಸಣ್ಣ ಪುಂಜಕ್ಕೆ ಹಸ್ತಾ ಎಂಬ ಹೆಸರು ಅನ್ವರ್ಥವಾಗಿದೆ. ಇಲ್ಲಿ ಕಾಗೆಯನ್ನು ಗುರ್ತಿಸಿಕೊಂಡ ಯೂರೋಪಿಯನ್ನರು ಕಾರ್ವಸ್ ಎಂದು ಕರೆದರು. ಈ ಕಾಗೆಯ ಹಸ್ತಕ್ಷೇಪದ ಹೊರತಾಗಿ ಆ ಭಾಗ ಖಾಲಿ ಎನ್ನಬಹುದು.




ಗುರು ಗ್ರಹದ ಸಮೀಪವೇ ಇನ್ನೊಂದು ಕ್ಷೀಣ ನಕ್ಷತ್ರವಿದೆ. ಇದಕ್ಕೆ ಪೊರಿಮಾ ಎಂಬ ಹೆಸರಿದೆ. ಇಲ್ಲಿಂದ ಉತ್ತರಕ್ಕೆ ದೃಷ್ಟಿ ಹರಿಸಿದರೆ ಕೆಂಪು ಬಣ್ಣದ ಸ್ವಾತಿ ನಕ್ಷತ್ರ ಕಾಣುತ್ತದೆ. ಇನ್ನೂ ಉತ್ತರಕ್ಕೆ ದೃಷ್ಟಿ ಹಾಯಿಸಿದರೆ ಸಪ್ತರ್ಷಿಮಂಡಲ ಕಾಣುತ್ತದೆ. ದಕ್ಷಿಣದಲ್ಲಿ ಕಾಣುವ ಲುಬ್ಧಕ ಒಂದೆಡೆ. ಇನ್ನೊಂದೆಡೆಯಲ್ಲಿ ಸುಂದರ ಪುಂಜ ತ್ರಿಶಂಕು ಉದಯಿಸುತ್ತಿರುತ್ತದೆ. ಚಂದ್ರನ ಬೆಳಕು ಇಲ್ಲದಿದ್ದಾಗ ಆಕಾಶಗಂಗೆಯ ಹೊಳಪನ್ನಿಲ್ಲಿ ಕಾಣಬಹುದು.

ಒಟ್ಟಿನಲ್ಲಿ ಸಂಜೆಯ ಆಕಾಶದಲ್ಲಿ ಸಾರ್ವಭೌಮತ್ವ ಸಾಧಿಸಿರುವ ಚುಕ್ಕೆಗಳು – ಶನಿ ಮತ್ತು ಗುರು ಎನ್ನಬಹುದು. ತಿಂಗಳ ಕೊನೆಗೆ ಪಶ್ಚಿಮದಂಚಿನಲ್ಲಿ ಕೋರೈಸುವ ಶುಕ್ರಗ್ರಹ ಇವೆರಡನ್ನೂ ಮಂಕುಗೊಳಿಸಬಲ್ಲುದು. ಬೆಳಗಿನ ಜಾವ ಸುಮಾರು ೪ ಗಂಟೆಗೆ ಉದಯಿಸುವ ಮಂಗಳಗ್ರಹ ಕ್ಷೀಣ ನಕ್ಷತ್ರಗಳ ಹಿನ್ನೆಲೆಯಲ್ಲಿ ಸ್ಫುಟವಾಗಿ ಕಾಣುತ್ತದೆ. ಕುಂಭರಾಶಿಯ ಆಕಾರವನ್ನು ಕಲ್ಪಿಸಿಕೊಳ್ಳುವುದು ಸಾಧಾರಣವಾಗಿ ಕಷ್ಟ. ಈಗಲ್ಲಿ ಮಂಗಳ ಇರುವುದರಿಂದ ಕೆಲಸ ಹಗುರವಾಗುವುದು. ದೂರದರ್ಶಕ, ದುರ್ಬೀನು ಇರುವವರು ದಿನೇ ದಿನೇ ಮಂಗಳದ ಆಸುಪಾಸನ್ನು ಗಮನಿಸುತ್ತಾ ಬಂದಲ್ಲಿ ೧೪ರಂದು ಅದಕ್ಕಿಂತ ೧ಡಿಗ್ರಿ ದೂರದಲ್ಲಿ ಕಾಣುವ ಚುಕ್ಕೆಗಳೆರಡನ್ನು ಗುರುತಿಸಬಹುದು. ಒಂದು ಯುರೇನಸ್, ಇನ್ನೊಂದು ಶತಭಿಷ-ಲ್ಯಾಂಬ್ಡಾ ಅಕ್ವೇರಿಯಸ್ ಎಂಬ ನಕ್ಷತ್ರ. ೨ರಂದು ಮತ್ತು ೩೧ರಂದು ರೇಖಾಚಂದ್ರ ಮಂಗಳದ ಪಕ್ಕ ಹಾದುಹೋಗುವುದು. ೩೧ರಂದು ಅದು (ನಮ್ಮ ಹಗಲಿನಲ್ಲಿ) ಮಂಗಳವನ್ನೇ ಮುಚ್ಚಿಹಾಕುವುದು.

ಬರುವ ತಿಂಗಳುಗಳಲ್ಲಿ ಚಂದ್ರ ಜ್ಯೇಷ್ಠಾ ನಕ್ಷತ್ರವನ್ನು ಮರೆಮಾಡುವ ಆಚ್ಛಾದನೆ ಗಳಿವೆ. ಏಪ್ರಿಲ್ ತಿಂಗಳ ನಭಾವಲೋಕನದಲ್ಲಿ ಈ ಅಂಶ ಬಿಟ್ಟುಹೋದದ್ದಕ್ಕಾಗಿ ವಾಚಕರ ಕ್ಷಮೆ ಯಾಚಿಸುತ್ತೇನೆ.

ಬುಧಗ್ರಹವೂ ಬೆಳಗಿನ ಜಾವವೇ ಕಾಣುವುದು. ತಿಂಗಳ ಕೊನೆಗೆ ಕಾಣದಂತಾಗುವುದು.

ಹ್ಯಾಲೀ ಧೂಮಕೇತುವಿನ ತುಣುಕುಗಳು ಅಕ್ವಾರಿಡ್ಸ್ ಎಂಬ ಹೆಸರಿನ ಉಲ್ಕಾವೃಷ್ಟಿಯಾಗಿ ಸುರಿಯುವುವು. ನಾಲ್ಕರ ಬೆಳಗಿನ ಜಾವ ಗರಿಷ್ಠ.

ಹುಣ್ಣಿಮೆಯ ಚಂದ್ರ ಕ್ಷೀಣ ತುಲಾರಾಶಿಯಲ್ಲಿ ಕಾಣುತ್ತದೆ. ವಿಶಾಖಾ ನಕ್ಷತ್ರವೂ ಕ್ಷೀಣ. ಬೆಳುದಿಂಗಳಲ್ಲಿ ಕರಗಿಹೋಗುತ್ತದೆ. ಈ ತಿಂಗಳಿಗೆ ವೈಶಾಖಾ ಎಂಬ ಹೆಸರನ್ನೂ ಅದು ಒದಗಿಸಿದೆ.

### ಖಗೋಳ ದಿನಚರಿ

೧ ಚಾಂದ್ರಮಾಸದ ಕೊನೆಯಪಾದ (ಚಂದ್ರೋದಯ ನಡುರಾತ್ರಿಗೆ)

೨ ಚಂದ್ರ-ಮಂಗಳ ನಡುವೆ ಕನಿಷ್ಠಕೋನ *

೪ ಅಕ್ವಾರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ

೬ ಚಂದ್ರ-ಬುಧ ನಡುವೆ ಕನಿಷ್ಠಕೋನ *

೮ ಅಮಾವಾಸ್ಯೆ (೧೪:೧೩ಕ್ಕೆ)

೯ ಚಂದ್ರ-ಶುಕ್ರ ನಡುವೆ ಕನಿಷ್ಠ ಕೋನ

೧೩ ಚಂದ್ರ-ಶನಿ ನಡುವೆ ಕನಿಷ್ಠ ಕೋನ

೧೪ ಚಂದ್ರ-ಭೂಮಿ ನಡುವೆ ಗರಿಷ್ಠ ದೂರ

ಮಂಗಳ-ಯುರೇನಸ್ ನಡುವೆ ಕನಿಷ್ಠಕೋನ * (ಮಂಗಳ - ಯುರೇನಸ್ ಮತ್ತು ಶತಭಿಷ ನಕ್ಷತ್ರದ ಪುಟ್ಟ ತ್ರಿಕೋಣ ದುರ್ಬೀನುಗಳಿಗೆ ಕಾಣುತ್ತದೆ)

೧೬ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)

೧೯ ಚಂದ್ರ-ಗುರು ನಡುವೆ ಕನಿಷ್ಠಕೋನ * (ಆಚ್ಛಾದನೆ ನಮಗೆ ಕಾಣುವುದಿಲ್ಲ)

೨೪ ಹುಣ್ಣಿಮೆ (ಬೆಳಗಿನ ಜಾವ ೦೧:೧೮ಕ್ಕೆ)

೨೪ ಚಂದ್ರ-ಜ್ಯೇಷ್ಠಾ ನಡುವೆ ಕನಿಷ್ಠಕೋನ * (ಆಚ್ಛಾದನೆ ನಮಗೆ ಕಾಣುವುದಿಲ್ಲ)

೨೬ ಚಂದ್ರ-ಭೂಮಿ ನಡುವೆ ಕನಿಷ್ಠ ಅಂತರ

೩೦ ಚಂದ್ರ-ಯುರೇನಸ್ ನಡುವೆ ಕನಿಷ್ಠ ಕೋನ

ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)

೩೧ ಚಂದ್ರ-ಮಂಗಳ ನಡುವೆ ಕನಿಷ್ಠಕೋನ * (ಆಚ್ಛಾದನೆ ನಮಗೆ ಕಾಣುವುದಿಲ್ಲ)

*ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ


ಡಾ॥ ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

# ಪಾಪಯ್ಯ

ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ

**ರೋಮ್‌ನಲ್ಲಿ ಪೋಪ್ ಗತಿಸಿದ್ದಕ್ಕೂ ಈ ಪಾಪಯ್ಯನಿಗೂ ಯಾವ ಸಂಬಂಧವೂ ಇಲ್ಲವೆಂದು ತೋರುತ್ತದೆ. ತಾನು ಪಾಪನಿವಾರಕನೆಂದು ತಿಳಿಯುವ ಪೋಪನ ಪಾಪನಿವಾರಣೆ ಹೇಗೆ ? ಭಗವಂತನಿಂದ ಎನ್ನುತ್ತಾರೆ. ಹಾಗಾದರೆ ಇತರರಿಗೆ ಮಧ್ಯವರ್ತಿಗಳೇಕೆ ಬೇಕು ? ಪಾಪ-ಪುಣ್ಯದ ಜಿಜ್ಞಾಸೆ ಅನಾದಿಕಾಲದಿಂದ ನಡೆಯುತ್ತಾ ಬಂದಿದೆ. ಅದರ ಮುಂದುವರಿಕೆ ಇಲ್ಲಿದೆ.**

ಅಯ್ಯಾಸ್ವಾಮಿಗಳ ಬಗೆಗೆ ಆ ಪ್ರಾಂತ್ಯದ ಜನರಿಗೆಲ್ಲ ಅಪಾರ ಗೌರವ. ಅಧ್ಯಾತ್ಮ ವಿಚಾರಗಳಲ್ಲಂತೂ ಅವರು ತಮ್ಮ ಪರಮಾಪ್ತ ಗುರುಗಳೆಂದೇ ಜನ ಭಾವಿಸಿದ್ದರು. ಸ್ವಾಮಿಗಳು ವೇದವೇದಾಂತ ಧರ್ಮಶಾಸ್ತ್ರಗಳಲ್ಲಿ ಪ್ರಗಲ್ಭ ಪಂಡಿತರಾಗಿದ್ದು, ಪಾಪಪುಣ್ಯಗಳ ಅತಿ ಸೂಕ್ಷ್ಮ ವಿಚಾರಗಳನ್ನೂ ಜನರಿಗೆ ಅರ್ಥವಾಗುವಂತೆ ಬೋಧಿಸುತ್ತಿದ್ದರು. ಸ್ವರ್ಗ-ನರಕ, ಇಹಲೋಕ-ಪರಲೋಕಗಳ ಸಮಸ್ತ ವಿಚಾರಗಳು ಅವರಿಗೆ ಕರತಲಾಮಲಕವಾಗಿದ್ದವು.

ಅಯ್ಯಾಸ್ವಾಮಿಯವರ ವೃತ್ತಿಯೆಂದರೆ, ಆ ಪ್ರಾಂತ್ಯದ ಹಳ್ಳಿಹಳ್ಳಿಗಳಲ್ಲೂ ಸುತ್ತಾಡಿ ಜನರ ಪಾಪಕೃತ್ಯಗಳಿಗೆ ಪರಿಹಾರ ಸೂಚಿಸುವುದು; ದಾನಧರ್ಮಾದಿಗಳ ಮೂಲಕ ಪುಣ್ಯ ಸಂಪಾದನೆಯಲ್ಲಿ ನಿರತರಾಗುವಂತೆ ಜನರನ್ನು ಪ್ರೋತ್ಸಾಹಿಸುವುದು. ಅಯ್ಯಾಸ್ವಾಮಿಗಳ ಉಪದೇಶ ಕೇಳಲು ಜನರು ಬಿಡಿಬಿಡಿಯಾಗಿಯೂ, ಗುಂಪಾಗಿಯೂ ಬರುತ್ತಿದ್ದರು. ಅವರಿಂದ ಪಡೆದ ಉಪದೇಶಗಳಿಗೆ ಪ್ರತಿಯಾಗಿ ರೈತರು ತಾವು ಬೆಳೆದ ಕಾಳುಕಡ್ಡಿ ಕೊಟ್ಟರೆ, ಭೂಮಿಕಾಣೆ ಇಲ್ಲದವರು ಕೂಲಿ ಮಾಡಿ ಉಳಿಸಿದ್ದರಲ್ಲೆ ಅಯ್ಯಾಸ್ವಾಮಿಗಳಿಗೆ ಕಾಣಿಕೆ ಸಲ್ಲಿಸುತ್ತಿದ್ದರು. ಸುಗ್ಗಿಯ ಕಾಲದಲ್ಲಂತೂ ಅಯ್ಯಾಸ್ವಾಮಿಗಳ ಹಸಿಬೆಯ ಚೀಲ ದವಸ-ಧಾನ್ಯಗಳಿಂದ ತುಂಬಿ ತುಳುಕುತ್ತಿತ್ತು.

ಚಳಿಗಾಲದ ಒಂದು ಮಧ್ಯಾಹ್ನ ಅಯ್ಯಾಸ್ವಾಮಿಗಳು ಗುಡ್ಡಗಾಡಿನ ದಾರಿಯಲ್ಲಿ ನಡೆದು, ಒಂಟಿಯಾಗಿದ್ದ ತಮ್ಮ ಬಿಡಾರದ ಕಡೆ ಹೋಗುತ್ತಿರುವಾಗ ದಾರಿಬದಿಯ ಮೋರಿಯ ಸಮೀಪ ಯಾರೋ ನೋವಿನಿಂದ ನರಳುವ ಸದ್ದು ಕೇಳಿಸಿತು. ಅವರು ಅಲ್ಲಿಯೇ ನಿಂತು ಸದ್ದು ಬಂದ ಕಡೆ ದೃಷ್ಟಿ ಹಾಯಿಸಿದಾಗ ಹರಕು ಚಿಂದಿಯುಟ್ಟ ಒಬ್ಬ ಮೋರಿಯ ಪಕ್ಕ ಬಿದ್ದಿರುವುದು ಕಾಣಿಸಿತು. ಅವನ ತಲೆ, ಎದೆ ಮತ್ತು ಕೈಕಾಲುಗಳಿಂದ ರಕ್ತ ಒಸರುತ್ತಿತ್ತು. ಅತಿಯಾದ ನೋವಿನಿಂದ ಸಂಕಟಪಡುತ್ತಿದ್ದ ಆ ಮನುಷ್ಯ ''ಅಯ್ಯೋ ಕಾಪಾಡಿ, ಯಾರಾದರೂ ಸಹಾಯ ಮಾಡಿ, ನಿಮ್ಮ ದಮ್ಮಯ್ಯ'' ಎಂದು ಅರಚುತ್ತಿದ್ದ; ''ನಾನು ಸಾಯುತ್ತಿದ್ದೇನೆ, ಯಾರಾದರೂ ಬದುಕಿಸಿ'' ಎಂದು ಬೇಡಿಕೊಳ್ಳುತ್ತಿದ್ದ. ಗೋಳಿಡುತ್ತಿದ್ದ ಆ ಮನುಷ್ಯನ ಕಡೆಗೇ ನೋಡುತ್ತ ಅಯ್ಯಾಸ್ವಾಮಿ ತಬ್ಬಿಬ್ಬಾಗಿ ಒಂದಷ್ಟು ಹೊತ್ತು ನಿಂತರು. ''ಈತ ಯಾರೋ ಕಳ್ಳನೋ, ದರೋಡೆಕೋರನೋ ಇರಬೇಕು; ದಾರಿಹೋಕರನ್ನು ಅಡ್ಡಗಟ್ಟಿ ದರೋಡೆ ಮಾಡಲು ಯತ್ನಿಸಿರಬಹುದು. ಆದರೆ ಅವರು ಇವನಿಗಿಂತ ಬಲಿಷ್ಠರಾಗಿದ್ದು, ಇವನನ್ನು ಹೀಗೆ ಬಡಿದು ಇಲ್ಲಿ ಎಸೆದು ಹೋಗಿರಬೇಕು. ಈಗ ನಾನು ಇವನನ್ನು ಬಿದ್ದಲ್ಲಿಂದ ಎತ್ತಲುಹೋಗಿ ಅವನ ಪ್ರಾಣ ಹೋಗಿಬಿಟ್ಟರೆ, ಆ ಕೊಲೆಯ ಆಪಾದನೆ ನನ್ನ ಮೇಲೆಯೆ ಬರುತ್ತದೆ. ನನಗೇಕೆ ಇವನ ಉಸಾಬರಿ'' – ಎಂದುಕೊಂಡರು.

– ಹೀಗೆಲ್ಲ ಯೋಚಿಸಿದ ಅಯ್ಯಾಸ್ವಾಮಿ ತಮ್ಮ ದಾರಿಯಲ್ಲಿ ತಮ್ಮಷ್ಟಕ್ಕೆ ಮುಂದೆ ಹೆಜ್ಜೆ ಹಾಕತೊಡಗಿದರು. ಆದರೆ ಆ ಗಾಯಾಳು ಅವರನ್ನು ಮುಂದೆ ಹೋಗಲು ಬಿಡಲಿಲ್ಲ. ''ದಯವಿಟ್ಟು ನನ್ನನ್ನು ಹೀಗೆ ಬಿಟ್ಟುಹೋಗಬೇಡಿ; ನಾನು ಸಾಯುತ್ತಿದ್ದೇನೆ'' ಎಂದು ಅರಚುತ್ತಲೇ ಇದ್ದ. ಅಯ್ಯಾಸ್ವಾಮಿಗಳು ನಿಲ್ಲಲೇಬೇಕಾಯ್ತು. ಆ ಮನುಷ್ಯನಿಗೆ ಸಹಾಯ ಮಾಡಲು ಹೋಗಬೇಕೆಂದು ಯೋಚಿಸುತ್ತಿರುವಾಗ ಅವರ ಮುಖ ಬಿಳಿಚಿಕೊಂಡಿತ್ತು. 'ಇವನ್ಯಾರೋ ಕಾಡುಮೇಡುಗಳಲ್ಲಿ ಅಲೆಯುವ ಹುಚ್ಚನಂತೆ ಕಾಣುತ್ತಾನೆ; ಅವನ ಮೈಯಿಂದ ಸೋರುತ್ತಿರುವ ರಕ್ತವನ್ನು ಕಂಡರೆ ನನಗೆ ಅಸಹ್ಯ





ವಾಗುತ್ತದೆ. ಈಗೇನು ಮಾಡುವುದು ? ಜನರ ಪಾರಮಾರ್ಥಿಕ ಸಮಸ್ಯೆಗಳಿಗೆ ನಾನು ಪರಿಹಾರ ಸೂಚಿಸಬಲ್ಲೆ; ಜನರ ಮಾನಸಿಕ ಕಾಯಿಲೆಗಳನ್ನು ವಾಸಿಮಾಡುವ ಧರ್ಮ ಗುರುವಾದ ನಾನು ಇವನ ಮೈ ಮೇಲಿನ ಗಾಯಗಳನ್ನು ವಾಸಿಮಾಡಲಾರೆ' – ಹೀಗೆಂದು ಯೋಚಿಸಿ, ಮತ್ತೆ ನಾಲ್ಕು ಹೆಜ್ಜೆ ಮುಂದಿಡುವಷ್ಟರಲ್ಲಿ, ಅರೆಜೀವವಾಗಿದ್ದ ಆ ಮನುಷ್ಯನ ಚೀತ್ಕಾರವು ಗುಡ್ಡದ ಕಲ್ಲನ್ನು ಕೂಡ ಕರಗಿಸುವಂತಿತ್ತು. '':ನನ್ನನ್ನು ಈ ಸ್ಥಿತಿಯಲ್ಲಿ ಬಿಟ್ಟುಹೋಗಬೇಡಿ; ಹತ್ತಿರ ಬನ್ನಿ; ಹಾಗೆ ನೋಡಿದರೆ, ನಾವಿಬ್ಬರೂ ಪರಸ್ಪರ ಪರಿಚಯವಿದ್ದವರೆ; ದಯಾಮಯರಾದ ಅಯ್ಯಾಸ್ವಾಮಿಗಳಲ್ಲವೆ ನೀವು ? ನಾನು ಕಳ್ಳನಾಗಲಿ ದರೋಡೆಕೋರನಾಗಲಿ ಅಲ್ಲ, ನನ್ನನ್ನು ನಂಬಿ. ಮೊದಲು ಹತ್ತಿರ ಬಂದು ನನ್ನನ್ನು ಎತ್ತಿಕೂರಿಸಿ; ಆಮೇಲೆ ನಾನು ಯಾರೆಂಬುದನ್ನು ನಿಮಗೆ ತಿಳಿಸುತ್ತೇನೆ, ನನ್ನ ಕತೆ ಹೇಳುತ್ತೇನೆ'' ಎಂದಿದ್ದ.

ಅಯ್ಯಾಸ್ವಾಮಿಗಳು ಆ ಗಾಯಾಳುವಿನ ಹತ್ತಿರ ಬಂದು, ಬಗ್ಗಿ ದೃಷ್ಟಿಸಿ ನೋಡಿದರು. ಆಗಲೂ ಅವರಿಗೆ ಅವನ ಗುರುತು ಹತ್ತಲಿಲ್ಲ. ಅವರಿಗೆ ಕಂಡದ್ದು ಒಂದು ವಿಕಾರವಾದ ಮುಖ, ಮರ್ಮಭೇದಕವಾದ ಕಣ್ನೋಟ; ಕರುಣೆ-ಕ್ರೌರ್ಯ – ಹೀಗೆ ಪರಸ್ಪರ ವಿರುದ್ಧ ಗುಣಗಳಿಂದ ಕೂಡಿದಂತೆ ತೋರುವ ಒಂದು ಜೊತೆ ಕಣ್ಣುಗಳು! ತಕ್ಷಣ ಅವರು ಹಿಮ್ಮೆಟ್ಟಿ ಕೇಳಿದ್ದರು ''ಯಾರು ನೀನು ?''

ನಿತ್ರಾಣನಾಗಿದ್ದ ಆ ಮನುಷ್ಯ ಕ್ಷೀಣಧ್ವನಿಯಲ್ಲಿ ಮಾತಾಡಿದ್ದ. ''ನನ್ನನು ನೋಡಿ ಗಾಬರಿಯಾಯಿತಲ್ಲವೆ ನಿಮಗೆ ? ಹೆದರಬೇಡಿ ಸ್ವಾಮೀಜಿ, ನಾವು ಬಹುಕಾಲದ ಗೆಳೆಯರು. ನನಗೆ ಎದ್ದು ನಿಲ್ಲಲು ಸಹಾಯ ಮಾಡಿ, ಹತ್ತಿರದಲ್ಲಿರುವ ಹಳ್ಳಕ್ಕೆ ಕರೆದುಕೊಂಡು ಹೋಗಿ ನನ್ನ ಗಾಯಗಳನ್ನು ತೊಳೆಯಿರಿ.''

''ನೀನು ಯಾರೆಂಬುದನ್ನು ಮೊದಲು ಹೇಳು, ನನಗಂತೂ ಎಲ್ಲಿಯೂ ನಿನ್ನನ್ನು ನೋಡಿದ ನೆನಪಿಲ್ಲ, ನೀನ್ಯಾರೋ ನನಗೆ ಗೊತ್ತೂ ಇಲ್ಲ'' ಸ್ವಾಮೀಜಿ ಚಡಪಡಿಸಿದರು.

ಆ ಮನುಷ್ಯ ನರಳುತ್ತಲೆ ಹೇಳಿದ್ದ: ''ನನ್ನ ಪರಿಚಯ ನಿಮಗೆ ಚೆನ್ನಾಗಿದೆ, ನೂರಾರು ಬಾರಿ ನೀವು ನನ್ನನ್ನು ಕಂಡಿದ್ದೀರಿ; ದಿನವೂ ಗಂಟೆಗಟ್ಟಲೆ ನನ್ನ ಬಗ್ಗೆ ಪ್ರವಚನ ಮಾಡುತ್ತೀರಿ; ಒಂದು ರೀತಿಯಲ್ಲಿ ನಾನು ನಿಮಗೆ ನಿಮ್ಮ ಪ್ರಾಣಕ್ಕಿಂತಲೂ ಪ್ರಿಯವಾದವನು, ನಿಮಗೆ ಆಶ್ರಯವಾದವನು.''

ಸ್ವಾಮೀಜಿ ಛೀಗುಟ್ಟಿದರು : ''ಬಾಯಿಬಡುಕ, ಮೋಸಗಾರ; ಸುಳ್ಳುಪಳ್ಳೆ ಏನೇನೊ ಬೊಗುಳುತ್ತೀ ; ಸಾಯುತ್ತ ಬಿದ್ದಿರುವ ನೀನು ಸುಳ್ಳು ಹೇಳಬಾರದು, ಸತ್ಯವನ್ನೇ ನುಡಿಯಬೇಕು. ನಿಜಸಂಗತಿ ಹೇಳದಿದ್ದರೆ, ನೀನು ಇಲ್ಲೆ ಕೊಳೆತು ಸಾಯಲು ಬಿಟ್ಟು ನನ್ನ ಪಾಡಿಗೆ ನಾನು ಹೋಗುತ್ತೇನೆ; ನಿನ್ನ ಹೊಲಸು ಮುಖ ನೋಡುತ್ತ ನಾನಿಲ್ಲಿ ನಿಲ್ಲಲಾರೆ.''

ಗಾಯಾಳು ಸ್ವಲ್ಪ ಹೊರಳಿ, ನಿಧಾನವಾಗಿ ತಲೆಯೆತ್ತಿ ಸ್ವಾಮೀಜಿಯ ಕಣ್ಣಲ್ಲಿ ಕಣ್ಣಿಟ್ಟು ನೋಡಿದ್ದ; ಅವನ ತುಟಿಗಳಲ್ಲಿ ಒಂದು ಮುಗುಳ್ನಗೆ ಹೊಳೆಯಿತು; ಆಳವೂ ಪ್ರಶಾಂತವೂ ಆದ ಧ್ವನಿಯಲ್ಲಿ ಉಸುರಿದ್ದ, ''ನಾನು ಪಾಪಯ್ಯ !''

ಭಯಂಕರವಾದ ಶಬ್ದ ಕಿವಿಗೆ ಬಿದ್ದೊಡನೆ ಸ್ವಾಮೀಜಿ ನಡುಗಿಹೋದರು; ಇಡೀ ಕಣಿವೆ ತರಗುಟ್ಟುವಂತೆ ಕೀರಲು ಧ್ವನಿಯಲ್ಲಿ ಅರಚಿದರು. ಕೊಂಚ ಸುಧಾರಿಸಿಕೊಂಡು ದುರುಗುಟ್ಟಿ ನೋಡಿದಾಗ ಸಾಯುತ್ತ ಬಿದ್ದಿರುವ ಆ ಮನುಷ್ಯ, ಪುರಾಣಗಳಲ್ಲಿ ವರ್ಣಿಸುವ ರೌರವ ನರಕವಾಸಿಯಾದ ವಿಕಾರರೂಪಿನ ಪಾಪ ಪುರುಷನ ಪ್ರತಿಚಿತ್ರವಾಗಿ ಕಂಡಿದ್ದ. ''ದೇವರು ಇವನ ಅಸಹ್ಯರೂಪವನ್ನು ತೋರಿಸಿ ನನ್ನನ್ನು ಎಚ್ಚರಿಸಿದ್ದಾನೆ; ಇವನನ್ನು ದ್ವೇಷಿಸುವಂತೆ ಪ್ರೇರೇಪಿಸಿದ್ದಾನೆ'' ಎಂದು ಗೊಣಗಿಕೊಂಡು ''ಪಾಪಿಯಾದ ನೀನು ಇಲ್ಲೇ ಬಿದ್ದು ಆದಷ್ಟು ಬೇಗ ಸಾಯಬೇಕು'' ಎಂದು ಶಪಿಸಿದರು.

''ನನ್ನನ್ನು ಸಾಯಿಸಲು ಅಷ್ಟೊಂದು ಆತುರಪಡಬೇಡಿ ಸ್ವಾಮೀಜಿ; ನಮ್ಮ ಅಮೂಲ್ಯ ವೇಳೆಯನ್ನು ಹೀಗೆ ವ್ಯರ್ಥವಾದ ಮಾತುಗಳಲ್ಲಿ ಹಾಳು ಮಾಡುವುದು ಬೇಡ; ಬನ್ನಿ, ರಕ್ತಸ್ರಾವದಿಂದ ನಾನು ಕಡೆಯುಸಿರೆಳೆಯುವುದಕ್ಕಿಂತ ಮುಂಚೆ, ನನ್ನ ಮೈಮೇಲಿನ ಗಾಯಗಳನ್ನು ಮುಚ್ಚಿ ರಕ್ತ ಸೋರುವುದನ್ನು ನಿಲ್ಲಿಸಿ.'' ಪಾಪಯ್ಯ ಬೇಡಿಕೊಂಡಿದ್ದ.

ಸ್ವಾಮೀಜಿ ಚೀರಿದರು : ''ಏನು ದೇವರಿಗೆ ದಿನವೂ ಮೈಮುಟ್ಟಿ ಅಭಿಷೇಕ ಮಾಡಿಸಿ, ಹೂವೇರಿಸುವ ಈ ಕೈಗಳಿಂದ ನಿನ್ನ ಹೊಲಸು ಮೈ ಮುಟ್ಟುವುದೆ ? ನೀನು ಮಾನವರ ಶತ್ರು; ಕೋಟ್ಯಂತರ ಜನರ ಶಾಪತಾಪಗಳಿಗೆ ಗುರಿಯಾದವನು; ಸಜ್ಜನರನ್ನು ಹಿಂಸಿಸುವುದೆ ನಿನ್ನ ಕಸುಬಾಗಿದೆ; ನಿನ್ನಂಥವನು ಹೀಗೆಯೇ .ಕೊಳೆತು ಸಾಯಬೇಕು.''

ಪಾಪಯ್ಯ ಒಂದು ಮೊಳಕೈ ಊರಿ, ಯಾತನೆಯಿಂದ ನರಳುತ್ತ ಸ್ವಲ್ಪ ಎದ್ದು ಕುಳಿತಿದ್ದ: ''ನೀವು ಏನು ಮಾತಾಡುತ್ತಿರುವಿರೆಂಬುದರ ಅರ್ಥ ಅಥವಾ ನೀವು ಎಸಗುತ್ತಿರುವ ದ್ರೋಹ ಪ್ರಾಯಶಃ ನಿಮಗೆ ತಿಳಿದಿರಲಿಕ್ಕಿಲ್ಲ. ಸ್ವಲ್ಪ ಸಾವಧಾನವಾಗಿ ಕೇಳಿಸಿಕೊಳ್ಳಿ ; ನಾನು ನನ್ನ ಕಥೆ ಹೇಳುತ್ತೇನೆ –

''ಇವತ್ತು ನಾನು ಈ ನಿರ್ಜನ ಕಣಿವೆಯಲ್ಲಿ ಒಬ್ಬನೇ ಅಲೆದಾಡುತ್ತಿದ್ದೆ. ಈ ಜಾಗಕ್ಕೆ ಬರುವ ಹೊತ್ತಿಗೆ ಸರಿಯಾಗಿ ಸಜ್ಜನರ ಒಂದು ಗುಂಪು ಇದ್ದಕ್ಕಿದ್ದಂತೆ ನನ್ನ ಮೇಲೆ ದಾಳಿಯಿಟ್ಟು, ಜೋರಾಗಿ ಹೊಡೆದು ಚಚ್ಚಿತು. ಸಾಮಾನ್ಯವಾಗಿ ನಾನು ಸುಮ್ಮನೆ ನಿಂತು ಹೊಡೆಸಿಕೊಳ್ಳುವವನಲ್ಲ; ಅವರನ್ನು ಹಾಗೆಯೆ ಬಿಡುತ್ತಲೂ ಇರಲಿಲ್ಲ. ಈಗೇನಾಯಿತೆಂದರೆ, ಅವರ ಪೈಕಿ ಒಬ್ಬನ ಕೈಲಿ ಹರಿತವಾದ ಇಬ್ಬಾಯ ಖಡ್ಗವಿತ್ತು. ಆ ತೀಕ್ಷ್ಣವಾದ ಆಯುಧ ಹಿಡಿದವನ ವಿರುದ್ಧ ಹೋರಾಡುವುದು ಸಾಧ್ಯವಾಗಲಿಲ್ಲ; ಅಸಹಾಯಕನಾಗಿಬಿಟ್ಟೆ...'' ಪಾಪಯ್ಯ ಮಾತಾಡುವುದನ್ನು ಸ್ವಲ್ಪ ಹೊತ್ತು ನಿಲ್ಲಿಸಿ, ಪಕ್ಕೆಯಲ್ಲಿ ಆಗಿದ್ದ ಆಳವಾದ ಗಾಯದ ಮೇಲೆ ಕೈ ಆಡಿಸಿ ಸುಧಾರಿಸಿಕೊಂಡು ಮುಂದುವರಿಸಿದ. ''ಆ ಖಡ್ಗ ಹಿಡಿದಿದ್ದವನು - ಸಾಕ್ಷಾತ್ ವೀರಭದ್ರನ ಅವತಾರವೆ ಇರಬೇಕು – ತುಂಬ ಚತುರ ಹೋರಾಟಗಾರ. ನಾನು ಈ ಗುಂಡಿಯಲ್ಲಿ ಬಿದ್ದು ಸತ್ತವನಂತೆ ನಟಿಸದಿದ್ದರೆ ನನ್ನನ್ನು ತುಂಡು ತುಂಡಾಗಿ ಕತ್ತರಿಸಿಬಿಡುತ್ತಿದ್ದನೇನೊ !''

ಅಯ್ಯಾಸ್ವಾಮಿಗಳು ತಲೆಯೆತ್ತಿ ಆಕಾಶವನ್ನು ನೋಡುತ್ತ ನಮ್ಮನ್ನು ಇಂಥ ದುಷ್ಟರಿಂದ ಕಾಪಾಡುವ ಸಲುವಾಗಿ ಆ ಭಗವಂತನೆ ಅವತರಿಸಿ ಬಂದಿರಬಹುದೆನ್ನುತ್ತ ಕೈಮುಗಿದರು.

ಪಾಪಯ್ಯ ಪ್ರತಿಭಟಿಸಿದ. ''ಎಂದೂ ಕಾಣದ ಆ ದೇವರಿಗೆ ನೀವು ನಮಸ್ಕಾರ ಮಾಡುತ್ತೀರಿ; ನಿಮ್ಮ ಕಣ್ಣೆದುರಿಗೆ ಸಾಯುತ್ತ ಬಿದ್ದಿರುವ ನನ್ನನ್ನು ಕಂಡರೆ ನಿಮಗೆ ತಿರಸ್ಕಾರ! ನನ್ನನ್ನು ಬಯ್ಯುತ್ತೀರಿ. ಸಕಲ ಸುಖಭೋಗಗಳ ನಡುವೆಯೂ ಸದಾಕಾಲ ನಾನು ನಿಮ್ಮ ಮನಶ್ಶಾಂತಿಗೆ ಪ್ರೇರಕನಾಗಿದ್ದೇನೆಂಬುದನ್ನು ತಿಳಿದುಕೊಳ್ಳಿ. ನಿಮ್ಮ ವೃತ್ತಿ, ವ್ಯವಹಾರಗಳು ಮತ್ತು ಅಸ್ತಿತ್ವಕ್ಕೆ ನನ್ನನ್ನು ಒಂದು ಹತಾರವಾಗಿ ಬಳಸಿಕೊಳ್ಳುತ್ತೀರಿ.

''ಇವತ್ತು ನಾನು ಇಲ್ಲಿ ಸತ್ತುಹೋಗಿಬಿಟ್ಟರೆ, ನಾಳೆ ನೀವೇನು ಮಾಡುತ್ತೀರಿ ? ನೀವು ಕೂಡ ಹಸಿವು ಬಾಯಾರಿಕೆಗಳಿಂದ ನರಳಿ ಸಾಯಬೇಕಾಗುತ್ತದೆಯಲ್ಲವೆ ? ನನ್ನ ಹೆಸರು ಇಲ್ಲವಾಗಿಬಿಟ್ಟರೆ ಆಮೇಲೆ ನಿಮ್ಮ ವೃತ್ತಿ ಎಲ್ಲಿ ಉಳಿಯುತ್ತದೆ. ಹೇಗೆ ಉಳಿಯುತ್ತದೆ ? ಹತ್ತಾರು ವರ್ಷಗಳಿಂದ ನೀವು ಈ ಪ್ರಾಂತ್ಯದ ಹಳ್ಳಿಗಳಲ್ಲಿ ಸುತ್ತಾಡುತ್ತ ಜನರು ನನ್ನ ಕೈವಶವಾಗದಂತೆ ತಡೆಯುವ ಎಚ್ಚರ ವಹಿಸುತ್ತಿದ್ದೀರಲ್ಲವೆ ? ತಾವು ಬೆಳೆದ ದವಸಧಾನ್ಯಗಳನ್ನೋ, ಉಳಿಸಿದ ಹಣವನ್ನೋ ಕೊಟ್ಟು ಜನ ನಿಮ್ಮ ಉಪದೇಶಗಳನ್ನು ಕೊಳ್ಳುತ್ತಿದ್ದಾರಷ್ಟೆ. ತಮ್ಮ ಪರಮ ಶತ್ರುವು ಇನ್ನು ಉಳಿದಿಲ್ಲವೆಂದು ತಿಳಿದುಬಿಟ್ಟರೆ ಅವರು ನಿಮ್ಮಿಂದ ಏನು ಕೊಳ್ಳುತ್ತಾರೆ, ಏಕೆ ಕೊಳ್ಳುತ್ತಾರೆ ? ಜನರು ಈ ದುಷ್ಟ ಪಾಪಯ್ಯನ ಭಯದಿಂದ ಮುಕ್ತರಾಗಿಬಿಟ್ಟರೆ ನಿಮ್ಮ ವೃತ್ತಿಯು ತನ್ನಿಂದ ತಾನೆ ಅಳಿದುಹೋಗುತ್ತದೆ; ಎಚ್ಚರವಿರಲಿ. ಸ್ವಾಮಿಗಳಾದ ತಮಗೆ, ಪಾಪಯ್ಯನ ಭಯವೇ ಅವನ ವಿರೋಧಿಗಳಾದ ಮಠಾಧಿಪತಿಗಳು ಮತ್ತು ಮಠಮಾನ್ಯಗಳ ಅಸ್ತಿತ್ವಕ್ಕೆ ಆಧಾರವೆಂಬುದು ತಿಳಿದಿಲ್ಲವೆ ? ಭಕ್ತರ ಜೇಬಿನಿಂದ ಹಣವನ್ನೊ, ಚಿನ್ನ-ಬೆಳ್ಳಿಗಳನ್ನೋ ದೋಚಿ ಅದನ್ನು ಸ್ವಾಮಿಗಳು, ಪೂಜಾರಿಗಳ ಚೀಲಗಳಲ್ಲಿ ತುಂಬಿಸುತ್ತಿರುವುದು ಪರಂಪರಾಗತವಾದ ಪಾಪಯ್ಯನ ರಹಸ್ಯ ಕೈವಾಡ ತಾನೆ! ನಿಶ್ಚಯವಾಗಿಯೂ ನಿಮ್ಮ ಮಠಾಧಿಪತ್ಯ, ಸ್ಥಾನಮಾನಗಳು, ಆದಾಯ, ಆಶ್ರಯ ಎಲ್ಲವೂ ಈ ಪಾಪಯ್ಯನ ಜೊತೆಯಲ್ಲೆ ಮಾಯವಾಗಿಬಿಡುತ್ತವೆಯೆಂಬುದು ಗೊತ್ತಾದ ಮೇಲೆ ಹೇಗೆ ತಾನೆ ನೀವು ನನ್ನನ್ನು ಇಲ್ಲಿ ಸಾಯಲು ಬಿಡುತ್ತೀರಿ ?''

## ಮಿನಿ ಕವನಗಳು

ಮುಳ್ಳಿನ ಬಾಯಿಯಲ್ಲಿ
ಹೂ ಕಂಠವಿಟ್ಟು
ಹಾಡಿದೆ ಜೀವನ –
ಸಮರಸಗಾನ

* * *

ಮನುಷ್ಯ ತಿಂದ ಮೇವು
ಹೊಟ್ಟೆಗಿಲ್ಲದೆ ದನಗಳ ಸಾವು
ಹಗರಣಗಳ ಹುತ್ತ ಮೇವು

* * *

ರಾತ್ರಿಯ ಜೊತೆ ಕಾದಾಡಿ
ಬರುವ ಸೂರ್ಯ ನಿತ್ಯ –
ರಕ್ತಸಿಕ್ತ

ಜಂಬಣ್ಣ ಅಮರಚಿಂತ
ನಂ. ೮-೧೧-೧೮೧/೭೯೬, ವಿದ್ಯಾನಗರ
ರಾಯಚೂರು - ೫೮೪ ೧೦೩

ಪಾಪಯ್ಯ ಒಂದು ನಿಮಿಷ ಮೌನವಾಗಿದ್ದು ಮತ್ತೆ ಮಾತಾಡುವಾಗ ಅವನಲ್ಲಿ ದೈನ್ಯಕ್ಕೆ ಬದಲಾಗಿ ಆತ್ಮವಿಶ್ವಾಸದ ಧೈರ್ಯ ಮೂಡಿತ್ತು. ''ಸ್ವಾಮೀಜಿ ನಿಮಗೆ ಸ್ವಾಭಿಮಾನವಿದೆ, ಆದರೆ ನೀವು ಈ ವಿಚಾರದಲ್ಲಿ ಅಜ್ಞಾನಿ. ನಾನು ಈ ಪಾಪಯ್ಯನ ಇತಿಹಾಸವನ್ನು ನಿಮ್ಮ ಮುಂದೆ ತೆರೆದಿಡುತ್ತೇನೆ; ಆಗ ನಮ್ಮಿಬ್ಬರನ್ನೂ ಪರಸ್ಪರ ಬಂಧಿಸುವ ಮತ್ತು ನನ್ನ ಅಸ್ತಿತ್ವವನ್ನು ನಿಮ್ಮ ಅಂತಃಪ್ರಜ್ಞೆಗೆ ಗಂಟುಹಾಕುವ ಸತ್ಯವನ್ನು ನೀವು ಗುರುತಿಸಬಹುದು : ಆ ಜಗತ್ತಿನ ಆರಂಭದ ದಿನಗಳಲ್ಲಿ ಮನುಷ್ಯನು ಸೂರ್ಯನಿಗೆ ಅಭಿಮುಖವಾಗಿ ನಿಂತು, ಎರಡು ಕೈಗಳನ್ನು ಮೇಲೆತ್ತಿ, ಆಕಾಶದ ಎತ್ತರದಲ್ಲಿ ಮಹಿಮಾವಂತನೂ ದಯಾಮಯನೂ ಆದ ದೇವರಿದ್ದಾನೆ ಎಂದು ಮೊದಲ ಬಾರಿಗೆ ಮೊರೆಯಿಟ್ಟಿದ್ದ. ಆಮೇಲೆ ಆ ಬೆಳಕಿನ ಗೋಳಕ್ಕೆ ಬೆನ್ನಹಾಕಿ ನಿಂತು ಭೂಮಿಯ ಮೇಲೆ ತನ್ನ ನೆರಳನ್ನು ಗುರುತಿಸಿ, ಭೂಮಿಯ ಆಳದಲ್ಲಿ ಭಯಂಕರವಾದ ಒಂದು ಕಪ್ಪು ಭೂತವಿದೆ ಎಂದು ಕೂಗುಹಾಕಿದ.

''ಇಂಥ ಅನಾದಿಕಾಲದ ಮನುಷ್ಯನು ತನ್ನ ಗುಹೆಯ ಕಡೆಗೆ ನಡೆಯುವಾಗ ಗೊಣಗಿಕೊಂಡದ್ದು – ''ನಾನು ಎರಡು ಒತ್ತಡಗಳ ನಡುವೆ ಸಿಕ್ಕಿಹಾಕಿಕೊಂಡಿದ್ದೇನೆ; ಒಂದನ್ನು ಒಲಿಸಿಕೊಂಡು ಆಶ್ರಯಿಸಬೇಕು; ಮತ್ತೊಂದರ ವಿರುದ್ಧ ಹೋರಾಡಬೇಕು'' ಎಂದು. ದಿನಗಳು ವರ್ಷಗಳು ಉರುಳಿದವು. ಎರಡು ಶಕ್ತಿಗಳ ನಡುವೆ ತೂಗಾಡುತ್ತಿದ್ದ ಮನುಷ್ಯನು ತನ್ನಲ್ಲಿ ಧೈರ್ಯ ತುಂಬಿದ ಒಂದನ್ನು ಸ್ತುತಿಸಿದ. ತನ್ನನ್ನು ಭಯಗೊಳಿಸಿದ ಮತ್ತೊಂದನ್ನು ಶಪಿಸಿದ. ಆದರೆ, ಸ್ತೋತ್ರದ ಅಥವಾ ಶಾಪದ ಅರ್ಥವನ್ನು ಕುರಿತೇನೂ ಅವನು ಚಿಂತಿಸಿದಂತೆ ತೋರುವುದಿಲ್ಲ. ವಸಂತ ಋತುವಿನಲ್ಲಿ ಚಿಗುರಿ ನಳನಳಿಸುವ, ಮಾಗಿಯ ಚಳಿಯಲ್ಲಿ ಸೊರಗುವ ಮರಗಿಡಗಳಂತೆ ಮನುಷ್ಯ ಬದುಕು ಸಾಗಿಸಿದ.

''ಮಾನವ ನಾಗರಿಕತೆಯ ಅರುಣೋದಯವಾದಾಗ ಕುಟುಂಬವೆಂಬ ಘಟಕವು ಅಸ್ತಿತ್ವಕ್ಕೆ ಬಂತು. ಆಮೇಲೆ ಸಾಮರ್ಥ್ಯ ಮತ್ತು ಆಸಕ್ತಿಗಳಿಗೆ ಅನುಗುಣವಾಗಿ ಶ್ರಮವಿಭಜನೆಯಾಯಿತು. ಬಣಗಳು, ವರ್ಗಗಳು ಹುಟ್ಟಿಕೊಂಡವು. ಒಂದು ಪಂಗಡದ ಜನ ನೆಲವನ್ನು ಉತ್ತು ಬಿತ್ತಿ ಬೆಳೆ ಬೆಳೆದರು; ಮತ್ತೊಂದು ಗುಂಪಿನವರು ಮನೆಗಳನ್ನು ಕಟ್ಟಿದರು; ಇನ್ನಷ್ಟು ಜನ ಬಟ್ಟೆ ಬರೆಗಳನ್ನು ನೇಯ್ದರು ಇಲ್ಲವೆ ಬೇಟೆಯಾಡಿ ಮಾಂಸಾಹಾರ ಸಂಗ್ರಹಿಸಿದರು. ಕಾಲಕ್ರಮೇಣ ಈ ಜಗತ್ತಿನ ಆಚೆಗೆ, ಈ ಭೂಮಿ ಅಂಚಿಗೆ ಏನಿದೆ ಎಂಬುದನ್ನು ಕುರಿತ ಊಹೆಗಳು, ಅತಿಮಾನುಷ ಶಕ್ತಿಗಳನ್ನು ಕುರಿತ ಕಲ್ಪನೆಗಳು ಆರಂಭವಾದವು. ಶ್ರಮವಿಭಜನೆಯಲ್ಲಿ ಮೇಲೆ ಹೇಳಿದ ಯಾವ ಕಸುಬನ್ನೂ ಅವಲಂಬಿಸದ ಒಂದಷ್ಟು ಜನರೂ ಇದ್ದರು. ಅವರು ವಿಶೇಷವಾಗಿ ಅತಿಮಾನುಷ ಶಕ್ತಿಗಳನ್ನು ಕುರಿತು ಊಹೆಗಳನ್ನು ಬೆಳೆಸಿ, ಕಥೆಗಳನ್ನು ಕಟ್ಟಿ ಹೇಳಿದರು.''

ಕ್ಷಣಕಾಲ ಮೌನವಾಗಿದ್ದ ಪಾಪಯ್ಯ ಆಮೇಲೆ ಜೋರಾಗಿ ನಗಲಾರಂಭಿಸಿದ್ದ. ಅವನ ಅಟ್ಟಹಾಸ ಎಷ್ಟು ಜೋರಾಗಿತ್ತೆಂದರೆ ಅದು ಇಡೀ ಕಣಿವೆಯನ್ನು ನಡುಗಿಸಿತು. ಆದರೆ ಅದೇ ನಗು ಅವನ ಗಾಯಗಳ ನೋವನ್ನು ಕೆದಕಿದ್ದರಿಂದ ಪಕ್ಕೆಯನ್ನು ಒತ್ತಿ ಹಿಡಿದವನು ಸ್ವಲ್ಪ ಸುಧಾರಿಸಿಕೊಂಡು ಮಾತು ಮುಂದುವರಿಸಿದ. ''ಅತಿಮಾನುಷಗಳ ಕಲ್ಪನೆಯು ಭೂಮಿಯ ಮೇಲೆ ಅವತರಿಸಿದಾಗಿನಿಂದ ನಾನಾ ಬಗೆಗಳಲ್ಲಿ, ವಿಚಿತ್ರ ರೀತಿಯಲ್ಲಿ ಬೆಳೆಯಿತು.

''ಮೊದಮೊದಲ ಬುಡಕಟ್ಟು ಬಣಗಳ ಪೈಕಿ ಒಂದರಲ್ಲಿ ಪೂಜಪ್ಪನೆಂಬಾತನೊಬ್ಬನಿದ್ದ. ಆ ಹೆಸರು ಅವನಿಗೆ ಹೇಗೆ ಬಂತೆಂಬುದು ನನಗೂ ತಿಳಿಯದು. ಆತ ತುಂಬ ಬುದ್ಧಿವಂತ ಆದರೆ ಮಹಾಮೈಗಳ್ಳ. ಹೊಲ ಉಳುವುದಕ್ಕಾಗಲಿ, ಗಾರೆ ಕೆಲಸ ಮಾಡುವುದಕ್ಕಾಗಲಿ, ಬಟ್ಟೆ ನೇಯುವುದಕ್ಕಾಗಲಿ – ಒಟ್ಟಿನ ಮೇಲೆ ದೇಹಶ್ರಮವನ್ನು ನಿರೀಕ್ಷಿಸುವ ಯಾವ ಕೆಲಸವನ್ನೂ ಮಾಡಲು ಅವನು ತಯಾರಿರಲಿಲ್ಲ. ಹಾಗೆಂದು, ಕಷ್ಟಪಟ್ಟು ಕೆಲಸ ಮಾಡದೆ ಹೊಟ್ಟೆ ಹೊರೆಯುವುದಕ್ಕೂ ಆ ದಿನಗಳಲ್ಲಿ ಅವಕಾಶವಿರಲಿಲ್ಲ. ಪೂಜಪ್ಪ ಎಷ್ಟೋ ರಾತ್ರಿಗಳಲ್ಲಿ ಹೊಟ್ಟೆಗೆ ಹಿಟ್ಟಿಲ್ಲದೆ ಮಲಗಬೇಕಾಗುತ್ತಿತ್ತು; ಉಪವಾಸ ಮಲಗಿದ್ದರಿಂದ ಸುಲಭವಾಗಿ ನಿದ್ರೆಯೂ ಹತ್ತುತ್ತಿರಲಿಲ್ಲ.

''ಬೇಸಗೆಯ ಒಂದು ರಾತ್ರಿ ಬುಡಕಟ್ಟಿನ ಜನರೆಲ್ಲ ತಮ್ಮ ನಾಯಕನ ಗುಡಿಸಲ ಬಳಿಯಲ್ಲಿ ಸೇರಿ, ಆದಿನ ತಮ್ಮ ತಮ್ಮ ಕೆಲಸದ ಬಗ್ಗೆ ಮಾತಾಡುತ್ತ, ನಿದ್ದೆಹತ್ತುವ ಸಮಯವನ್ನು ಕಾಯುತ್ತಿದ್ದರು. ಅವರ ಪೈಕಿ ಒಬ್ಬನು ಇದ್ದಕ್ಕಿದ್ದಂತೆ ಎದ್ದು ನಿಂತು ಆಕಾಶದ ಕಡೆ ಕೈತೋರಿಸುತ್ತ ''ಅಗೋ ಅಲ್ಲಿ ನೋಡಿ! ರಾತ್ರಿ ದೇವನನ್ನು! ಅವನ ಮುಖ ಕಪ್ಪಿಟ್ಟಿದೆ, ಕಾಂತಿ ಮಸಳಿಸಿದೆ; ಆಕಾಶದ ನೆತ್ತಿಯಲ್ಲಿ ಒಂದು ಕಪ್ಪು ಕಲ್ಲಿನಂತೆ ತೂಗಾಡುತ್ತಿದ್ದಾನೆ'' ಎಂದು ಕೂಗಿಕೊಂಡಿದ್ದ. ಇಡೀ ಗುಂಪು ಚಂದ್ರನ ಕಡೆ ನೋಡಿತು. ನಿಧಾನವಾಗಿ ರಾತ್ರಿ ದೇವನನ್ನು ಕತ್ತಲೆಯು ಕಬಳಿಸಿದಂತೆ, ಚಂದ್ರನು ಕರಿಯ ಚಂಡಿನಂತಾಗುವಾಗ ಭೂಮಿಯ ಮೇಲಿನ ಬೆಳಕೆಲ್ಲ ಅಳಿಸಿ ಬೆಟ್ಟ-ಗುಡ್ಡ ಕಣಿವೆ-ಕಂದರಗಳೆಲ್ಲ, ಅವರ ಕಣ್ಣಮುಂದೆಯೆ ಅಂಧಕಾರದಲ್ಲಿ ಮುಳುಗಿಹೋದವು. ಯಾವುದೋ ಕರಾಳ ಹಸ್ತವು ತಮ್ಮ ಹೃದಯವನ್ನು ಹಿಂಡುತ್ತಿರುವಂತೆ ಭಾಸವಾಗಿ ಜನ ಭಯ ಗಾಬರಿಗಳಿಂದ ಅರಚಿಕೊಂಡರು.

''ಅದೇ ಆಗ ಎಲ್ಲಿಂದಲೋ ಅವತರಿಸಿದವನಂತೆ ಪೂಜಪ್ಪ ಜನರ ಗುಂಪಿನ ಇದಿರಿಗೆ ಪ್ರತ್ಯಕ್ಷನಾಗಿದ್ದ. ಅವನು ಈ ಮೊದಲು ಹಲವು ಬಾರಿ ಇಂತಹ ಘಟನೆಗಳನ್ನು ಗಮನಿಸಿ ಅದರ ಸರಳ ಸಾಮಾನ್ಯ ವಿಧಾನವನ್ನು ಊಹಿಸಿದ್ದವನು. ಆದ್ದರಿಂದ ತಾನಾಗಿಯೆ ಒದಗಿ ಬಂದ ಈ ಅವಕಾಶವನ್ನು ತನ್ನ ಲಾಭಕ್ಕೆ ಬಳಸಿಕೊಳ್ಳಲು ನಿಶ್ಚಯಿಸಿದ. ಗುಂಪಿನ ಮಧ್ಯೆ ನಿಂತು, ಜನರನ್ನು ಉದ್ದೇಶಿಸಿ ಗಟ್ಟಿಯಾದ ಧ್ವನಿಯಲ್ಲಿ ಹೇಳಿದ್ದ – ''ಈಗ ಎಲ್ಲರೂ ಮಂಡಿಯೂರಿ ಕುಳಿತು ಪ್ರಾರ್ಥನೆ ಮಾಡಿ; ರಾತ್ರಿಯನ್ನು ಬೆಳಗುವ ಚಂದ್ರನಿಗೂ ಕರಾಳ ದುಷ್ಟ ಶಕ್ತಿಯೊಂದಕ್ಕೂ ಬಾನಂಗಳದಲ್ಲಿ ಹೋರಾಟ ನಡೆಯುತ್ತಿದೆ. ಈ ಹೋರಾಟದಲ್ಲಿ ಆ ದುಷ್ಟಶಕ್ತಿಯೇನಾದರೂ ಗೆದ್ದುಬಿಟ್ಟರೆ ಜಗತ್ತಿನಲ್ಲೆಲ್ಲಾ ಶಾಶ್ವತವಾಗಿ ಕತ್ತಲೆ ಕವಿಯುತ್ತದೆ; ನಾವೆಲ್ಲ ನಾಶವಾಗುತ್ತೇವೆ. ರಾತ್ರಿ ದೇವನು ಗೆದ್ದರೆ ಭೂಮಿಯಲ್ಲಿ ಮತ್ತೆ ಬೆಳಕು ಬರುತ್ತದೆ. ನಾವು ಬದುಕುತ್ತೇವೆ. ಚಂದ್ರದೇವನಿಗೆ ನಿಮ್ಮ ಪ್ರಾರ್ಥನೆಯ ಮೂಲಕ ಒಳಿತನ್ನು ಹಾರೈಸುವುದು, ಶಕ್ತಿಕೊಡುವುದು ಅಗತ್ಯವಿದೆ. ಈಗ ಪ್ರಾರ್ಥನೆ ಮಾಡಿರಿ... ಮುಖಗಳ ಮೇಲೆ ಮುಸುಕೆಳೆದುಕೊಂಡು, ತಲೆ ತಗ್ಗಿಸಿ, ಕಣ್ಣಮುಚ್ಚಿ ಪ್ರಾರ್ಥಿಸಿ; ತಲೆಯೆತ್ತಿ ಆಕಾಶದ ಕಡೆ ನೋಡಬೇಡಿ, ನಾನು ಹೇಳುವವರೆಗೂ. ಯಾರಾದರೂ ಕಣ್ಣುಬಿಟ್ಟು, ತಲೆಯೆತ್ತಿ ಆ ಇಬ್ಬರ ಹೋರಾಟವನ್ನು ನೋಡಿದರೆ ಅಂಥವರ ಕಣ್ಣಿಂಗುತ್ತದೆ, ಬುದ್ಧಿಯು ಮಂಕಾಗುತ್ತದೆ. ಬದುಕಿರುವವರೆಗೂ ಕುರುಡರಾಗಿ, ಬುದ್ಧಿಮಾಂದ್ಯರಾಗಿ ಉಳಿಯಬೇಕಾಗುತ್ತದೆ. ಆದ್ದರಿಂದ ತಲೆತಗ್ಗಿಸಿ ಅಂಧಕಾಸುರನ ವಿರುದ್ಧ ಹೋರಾಟದಲ್ಲಿ ಚಂದ್ರದೇವನಿಗೆ ಗೆಲುವಾಗುವಂತೆ ಪ್ರಾರ್ಥಿಸಿ.''

ಜನರಿಗೆ ಈ ರೀತಿ ಆಜ್ಞಾಪಿಸಿದ ಮೇಲೆ ಪೂಜಪ್ಪ ತಾನೇ ಕಟ್ಟಿಕೊಂಡ – ಆ ಜನ ಹಿಂದೆಂದೂ ಕೇಳಿರದಿದ್ದ – ಕೆಲವು ನಿಗೂಢ ಶಬ್ದಗಳನ್ನು ಉಚ್ಚರಿಸತೊಡಗಿದ. ಕೆಲವು ಹೊತ್ತಿನ ಮೇಲೆ ತಾನಾಗಿಯೆ ಚಂದ್ರನು ಸ್ವಲ್ಪ ಸ್ವಲ್ಪವಾಗಿ ಹಣಕಿ ಹಾಕಿ, ಪ್ರಕಾಶಿಸಿದಾಗ ಪೂಜಪ್ಪ ಜನರನ್ನು ಉದ್ದೇಶಿಸಿ ಮೊದಲಿಗಿಂತಲೂ ಗಟ್ಟಿಯಾದ ಧ್ವನಿಯಲ್ಲಿ ಹೇಳಿದ್ದ – ''ಈಗ ತಲೆಯೆತ್ತಿ ನೋಡಿ; ರಾತ್ರಿದೇವನು ತನ್ನ ಭಯಂಕರ ಶತ್ರುವಿನ ವಿರುದ್ಧ ಹೋರಾಟದಲ್ಲಿ ಗೆದ್ದಿದ್ದಾನೆ. ಪುನಃ ನಕ್ಷತ್ರಗಳ ನಡುವೆ ತನ್ನ ಪ್ರಯಾಣವನ್ನು ಮುಂದುವರಿಸಿದ್ದಾನೆ. ಇದು ಸಾಧ್ಯವಾದದ್ದು ನಿಮ್ಮ ಪ್ರಾರ್ಥನೆ ಮತ್ತು ನನ್ನ ಮಂತ್ರಪಠಣದಿಂದ! ಚಂದ್ರದೇವನಿಗೆ ಸಂತೋಷವಾಗಿದೆ, ಅವನು ನಮಗೆ ಒಲಿದಿದ್ದಾನೆ. ಮೊದಲಿಗಿಂತಲೂ ಹೆಚ್ಚು ಕಾಂತಿಯಿಂದ ಹೊಳೆಯುತ್ತಿದ್ದಾನೆ! ಅಲ್ಲವೆ ?''

ಜನಸಮೂಹವು ಎದ್ದುನಿಂತು ಕಾಂತಿಯುಕ್ತವಾಗಿ ಬೆಳಗುತ್ತಿದ್ದ ಚಂದ್ರದೇವನನ್ನು

## ಸ್ಮರಣ ಸಂಸ್ಥೆಯ ಉದ್ಘಾಟನೆ

ದಿನಾಂಕ 01-05-2005 ಭಾನುವಾರ ಬೆಳಿಗ್ಗೆ 10 ಗಂಟೆಗೆ, ಬೆಂಗಳೂರಿನ ಶ್ರೀ ಜಗದ್ಗುರು ರೇಣುಕಾಚಾರ್ಯ ಕಾಲೇಜು (ಆನಂದರಾವ್ ವೃತ್ತದ ಬಳಿ ಇರುವ) ಸಭಾಂಗಣದಲ್ಲಿ ಮೇ ದಿನಾಚರಣೆ ಮತ್ತು ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆಯ ಉದ್ಘಾಟನೆಯಾಗಲಿದೆ. ಕರ್ನಾಟಕದ ಮುಖ್ಯಮಂತ್ರಿ ಮಾನ್ಯ ಎನ್. ಧರಂಸಿಂಗ್‌ರಿಂದ ಉದ್ಘಾಟನೆ. ಮಾಜಿ ಪ್ರಧಾನಮಂತ್ರಿ ಎಚ್. ಡಿ. ದೇವೇಗೌಡರು ಮುಖ್ಯ ಅತಿಥಿ ಮತ್ತು ಎಚ್. ವಿ. ಅನಂತಸುಬ್ಬರಾವ್, ಡಾ॥ ಸಿದ್ದನಗೌಡ ಪಾಟೀಲ, ಲೋಕಸಭಾ ಸದಸ್ಯ ಎಸ್. ಸುಧಾಕರ ರೆಡ್ಡಿ ಹಾಗೂ ಇತರರು ಭಾಗವಹಿಸುತ್ತಾರೆ. ಕೋ. ಚೆನ್ನಬಸಪ್ಪ ಅವರ ಅಧ್ಯಕ್ಷತೆ.

ನೋಡಿಯೆ ನೋಡಿತು. ಅವರ ಭಯ, ಆತಂಕಗಳು ಮಾಯವಾಗಿ ಸಂತೋಷವಾಗಿತ್ತು. ಕೈಕೋಲುಗಳಿಂದ ವಿವಿಧ ಬಗೆಯ ಲೋಹದ ತಗಡುಗಳ ಮೇಲೆ ಬಡಿಯುತ್ತ, ತಮ್ಮ ಅಬ್ಬರವು ಇಡೀ ಕಣಿವೆಯನ್ನು ತುಂಬುವಂತೆ ಹಾಡಿ ಕುಣಿಯಲಾರಂಭಿಸಿದರು !

ಮಾರನೇ ರಾತ್ರಿ ಬುಡಕಟ್ಟಿನ ಮುಖಂಡ ಪೂಜಪ್ಪನನ್ನು ತನ್ನ ಗುಡಿಸಿಲಿಗೆ ಕರೆಸಿಕೊಂಡು ಹೇಳಿದ್ದ: ''ಈವರೆಗೆ ಯಾರೂ ಮಾಡದ್ದನ್ನು ನೀನು ಮಾಡಿ ತೋರಿಸಿದ್ದೀಯೆ... ನಮ್ಮಲ್ಲಿ ಬೇರೆ ಯಾರಿಗೂ ಇಲ್ಲದ ತಿಳುವಳಿಕೆ ನಿನ್ನಲ್ಲಿರಬೇಕು. ಇನ್ನು ಮುಂದೆ ನನ್ನ ಅನಂತರದ ಹಿರಿಯ ಪದವಿ ನಿನ್ನದಾಗಿರಬೇಕೆಂಬುದು ನಮ್ಮ ಜನರ ಅಪೇಕ್ಷೆ. ನಾನು ಅತ್ಯಂತ ಬಲಿಷ್ಠ ನಾಯಕನಿದ್ದ ಹಾಗೆ ನೀನು ಅತ್ಯಂತ ಬುದ್ಧಿವಂತ ಮುಖಂಡನಾಗಿದ್ದೀಯೆ. ಆದ್ದರಿಂದ ದೇವತೆಗಳಿಗೂ ಜನರಿಗೂ ನಡುವೆ ನೀನು ಮಧ್ಯವರ್ತಿಯಾಗಿದ್ದು, ದೇವತೆಗಳ ಕೃತ್ಯಗಳನ್ನು, ಆಸೆ-ಆಕಾಂಕ್ಷೆಗಳನ್ನು ನಮಗೆ ತಿಳಿಸುತ್ತಿರಬೇಕು. ಅವರ ಅಭಿಮಾನವನ್ನು, ಪ್ರೀತಿ-ವಿಶ್ವಾಸಗಳನ್ನು ಗಳಿಸುವ ಮಾರ್ಗೋಪಾಯಗಳನ್ನು ನಮಗೆ ಬೋಧಿಸುತ್ತಿರಬೇಕು. ಇದಕ್ಕೆ ನಿನ್ನ ಒಪ್ಪಿಗೆ ಇದೆಯೆ ?''

ಪೂಜಪ್ಪ ಬಹು ಹುಷಾರಾಗಿ ಉತ್ತರಕೊಟ್ಟಿದ್ದ. ''ಮಾನವ ರೂಪದ ದೇವತೆಗಳು ನನ್ನ ಕನಸಿನಲ್ಲಿ ಏನೆಲ್ಲ ಹೇಳುತ್ತಾರೋ ಅದನ್ನು ಎಚ್ಚರವಾದೊಡನೆ ನಾನು ನಿಮಗೆ ತಿಳಿಸುತ್ತೇನೆ. ದೇವತೆಗಳಿಗೂ ನಿಮಗೂ ನಡುವೆ ನೇರ ಮಧ್ಯವರ್ತಿಯಾಗಿ ಕಾರ್ಯ ನಿರ್ವಹಿಸುತ್ತೇನೆಂದು ಭರವಸೆ ಕೊಡುತ್ತೇನೆ. ನನ್ನ ಮಾತಿನಲ್ಲಿ ನೀವು ನಂಬಿಕೆ ಇಡಬಹುದು'' – ಎಂದಿದ್ದ. ಬುಡಕಟ್ಟಿನ ಮುಖಂಡನಿಗೆ ಸಂತೋಷವಾಯಿತು. ಆಗಲೆ ಬುಡಕಟ್ಟಿನ ಜನರನ್ನು ಕರೆಸಿ ಅವರ ಸಮ್ಮುಖದಲ್ಲಿ ಪೂಜಪ್ಪನಿಗೆ ಎರಡು ಕುದುರೆಗಳು, ಏಳು ಹಸುಗಳು, ಎಪ್ಪತ್ತು ಕುರಿಗಳು ಮತ್ತು ಅವುಗಳ ಮರಿಗಳನ್ನು ಕಾಣಿಕೆಯಾಗಿ ಒಪ್ಪಿಸಿದ್ದ. ಅಲ್ಲದೆ ಬುಡಕಟ್ಟಿನ ಜನರೆಲ್ಲ ಸೇರಿ ಪೂಜಪ್ಪನಿಗೆ ಪೊಗದಸ್ತಾದ ಒಂದು ಮನೆ ಕಟ್ಟಿಸಿಕೊಡುವರೆಂದೂ, ಪ್ರತಿ ಸುಗ್ಗಿಯ ಕಾಲದಲ್ಲಿ ಬೆಳೆದ ದವಸಧಾನ್ಯಗಳಲ್ಲಿ ಒಂದು ಪಾಲನ್ನು ಪೂಜಪ್ಪನಿಗಾಗಿ ಮೀಸಲಿಡುವರೆಂದೂ ವಾಗ್ದಾನ ಮಾಡಿದ್ದ. ಇನ್ನು ಮುಂದೆ ಪೂಜಪ್ಪನು ಅನ್ನ ಬಟ್ಟೆಗಳಿಗೆ ಕೊರತೆಯಿಲ್ಲದೆ ಐಷಾರಾಮವಾಗಿ ಬದುಕಬಹುದೆಂದೂ, ಜನರು ಈತನನ್ನು ಬಣದ ಮುಖಂಡನಂತೆ ಗೌರವಾದರಗಳಿಂದ ಕಾಣುವರೆಂದೂ ಭರವಸೆ ನೀಡಿದ್ದ.

ಪೂಜಪ್ಪ ಹೊರಡಲಿದ್ದಾಗ ನಾಯಕ ಕೇಳಿದ್ದ – ''ಅಂದಹಾಗೆ ಆ ದುಷ್ಟ ದೇವತೆಯ ಹೆಸರು 'ಅಂಧಕಾಸುರ' ಎಂದೆಯಲ್ಲವೆ ?'' ಅದಕ್ಕೆ ಉತ್ತರವಾಗಿ ಪೂಜಪ್ಪನು ''ಊರ್ಧ್ವ ಲೋಕದಲ್ಲಿದ್ದಾಗ ಅವನ ಹೆಸರು ಅಂಧಕಾಸುರ ಎಂದು. ಅಧೋಲೋಕದಲ್ಲಿ ತಮೋದೈತ್ಯ, ಪೀಡೆ, ಪಿಶಾಚಿ, ರಾಹು, ಕೇಡಿಗ, ಪಾಪಪುರುಷ ಹೀಗೆ ಬಗೆಬಗೆಯ ಹೆಸರುಗಳನ್ನು ತಾಳಿದ. ಎಲ್ಲಕ್ಕಿಂತ ಹೆಚ್ಚು ಪರಿಚಿತವಾದದ್ದು ಪಾಪಪುರುಷ ಎಂಬುದು'' – ಎಂದಿದ್ದ.

ಆಗ ನಾಯಕನು ಬಿರುಗಾಳಿ ಬೀಸಿದಾಗ ತರಗುಟ್ಟುವ ಎಲೆಗಳಂತೆ ನಡುಗುವ ಧ್ವನಿಯಲ್ಲಿ ಪಾಪಪುರುಷ, ಪಾಪಪುರುಷ ಎಂದು ಮತ್ತೆ ಮತ್ತೆ ಹೇಳಿಕೊಂಡಿದ್ದ. ''ಪಾಪೋಹಂ, ಪಾಪಕರ್ಮಾಹಂ, ಪಾಪಾತ್ಮಾ, ಪಾಪಸಂಭವಃ...'' ಇತ್ಯಾದಿ ನುಡಿಗಳು ತಂತಾನೆ ಹೊರಬಿದ್ದವು. ಅವನನ್ನು ಮತ್ತಷ್ಟು ಹೆದರಿಸುವ ಸಲುವಾಗಿ ಪೂಜಪ್ಪನು ''ಆ ದೈತ್ಯಪುರುಷನ ಅಟಾಟೋಪಗಳು ಒಂದೆರಡಲ್ಲ. ಬಿರುಗಾಳಿಯಾಗಿ ಬೀಸಿ ಗುಡಿಸಲುಗಳನ್ನು ಉರುಳಿಸುತ್ತಾನೆ. ಕ್ಷಾಮ-ಡಾಮರಗಳಾಗಿ, ರೋಗ-ರುಜಿನಗಳಾಗಿ ಜನರನ್ನು ಕಾಡುತ್ತಾನೆ. ನಮಗೆಲ್ಲ ಬೆಳುದಿಂಗಳನ್ನು ಬೀರಿ ಸಂತೋಷಪಡಿಸುವ ರಾತ್ರಿದೇವನನ್ನು ಕಬಳಿಸಿ ಜಗತ್ತಿಗೆ ಅಂಧಕಾರ ಕವಿಯುವಂತೆ ಮಾಡುತ್ತಾನೆ. ಅವನ ಬಾಧೆಯನ್ನು ನಿವಾರಿಸಿಕೊಳ್ಳಬೇಕಾದರೆ ಅವನ ಸ್ವಭಾವವನ್ನು ಅರಿತುಕೊಂಡು, ಮಂತ್ರ ತಂತ್ರಗಳ ಮೂಲಕ ಪರಿಹಾರ ಕಂಡುಕೊಳ್ಳಬೇಕು'' ಎಂದು ಉಪದೇಶಿಸಿದ್ದ.

ನಾಯಕ ತನ್ನ ದಪ್ಪ ಊರೆಗೋಲಿನ ಮೇಲೆ ತಲೆಯಿಟ್ಟು ಆಲೋಚಿಸುತ್ತ ಹೇಳಿದ. ''ನಮ್ಮ ಮನೆಗಳು ಬೀಳುವಂತೆ ಬಿರುಗಾಳಿ ಎಬ್ಬಿಸುವ, ಜನರಲ್ಲಿ ರೋಗ-ರುಜಿನಗಳನ್ನು ಹರಡುವ. ನಮ್ಮನ್ನು ಕತ್ತಲೆಯಲ್ಲಿ ಕೆಡಹುವ ದುಷ್ಟನು ಯಾರೆಂಬುದು ಈಗ ಗೊತ್ತಾಯಿತು. ಇಂಥ ಪಾಪಪುರುಷನ ರಹಸ್ಯವನ್ನು ತಿಳಿಸಿದ್ದಕ್ಕಾಗಿ ನಾವೆಲ್ಲ ನಿನಗೆ ಕೃತಜ್ಞರಾಗಿರುತ್ತೇವೆ. ಇನ್ನು ಮುಂದೆ ಜನರು ಆ ಪಾಪಪುರುಷನ ಬಲೆಯಲ್ಲಿ ಬೀಳದಂತೆ ಎಚ್ಚರಿಸುವ ಜವಾಬ್ದಾರಿ ನಿನ್ನದು'' ಎಂದಿದ್ದ.

ಆ ರಾತ್ರಿ ಪೂಜಪ್ಪನ ಹೊರತಾಗಿ, ಬುಡಕಟ್ಟಿನ ಮುಖಂಡನೂ ಸೇರಿದಂತೆ ಜನರೆಲ್ಲ ಭೂತಪ್ರೇತಗಳು ಕಸಿವಿಸಿಗೊಳಿಸುವ ದುಃಸ್ವಪ್ನಗಳಿಂದ ಹಾಸಿಗೆಯಲ್ಲಿ ಹೊರಳಾಡುತ್ತ ನಿದ್ರೆಹತ್ತದೆ ರಾತ್ರಿಯನ್ನು ಕಳೆದರು.

ಪಾಪಯ್ಯ ಮಾತು ನಿಲ್ಲಿಸಿದಾಗ ಅಯ್ಯಾಸ್ವಾಮಿಗಳು ಭಯಭೀತರಾಗಿ ಅವನನ್ನೆ ದುರುಗುಟ್ಟಿ ನೋಡುತ್ತಿದ್ದರು; ಅವರ ತುಟಿಗಳಲ್ಲಿ ಮೃತ್ಯು ಸದೃಶವಾದ ನಿಸ್ತೇಜ ನಗೆಯೊಂದು ಸುಳಿದಿತ್ತು. ಪಾಪಯ್ಯ ಮತ್ತೆ ಬಾಯಿತೆರೆದ : ''ಈ ಭೂಮಿಯ ಮೇಲೆ ಅಂಧಕಾಸುರನಂಥವರು, ಪಾಪಪುರುಷರು ಹುಟ್ಟಿಬಂದ ಹಿನ್ನೆಲೆ ಹೀಗಿದೆ. ಪಾಪಪುರುಷನ ವಿಕಾರರೂಪವನ್ನು, ದುಷ್ಕೃತ್ಯಗಳನ್ನು ತಮ್ಮ ಕಸುಬಿನ ಕಚ್ಚಾವಸ್ತುವಾಗಿ ಬಳಸಿಕೊಂಡವನೆ ಪೂಜಪ್ಪ. ಆತನ ಮರಣಾನಂತರ ಅವನ ಮಕ್ಕಳು ಮೊಮ್ಮಕ್ಕಳು ಅವನನ್ನೆ ಅನುಸರಿಸಿದರು. ಹೀಗೆ ಅದೊಂದು ಸಂಪಾದನೆಯ ಮಾರ್ಗವಾಗಿ, ಗೌರವಾರ್ಹ ವೃತ್ತಿಯಾಗಿ ರೂಢಿಗೆ ಬಂದಿತು. ಯಾರ ಜ್ಞಾನ ಭಂಡಾರವು ಶ್ರೀಮಂತವಾಗಿತ್ತೊ, ಕಲ್ಪನಾಶಕ್ತಿಯು ಸಮೃದ್ಧವಾಗಿತ್ತೊ ಅಂಥವರು ಪಾಪಪುರುಷನ ಹೆಸರನ್ನು ಬಳಸಿಕೊಂಡು ಸುಖಸಾಧನಗಳನ್ನು ಪಡೆದರು.

''ಬ್ಯಾಬಿಲೋನಿನಲ್ಲಿ ಮಂತ್ರಪಠಣದ ಮೂಲಕ ಪಾಪಪುರುಷನೊಡನೆ ಹೋರಾಡುವ ಪುರೋಹಿತನ ಎದುರಿಗೆ ಜನ ಏಳೇಳು ಬಾರಿ ಬಾಗಿ ನಮಸ್ಕರಿಸಿದರು; ನೈನೆವಾದಲ್ಲಿ ಪಾಪಪುರುಷನ ರಹಸ್ಯಗಳನ್ನು ಬಲ್ಲವನೆಂದು ಭಾವಿಸಿದ್ದವನನ್ನು ದೇವರು ಮತ್ತು ಮನುಷ್ಯರ ನಡುವಿನ ಸುವರ್ಣ ಸೇತುವೆಯೆಂದು ತಿಳಿದರು; ಟಿಬೆಟ್‌ನಲ್ಲಿ ಪಾಪಪುರುಷನೊಡನೆ ಹೋರಾಡುವಾತನನ್ನು ಸೂರ್ಯ-ಚಂದ್ರರ ಸಂತಾನವೆಂದು ಪರಿಗಣಿಸಿದರು; ಬೈಬ್ಲಸ್, ಇಫೆಸಸ್, ಆಂಟಿಯಾಕ್‌ಗಳಲ್ಲಿ ಪಾಪಪುರುಷನನ್ನು ವಿರೋಧಿಸಬಲ್ಲವರಿಗೆ ತಮ್ಮ ಮಕ್ಕಳ ಪ್ರಾಣವನ್ನು ಸಮರ್ಪಿಸಿದರು; ಜೆರೂಸಲೆಂ, ರೋಮ್‌ಗಳಲ್ಲಿ ಸೈತಾನನ ವಿರುದ್ಧ ಹೋರಾಡಲು ಸಮರ್ಥರೆಂದು ಘೋಷಿಸಿಕೊಂಡವರಿಗೆ ತಮ್ಮ ಪ್ರಾಣಗಳನ್ನೆ ಒತ್ತೆಯಿಟ್ಟರು. ಭೂಮಂಡಲದ ಪ್ರತಿಯೊಂದು ನಗರ, ಗ್ರಾಮಗಳಲ್ಲಿ ಮತಧರ್ಮ, ಕಲಾವಂತಿಕೆ, ತತ್ವಶಾಸ್ತ್ರಗಳ ವೃತ್ತಕೇಂದ್ರದಲ್ಲಿ ಈ ಪಾಪಪುರುಷನಿರುತ್ತಾನೆ. ಹೀಗೆ ಎಂದೆಂದೂ ಅಳಿಯದ ದುಷ್ಟಶಕ್ತಿ ಈ ಪಾಪಪುರುಷ.

''ಈಗ ನೋಡಿದರೆ ನೀವು ನನ್ನನ್ನು ಪಾಪಪುರುಷನೊಂದಿಗೆ ಸಮನ್ವಯಗೊಳಿಸಿ ನನ್ನ ಮೈಮುಟ್ಟಲು ಹಿಂತೆಗೆಯುತ್ತಿದ್ದೀರಿ. ಚಿಂತೆಯಿಲ್ಲ. ಆದರೆ ಒಂದು ವಿಚಾರವನ್ನು ನೆನಪಿಡಿ. ನನ್ನನ್ನು ದಂಡಿಸುವ ಸಲುವಾಗಿಯೆ ಜನರು ಪೂಜಾಸ್ಥಳಗಳಿಗೆ ಹೋಗುತ್ತಾರೆ, ತೀರ್ಥಯಾತ್ರೆಗಳನ್ನು ಕೈಗೊಳ್ಳುತ್ತಾರೆ. ಅಥವಾ ಇನ್ನೊಂದು ಅತಿರೇಕದಲ್ಲಿ ನನ್ನನ್ನು ಸುಪ್ರೀತಗೊಳಿಸುವ ಸಲುವಾಗಿ ದುಶ್ಚಟಗಳಿಗೆ ದಾಸರಾಗುತ್ತಾರೆ. ನೀರವ ರಾತ್ರಿಯಲ್ಲಿ ತನ್ನ ಮಂಚದಿಂದ ನನ್ನನ್ನು ದೂರವಿಡುವ ಸಲುವಾಗಿ ಜಪದಮಣಿ ಎಣಿಸುವ ಸಂನ್ಯಾಸಿ ಮತ್ತು ತನ್ನ ಕೋಣೆಗೆ ಗೆಣಗಾರನನ್ನು ಸ್ವಾಗತಿಸುವ ವೇಶ್ಯೆ ಇಬ್ಬರ ಅಂತರಂಗದಲ್ಲೂ ನರ್ತಿಸುತ್ತಿರುವವನು ನಾನೆ. ನಾನು ಸರ್ವಾಂತರ್ಯಾಮಿ ಪಾಪಯ್ಯ !

''ನನ್ನ ಭಯದ ನೆಲಗಟ್ಟಿನ ಮೇಲೆ ಸಂನ್ಯಾಸಿ ಮಠಗಳೂ, ಋಷ್ಯಾಶ್ರಮಗಳೂ ನಿರ್ಮಾಣವಾಗಿವೆ. ಒಂದು ವೇಳೆ ನಾನು ನಾಶವಾಗಿಬಿಟ್ಟರೆ ಜಗತ್ತಿನಲ್ಲಿ ಭಯ ಮತ್ತು ಸಂತೋಷಗಳೆರಡೂ ಇಲ್ಲದಂತಾಗಿ ಮಾನವ ಹೃದಯವು ನಿರ್ಗುಣವೂ ನೀರಸವೂ ಆಗಿಬಿಡುತ್ತದೆ, ತಂತಿ ಹರಿದ ವೀಣೆಯಂತೆ. ಆದ್ದರಿಂದ, ಭೂಮಿಯ ಮೇಲೆ

ಪಾಪವೆಂಬುದೇ ಇಲ್ಲವಾಗಿಬಿಟ್ಟರೆ ಅದರ ವಿರುದ್ಧ ಹೋರಾಡುವವರ ಬದುಕು ಸಾಗುವುದು ಹೇಗೆ? ಅವರ ಕುಟುಂಬ ಪರಿವಾರಗಳು ನಾಶವಾಗಿಬಿಡುತ್ತವೆಯಲ್ಲವೆ? ಹೀಗಿರುವಾಗ ಈ ನಿರ್ಜನ ಅರಣ್ಯದ ನಡುವೆ ನನ್ನ ಹೃದಯ ಬಡಿತವು ನಿಂತುಹೋಗಲು ಬಿಡುತ್ತೀರಾ? ನನ್ನ ನಿಮ್ಮ ನಡುವಿನ ಸಂಬಂಧವನ್ನು ಕತ್ತರಿಸಿಹಾಕಲು ಇಚ್ಛಿಸುತ್ತೀರಾ? ಉತ್ತರಕೊಡಿ, ಸ್ವಾಮೀಜಿ!''

ಪಾಪಯ್ಯ ಕೈಗಳನ್ನು ಮುಂಚಾಚಿ, ತಲೆತಗ್ಗಿಸಿ ಏದುಸಿರುಬಿಟ್ಟಿದ್ದ; ಅವನ ಮುಖ ಬಿಳಿಚಿಕೊಂಡಾಗ ಅದು ಈಜಿಪ್ಟಿನ ನೈಲ್‌ನದಿ ತೀರದಲ್ಲಿ ಶತಶತಮಾನಗಳಿಂದ ವ್ಯರ್ಥವಾಗಿ ನಿಂತಿರುವ ಮೂರ್ತಿಗಳನ್ನು ನೆನಪಿಗೆ ತಂದಿತ್ತು. ಆಮೇಲೆ ಅವನು ತನ್ನ ಮಿರುಗುವ ಕಣ್ಣ ದೃಷ್ಟಿಯನ್ನು ಅಯ್ಯಾಸ್ವಾಮಿಗಳ ಮುಖದಲ್ಲಿ ಕೀಲಿಸಿ, ಕ್ಷೀಣಸ್ವರದಲ್ಲಿ ಹೇಳಿದ್ದ: ''ನಾನು ತಪ್ಪು ಮಾಡಿಬಿಟ್ಟೆ; ನನ್ನಲ್ಲಿ ಉಳಿದಿದ್ದ ಅಲ್ಪಸ್ವಲ್ಪ ತ್ರಾಣವನ್ನು ನಿಮಗೆ ಈಗಾಗಲೆ ಗೊತ್ತಿರುವ ವಿಚಾರವನ್ನು ವಿವರಿಸಲು ಬಳಸಿಕೊಂಡು ತಪ್ಪು ಮಾಡಿಬಿಟ್ಟೆ. ಇನ್ನು, ನಿಮಗಿಷ್ಟವಿದ್ದಂತೆ ಮಾಡಬಹುದು... ನನ್ನನ್ನು ನಿಮ್ಮ ಮನೆಗೆ ಎತ್ತಿಕೊಂಡುಹೋಗಿ, ನನ್ನ ಮೈಮೇಲಿನ ಗಾಯಗಳಿಗೆ ಮದ್ದು ಮಾಡಬಹುದು ಅಥವಾ ನನ್ನನ್ನು ಇಲ್ಲೆ ಸಾಯಲು ಬಿಟ್ಟುಹೋಗಬಹುದು.''

ಅಯ್ಯಾಸ್ವಾಮಿಗಳು ಕೈಗಳನ್ನು ಉಜ್ಜುತ್ತ, ಕ್ಷಮೆಯಾಚಿಸುವ ಧ್ವನಿಯಲ್ಲಿ ಹೇಳಿದ್ದರು. ''ಒಂದು ಗಂಟೆ ಮುಂಚೆ ನನಗೆ ತಿಳಿಯದ್ದು ಈಗ ತಿಳಿದಂತಾಯಿತು. ನನ್ನ ಅಜ್ಞಾನಕ್ಕಾಗಿ ವಿಷಾದಿಸುತ್ತೇನೆ. ಲೋಕದಲ್ಲಿ ನಿನ್ನ ಅಸ್ತಿತ್ವವು ಮನುಷ್ಯರಲ್ಲಿ ಪ್ರಲೋಭನೆಗಳನ್ನು ಪ್ರಚೋದಿಸುತ್ತದೆ; ದೇವರು ಮನುಷ್ಯರ ಆತ್ಮಬಲವನ್ನು ಅಳೆಯುವ ಸಾಧನವೆ ಪ್ರಲೋಭನೆ. ಒಂದು ವೇಳೆ ನೀನು ಸತ್ತುಬಿಟ್ಟರೆ ನಿನ್ನೊಡನೆ ಪ್ರಲೋಭನೆಗಳು ನಾಶವಾಗುತ್ತವೆ; ಆಮೇಲೆ ಮನುಷ್ಯರನ್ನು ಪಾಪದ ವಿರುದ್ಧ ಎಚ್ಚರಿಸುವ ಅಗತ್ಯವೆ ಉಳಿಯುವುದಿಲ್ಲ. ನೀನು ಬದುಕಬೇಕು; ಏಕೆಂದರೆ ನೀನು ಸತ್ತುಬಿಟ್ಟರೆ ಜನರಿಗೆ ಅದು ಗೊತ್ತಾಗಿ ಅವರಲ್ಲಿ ನರಕದ ಭಯವೇ ಇಲ್ಲವಾಗುತ್ತದೆ.. ನಿನ್ನ ಅಸ್ತಿತ್ವದಿಂದಾಗಿಯೆ ಪಾಪ-ಪುಣ್ಯಗಳೆಂಬುದಕ್ಕೆ ಅರ್ಥವಿದೆ...

''ಇನ್ನು ನನ್ನ ವಿಚಾರಕ್ಕೆ ಬಂದರೆ, ಮಾನವಲೋಕದ ಒಳಿತಿಗಾಗಿ, ಪ್ರೀತಿಯೆಂಬ ಪೀಠದ ಮೇಲೆ ನಾನು ನಿನ್ನ ಮೇಲಿನ ದ್ವೇಷವನ್ನು ಬಲಿಕೊಡುತ್ತೇನೆ.''

ಇಡೀ ಅರಣ್ಯವೇ ನಡುಗುವಂತೆ ಪಾಪಯ್ಯ ಗಹಗಹಿಸಿ ನಕ್ಕಿದ್ದ. ''ನೀವೆಷ್ಟೊಂದು ಬುದ್ಧಿವಂತರು ಸ್ವಾಮೀಜಿ! ಧರ್ಮಶಾಸ್ತ್ರಗಳ ಬಗ್ಗೆ ನಿಮ್ಮ ಪರಿಜ್ಞಾನ ಅಗಾಧವಾದುದು! ನಿಮ್ಮ ಜ್ಞಾನದ ಸಹಾಯದಿಂದ ನನ್ನ ಬದುಕಿಗೆ ಒಂದು ಅರ್ಥವನ್ನು – ಈವರೆಗೆ ನಾನೇ ಊಹಿಸದಿದ್ದ ಅರ್ಥವನ್ನು – ಕಂಡುಬಿಟ್ಟಿರಿ! ಈಗ ನಾವು ಹೇಗೆ ಒಬ್ಬರಿಗೊಬ್ಬರು ಅಗತ್ಯವೆಂಬುದನ್ನು ಇಬ್ಬರೂ ತಿಳಿದಂತಾಯಿತಲ್ಲವೆ!

''ಸೋದರನೇ ಹತ್ತಿರ ಬಾ; ಕತ್ತಲೆಯು ಇಡೀ ಬಯಲನ್ನು ಕಬಳಿಸುವ ಮುಂಚೆ ನನ್ನನ್ನು ಎತ್ತಿಕೂರಿಸು. ನನ್ನ ದೇಹದಲ್ಲಿದ್ದ ರಕ್ತದ ಬಹುಭಾಗ ಈಗಾಗಲೆ ಈ ನೆಲದ ಮೇಲೆ ಸೋರಿಹೋಗಿದೆ; ಈಗ ನೀನು ಸಹಾಯ ಮಾಡದಿದ್ದರೆ, ನಜ್ಜುಗುಜ್ಜಾದ ಈ ಶರೀರದಲ್ಲಿ ಉಳಿದಿರುವಷ್ಟನ್ನೂ ಸಾವು ಸ್ವಾಹಾ ಮಾಡಿಬಿಡುತ್ತದೆ.''

ಅಯ್ಯಾಸ್ವಾಮಿಗಳು ತಮ್ಮ ನಿಲುವಂಗಿಯ ತೋಳುಗಳನ್ನು ಮಡಿಚಿಕೊಂಡು ಪಾಪಯ್ಯನನ್ನು ಎತ್ತಿಕೂರಿಸಿದರು; ಆಮೇಲೆ ಆ ಗಾಯಾಳುವನ್ನು ಭುಜದ ಮೇಲೆ ಹೊತ್ತುಕೊಂಡು ನಿಧಾನವಾಗಿ ತಮ್ಮ ಮನೆಯತ್ತ ಹೆಜ್ಜೆ ಹಾಕತೊಡಗಿದರು.

* * *

ಕಣ್ಣತ್ತಲ ಮುಸುಕು ಧರಿಸಿ, ನೀರವದಲ್ಲಿ ಮುಳುಗಿ ಹೋಗಿದ್ದ ಕಣಿವೆಯ ದಾರಿಯಲ್ಲಿ ಅಯ್ಯಾಸ್ವಾಮಿಗಳು ಹೆಣಭಾರದ ಪಾಪಯ್ಯನನ್ನು ಹೆಗಲಲ್ಲಿ ಹೊತ್ತು, ಬೆನ್ನು ಬಾಗಿಸಿ ಬಿಡಾರದ ಕಡೆಗೆ ನಡೆಯುತ್ತಿದ್ದರು. ಗಾಯಾಳುವಿನ ಮೈಯಿಂದ ಜಿನುಗುವ ರಕ್ತದಲ್ಲಿ ಅವರ ಉಡಿಗೆ ಮತ್ತು ನೀಳವಾದ ಗಡ್ಡಗಳು ಒದ್ದೆಯಾಗಿದ್ದವು; ಆದರೂ ಅವರ ಪ್ರಯಾಸದಿಂದ ಮುಂದೆ ಹೋಗುತ್ತಿರುವಾಗ ಅವರ ತುಟಿಗಳು ಪ್ರಾರ್ಥಿಸುತ್ತಿದ್ದುದು ಸಾವಿನ ಹೊಸ್ತಿಲಲ್ಲಿರುವ ಪಾಪಯ್ಯನನ್ನು ಬದುಕಿಸುವ ಸಲುವಾಗಿ!

* * *

*[ಖಲೀಲ್ ಗಿಬ್ರಾನ್‌ನ ಪ್ರಬಂಧವೊಂದರ ಪ್ರೇರಣೆಯಿಂದ]*

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ತಿರುವು, ಕೆ. ಆರ್. ರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

## ಭಾಲಚಂದ್ರ ನೇಮಾಡೆ ಅವರ ಎರಡು ಪದ್ಯಗಳು

೧

ನೋಡಿದೆ ಹೊಟ್ಟೆಯೊಳಗಣ ಬಣ್ಣ
ಪಡೆದೆ ಬೆಚ್ಚಗಿನ ಅಪ್ಪುಗೆಯ ಕಾವು
ಗಂಧರ್ವ ಕೈ ಮೂಡಿತು ಎದೆಯೊಳಗೆ ಬೆನ್ನ ಹಿಂದೆ
ದೇಹದೊಳಗೆ ಯಾರು? ಯಾರೊಳಗೆ ಯಾರು?
ಗರ್ಭಿಣಿಯೊಳಗೆ ಇಂಥ ಪುಟ್ಟ ಪೋರಿ
ಕೊಡದ ನೀರೊಳಗೆ ಚಂದಿರನ ನೆರಳು

ಅವ್ವನೊಳಗೆ ಅವ್ವ ಒಬ್ಬಂಟಿ ಅವ್ವ
ಒಂದಕ್ಕಿಂತ ಹೆಚ್ಚು ಮೊಟ್ಟೆಯಿಡಬೇಡ ಅಮ್ಮಯ್ಯ
ನನ್ನ ಹೊಕ್ಕಳಿಗೆ ನಿನ್ನದೇ ಭೀತಿ
ನೆತ್ತಿ ಮೇಲಿದೆ ಗೋಲಾಕಾರದ ಎರಡು ಸುಳಿ
ಮತ್ತು ನಿನ್ನ ಧನರೇಖೆ ನನ್ನ ಕೈಯಲ್ಲಿದೆ
ಎಲ್ಲವೂ ನಿನ್ನದು. ಆದರೆ ನಿನ್ನ ಎದೆ ಹಾಲು
ನನ್ನ ಹೊರತು ಕೊಡಬೇಡ ಬೇರೆ ಯಾರಿಗೂ
ನಿನ್ನ ಮೊಲೆ ನನಗೇ ಮೀಸಲು.

೨

ತನ್ನದೇ ಹಾದಿ ಹಿಡಿದು ಹೋಗುವ ದಿನ
ಸಂಜೆ ಹೊತ್ತಿಗೆ ಆಗಾಗ ಕೇಳುತ್ತದೆ
ಅದು ಮೂಲ ಸ್ವರದ ಜತೆ ಸೇರುತ್ತದೆ
ದಿನದ ಸಹಿತ ಹಾದಿ ಸಹಿತ ಕೇಳುವ ಸಹಿತ ಆ ಸ್ವರದ ಸಹಿತ
ಇದೆಲ್ಲ ಒಂದೇ ವಾಕ್ಯದಲ್ಲಿ ಹೇಳುವದು ಸಾಧ್ಯವಿದ್ದರೆ ಹೇಳು
ನನ್ನಪ್ಪ ಹೊಲ ಮಾರಬಹುದು. ಮನೆ ಮಾರಬಹುದು ಹಣ ಮಾರಬಹುದು
ಖರೀದಿ ಮಾಡುವವರು ಇದ್ದಾರೆ
ಹೀಗೆ ಎಷ್ಟೋ ಸಂಗತಿಗಳಿವೆ ನನ್ನ ಸಹಿತ
ಈಗಲೂ ಉಳಿದಿದೆ
ಅಪ್ಪನ ವಿನಾ ಅಮ್ಮನಿಲ್ಲ, ಅಮ್ಮನ ವಿನಾ ನಾನಿಲ್ಲ
ನನ್ನ ವಿನಾ ಏನೂ ಇಲ್ಲ, ಇದೇ ವಿನಾ ಇಲ್ಲ ಇಲ್ಲ

ಮರಾಠಿ ಮೂಲ: ಡಾ|| **ಭಾಲಚಂದ್ರ ನೇಮಾಡೆ**
ಅನುವಾದ: **ಚಂದ್ರಕಾಂತ ಪೋಕಳೆ**
ಕನ್ನಡ ಉಪನ್ಯಾಸಕರು, ಬಿಎಸ್‌ಪಿಯು ಕಾಲೇಜು, ಬೇಡಕಿಹಾಳ
ಬೆಳಗಾವಿ ಜಿಲ್ಲೆ - ೫೯೧ ೨೧೪



## ಬಿ. ಎಂ. ರೋಹಿಣಿ ಅವರ

# ಸ್ತ್ರೀ ಸಂಸ್ಕೃತಿ ಶಿಕ್ಷಣ

**ಮಹಿಳಾಪರವಾದ ತಿಳುವಳಿಕೆಗಳು ಮಹಿಳಾ ಶೋಷಣೆಯ ಚಾರಿತ್ರಿಕ ಹಿನ್ನೆಲೆಗಳನ್ನು ಪರಿಚಯಿಸುವುದರೊಂದಿಗೆ ಸಮಕಾಲೀನ ಜಗತ್ತಿನ ಮಹಿಳಾ ಸ್ಥಿತಿಗತಿಗಳು ಮತ್ತು ಭಾರತೀಯ ಸಂದರ್ಭದಲ್ಲಿ ಮಹಿಳೆಯ ಸ್ಥಿತಿಗತಿಗಳ ನಡುವಿನ ಭಿನ್ನತೆ ಹಾಗೂ ಸಂಕೀರ್ಣತೆಯನ್ನು ನಿರ್ವಚಿಸುತ್ತವೆ.**



ನಮ್ಮ ನಡುವಿನ ಪ್ರಮುಖ ಲೇಖಕಿಯರಲ್ಲೊಬ್ಬರಾದ ಬಿ.ಎಂ. ರೋಹಿಣಿ ಅವರ 'ಸ್ತ್ರೀ ಸಂಸ್ಕೃತಿ ಶಿಕ್ಷಣ' ಕೃತಿಯಲ್ಲಿ ಪ್ರಗತಿಪರವಾದ, ತುಸು ಎಡಪಂಥೀಯ ದೃಷ್ಟಿಕೋನವುಳ್ಳ ಮೂವತ್ತೆರಡು ಲೇಖನಗಳಿವೆ. ಗಂಭೀರ ಚಿಂತನೆ, ಹದಗೊಂಡ ಜೀವನಾನುಭವಗಳಿಂದ ಪಕ್ವಗೊಂಡಿರುವ ಇಲ್ಲಿನ ಬರಹಗಳು ಸಿದ್ಧಾಂತ-ಸಿದ್ಧಾಂತಾತೀತ, ತರ್ಕ-ತರ್ಕಾತೀತ ನೆಲೆಗಳಲ್ಲಿ ಮಾನವೀಯ ಮಿಡಿತವನ್ನು ಹೊರಗೆಡಹುತ್ತಾ ಸಮನ್ವಯದ ದಾರಿಯಲ್ಲಿ ಮುನ್ನಡೆಯುತ್ತವೆ. ಈ ಕೃತಿಯ ಉದ್ದಗಲಕ್ಕೂ ಒಬ್ಬ ಮಹಿಳೆ ಮತ್ತೊಬ್ಬ ಮಹಿಳಾವಾದಿ ಮಾತನಾಡುತ್ತಾ ಹೋಗುವುದನ್ನು ಕಾಣಬಹುದು.

ಬಹುಶಃ ರೋಹಿಣಿಯವರಂತೆ ಬರೆಯುವವರು ವಿರಳ. ಅವರ ಯಾವುದೇ ಚರ್ಚೆ ಚಿಂತನೆಯನ್ನು ವಾಸ್ತವದಿಂದ ತುಂಬಾ ಎತ್ತರಕ್ಕೆ ಕೊಂಡೊಯ್ದು ಚಿಂತನೆಯಾಗಿ ಶ್ರೇಷ್ಠವೆನಿಸಬಹುದಾದ್ದು; ಆದರೆ ವಾಸ್ತವದಲ್ಲಿ ಜಾರಿಗೊಳಿಸಲಾಗದ ತಿಳುವಳಿಕೆಯಲ್ಲ. ಉದಾಹರಣೆಗೆ ಹೇಳುವುದಾದರೆ ಸದ್ಯದ ಶಿಕ್ಷಣ ವ್ಯವಸ್ಥೆಯ ಅಳ್ಳಕಗಳನ್ನು ಪರಿಶೀಲಿಸುವ ರೋಹಿಣಿಯವರು ನಮ್ಮ ಬಹುತೇಕ ಶಿಕ್ಷಣ ಚಿಂತಕರಂತೆ ಅಮೆರಿಕ-ಇಂಗ್ಲೆಂಡ್‌ಗಳ ಶಿಕ್ಷಣ ವ್ಯವಸ್ಥೆಯ ಮಾದರಿ ಇಟ್ಟುಕೊಂಡು ನೋಡುವುದಿಲ್ಲ. ಬದಲು ಈ ಸಮಾಜದ ಸ್ಥಿತಿಗತಿಗಳನ್ನು, ನಮ್ಮ ಮಕ್ಕಳ-ಪಾಲಕರ ಮನೋಧರ್ಮವನ್ನಿಟ್ಟುಕೊಂಡು, ನಮ್ಮ ಶಿಕ್ಷಕರು ಮತ್ತು ಅಧಿಕಾರಿವರ್ಗದ ತಿಳಿವಳಿಕೆಗಳನ್ನಿಟ್ಟುಕೊಂಡು ನೋಡುತ್ತಾರೆ. ಆದ್ದರಿಂದಲೇ ಶಿಕ್ಷಕ ಕೇರ್ ಆಫ್ ಫುಟ್‌ಪಾತ್ ಆಗಿ ವಿದ್ಯಾರ್ಥಿಯನ್ನು ಸರ್ವಾಧಿಕಾರಿಯನ್ನಾಗಿ ಮಾಡುವ ಆಧುನಿಕ ಶಿಕ್ಷಣ ಚಿಂತಕರ ತಿಳುವಳಿಕೆಯೂ ಅಲ್ಲದ; ವಿದ್ಯಾರ್ಥಿ ಮಣ್ಣಿನ ಮುದ್ದೆಯಾಗಿ ಶಿಕ್ಷಕ ಅದನ್ನು ತನಗೆ ಬೇಕಾದ ಹಾಗೆ ತುಳಿಯುವ ಸಾರ್ವಭೌಮನೂ ಅಲ್ಲದ; ಇತ್ತಂಡಕ್ಕೂ ಸಹನೀಯವಾಗಬಲ್ಲ ಪ್ರಗತಿಪರವಾದ ಶಿಕ್ಷಣ ಚಿಂತನೆಗಳನ್ನು ಕೊಡಲು ರೋಹಿಣಿಯವರಿಗೆ ಸಾಧ್ಯವಾಗಿದೆ. ಪಾಲಕರು ಮತ್ತು ಮಕ್ಕಳ ಸಂಬಂಧ, ಮಕ್ಕಳನ್ನು ಸುಸಂಸ್ಕೃತ ನಾಗರಿಕರನ್ನಾಗಿ ರೂಪುಗೊಳಿಸುವಲ್ಲಿ ಪಾಲಕರ ಜವಾಬ್ದಾರಿ, ತಾಯಿ-ತಂದೆಯರ ಪರಸ್ಪರ ಸಂಬಂಧ ಮಕ್ಕಳ ಮೇಲೆ ಬೀರುವಂತಹ ಪರಿಣಾಮ ಇವನ್ನೆಲ್ಲ ರೋಹಿಣಿಯವರು ತುಂಬಾ ಆಪ್ತ ಧಾಟಿಯಲ್ಲಿ ಸಲಹಾ ರೂಪದಲ್ಲಿ ಮುಂದಿಟ್ಟಿದ್ದಾರೆ.

ರೋಹಿಣಿಯವರ ಮಹಿಳಾಪರವಾದ ತಿಳುವಳಿಕೆಗಳು ಮಹಿಳಾ ಶೋಷಣೆಯ ಚಾರಿತ್ರಿಕ ಹಿನ್ನೆಲೆಗಳನ್ನು ಪರಿಚಯಿಸುವುದರೊಂದಿಗೆ ಸಮಕಾಲೀನ ಜಗತ್ತಿನ ಮಹಿಳಾ ಸ್ಥಿತಿಗತಿಗಳು ಮತ್ತು ಭಾರತೀಯ ಸಂದರ್ಭದಲ್ಲಿ ಮಹಿಳೆಯ ಸ್ಥಿತಿಗತಿಗಳ ನಡುವಿನ ಭಿನ್ನತೆ ಹಾಗೂ ಸಂಕೀರ್ಣತೆಯನ್ನು ನಿರ್ವಚಿಸುತ್ತವೆ. ಸಾಂಪ್ರದಾಯಿಕ ಜೀವನಕ್ರಮದಲ್ಲಿ ಮಹಿಳೆಯ ಮೇಲೆ ನಡೆಯುತ್ತಿದ್ದ ದೌರ್ಜನ್ಯ ಮತ್ತು ಅತ್ಯಾಧುನಿಕ ಜೀವನ ವ್ಯವಸ್ಥೆಯಲ್ಲಿ ಕೂಡ ಮಹಿಳೆಯರ ಮೇಲೆ ಆಗುತ್ತಿರುವ ಆಧುನಿಕ ಸ್ವರೂಪದ ದೌರ್ಜನ್ಯವೆರಡಕ್ಕೂ ಮಹಿಳೆಯನ್ನು ಒಂದು ವ್ಯಕ್ತಿತ್ವವಾಗಿ ನೋಡದೆ ಲೈಂಗಿಕ ತೃಪ್ತಿಯನ್ನು ಸಾಧಿಸಿಕೊಳ್ಳುವ ಸರಕಾಗಿ ಪರಿಗಣಿಸಿರುವುದು ಕಾರಣ ಎನ್ನುವುದನ್ನು ಗಮನಿಸಿರುವ ರೋಹಿಣಿಯವರು ಯಾವುದೇ ವ್ಯವಸ್ಥೆಗಿಂತ ಮುಖ್ಯವಾಗಿ ಮನುಷ್ಯನ ಮನೋಧರ್ಮದಲ್ಲಾಗಬೇಕಾದ ಸುಧಾರಣೆಯತ್ತ ಗಮನ ಸೆಳೆಯುತ್ತಾರೆ. ಪ್ರಾಯಶಃ ನಮ್ಮ ಪ್ರಗತಿಪರ ಹೋರಾಟಗಳೆಲ್ಲವಕ್ಕೂ ಈ ನಿಲುವು ಹೆಚ್ಚು ಅನುಸರಣೀಯವಾದುದಾಗಿದೆ.

ಸಮಕಾಲೀನ ಸಾಮಾಜಿಕ, ರಾಜಕೀಯ, ನ್ಯಾಯಿಕ, ಸಾಂಸ್ಕೃತಿಕ ಸಂಗತಿಗಳನ್ನೆಲ್ಲ ತಮ್ಮ ಮೂಲ ಮಹಿಳಾವಾದಿ ದೃಷ್ಟಿಯಲ್ಲಿ ನೋಡುವ ರೋಹಿಣಿಯವರು ಜೊತೆಗೆ ಇದೆಲ್ಲವನ್ನೂ ಮನುಷ್ಯ ಸಂಬಂಧಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುತ್ತಾರೆ ಎನ್ನುವುದು ಗಮನಾರ್ಹ ಸಂಗತಿ. ಯಾವುದೇ ತಿಳುವಳಿಕೆ ಜೀವನ ಸಂಬಂಧಗಳ ತಳಪಾಯದ ಮೇಲೆ ಕಟ್ಟಲ್ಪಡದಿದ್ದರೆ ಅದು ಎಷ್ಟೇ ಶ್ರೇಷ್ಠವಿದ್ದರೂ ನಿಷ್ಪ್ರಯೋಜಕ, ಚೈತನ್ಯರಹಿತ ಸರಕಾಗುತ್ತದೆ. ರೋಹಿಣಿಯವರ ನಿಲುಮೆಗಳು ಸೈದ್ಧಾಂತಿಕ ಮಹಿಳಾವಾದಕ್ಕಿಂತ ಭಿನ್ನವಾಗಿ ನಿಲ್ಲುವುದು ಇಲ್ಲಿಯೇ. ಸಿದ್ಧಾಂತದ ಹಿನ್ನೆಲೆಯಲ್ಲಿ ಬದುಕನ್ನು ನೋಡುವುದಕ್ಕೂ ಬದುಕಿನ ಹಿನ್ನೆಲೆಯಲ್ಲಿ ಸಿದ್ಧಾಂತವನ್ನು ರೂಪಿಸುತ್ತಾ ಹೋಗುವುದಕ್ಕೂ ವ್ಯತ್ಯಾಸವಿದೆ. ರೋಹಿಣಿಯವರು ಎರಡನೆಯದನ್ನು ಆಯ್ಕೆ ಮಾಡಿಕೊಂಡು ಮೊದಲನೆಯದರ ಗರಿಷ್ಠ ಸಾಧ್ಯತೆಯ ಅನ್ವೇಷಣೆ ನಡೆಸುತ್ತಾರೆ. ಅದರಿಂದಾಗಿ ರೋಹಿಣಿಯವರ ಚಿಂತನೆಗೆ ಹೆಚ್ಚು ವಿಶಾಲ ವ್ಯಾಪ್ತಿ ಸಿಗಲು ಸಾಧ್ಯವಾಗಿದೆ.

ಆದಾಗ್ಯೂ ಒಂದು ಸ್ಥಿತಿಯನ್ನು ಅದರ ಮೂಲ ತಿಳುವಳಿಕೆಗಳ ಹಿನ್ನೆಲೆಯಲ್ಲಿ ಪರಿಶೀಲಿಸಲು ರೋಹಿಣಿಯವರಿಗೆ ಕೊಂಚ ಕಷ್ಟವಾಗುತ್ತದೆ. ಉದಾಹರಣೆಗೆ, ಗಾಂಧೀಜಿಯವರ ಮಹಿಳಾವಾದಿ ತಿಳುವಳಿಕೆಗಳನ್ನು ಪರಿಶೀಲಿಸುವಾಗ ಗಾಂಧೀಜಿಯವರ ಪ್ರಧಾನ ಫೋಕಸ್ ಇದ್ದುದು ಮಹಿಳೆಯರ ಕಡೆಗಲ್ಲ; ಆದ್ದರಿಂದ ಅವರ ತಿಳುವಳಿಕೆಗಳಲ್ಲಿ ಸಹಜವಾಗಿ ಅಳ್ಳಕಗಳು ಬಂದಿರುತ್ತವೆ ಎನ್ನುವುದರತ್ತ ಆಸಕ್ತಿ ವಹಿಸದೆ; ಗಾಂಧೀಜಿ ಕೂಡ ಮಾನವ ಸಹಜ ದೌರ್ಬಲ್ಯಗಳಿಂದ ಕೂಡಿದ ವ್ಯಕ್ತಿ ಎನ್ನುವುದನ್ನು ಬದಿಗಿರಿಸಿ ಸೈದ್ಧಾಂತಿಕ ದೃಷ್ಟಿಯಿಂದ ಅವರನ್ನು ಸ್ವೀಕರಿಸಲಾಗಿದೆ. ಮಹಿಳೆಯರ ಸ್ಥಿತಿಗತಿಗಳ ಕೂಲಂಕಷ ತನಿಖೆ ನಡೆಸುವಾಗ ಇನ್ನೊಂದು ಬದಿಯಲ್ಲಿರುವ ಪುರುಷನ ಪರಕಾಯ ಪ್ರವೇಶ ಮಾಡಿ ಆತನಿಗೂ ಇರುವ ಮಿತಿಗಳನ್ನು ಗಮನಿಸುವಲ್ಲಿ ಕೊಂಚ ಹಿನ್ನಡೆ ಉಂಟಾಗಿರುವುದನ್ನು ಕಾಣಬಹುದು. ಭಾರತದಂತಹ ದೇಶದಲ್ಲಿ ಪ್ರದೇಶ, ಜನಾಂಗ, ಪರಿಸರಕ್ಕೆ ಸಂಬಂಧಿಸಿ ಮಹಿಳಾ ಶೋಷಣೆಯಲ್ಲಿ ಆಗುವ ಸ್ವರೂಪಾತ್ಮಕ ವ್ಯತ್ಯಾಸವನ್ನು ಗುರುತಿಸಲು ತೊಂದರೆಯುಂಟಾಗಿ ಮಹಿಳಾ ಶೋಷಣೆ ವಿಸ್ತಾರವಾದ ನೆಲೆಗಳನ್ನು ಕಂಡುಕೊಳ್ಳಲು ಕಷ್ಟವಾಗಿದೆ. ಆದಾಗ್ಯೂ, ಕೃತಿಯಲ್ಲಿ ಮಹಿಳಾ ಶೋಷಣೆಯ ಸಾಮಾನ್ಯ ಅಂಶಗಳೆ ಇವೆ. ಆದರೆ ಆ ಸಾಮಾನ್ಯ ಅಂಶಗಳಿಗೆ ಭಿನ್ನ ಸನ್ನಿವೇಶದ ಹಲವಾರು ಭಿನ್ನ ಶೋಷಣಾ ಅಂಶಗಳು ಬೇರೆ ಬೇರೆ ರೀತಿ ಕಾರಣವಾಗಿರುತ್ತವೆ. ಅಂಥಲ್ಲಿ ಸಾಮಾನ್ಯೀಕೃತ ಶೋಷಣಾ ಅಂಶಗಳನ್ನು ನಿವಾರಿಸಬೇಕಾದರೆ ಭಿನ್ನ ಸ್ವರೂಪದಲ್ಲಿರುವ ಶೋಷಣಾ ಪರಿಕರಗಳಿಗೆ ಕಾರಣಗಳನ್ನು ಹುಡುಕಿ ನಿವಾರಿಸಬೇಕಾದ ಅಗತ್ಯವಿರುತ್ತದೆ.

ಯಾವನೇ ಬರಹಗಾರ/ಬರಹಗಾರ್ತಿಯರಿಗಿರುವ ಈ ಎಲ್ಲ ಸಹಜ ಮಿತಿಗಳ ಬಳಿಕವೂ ಪ್ರಸ್ತುತ ಕೃತಿಯ ಒಡಲಲ್ಲಿ ಇರುವ ಸೂಕ್ಷ್ಮಜ್ಞತೆ, ಸಂವೇದನಾಶೀಲತೆ, ಮುನ್ನೋಟ, ಮಾನವೀಯ ಕಾಳಜಿ-ಕಳಕಳಿಗಳಿಂದಾಗಿ ಓದುಗನ ಹೃದಯದ ಕದವನ್ನು ಆಪ್ತವಾಗಿ ತಟ್ಟುತ್ತದೆ. ರೋಹಿಣಿಯವರ ಚಿಕಿತ್ಸಕ ದೃಷ್ಟಿ ಓದುಗನನ್ನು ಮೆಲ್ಲನೆ ತಟ್ಟಿ ಎಬ್ಬಿಸುತ್ತದೆ. ಬದುಕಿನ ಭರಾಟೆಯಲ್ಲಿ ಕೊಂಚ ಕಾಲ ತಡೆದು ಯೋಚಿಸುವಂತೆ ಮಾಡುತ್ತದೆ. ಯುವ ಜನಾಂಗಕ್ಕೆ ಭರವಸೆಯ ಬೆಳಕು ಹಿಡಿಯುತ್ತಾ ನವಜೀವನದತ್ತ ಪಯಣಕ್ಕೆ ಕರೆಕೊಡುತ್ತದೆ. ಆದ್ದರಿಂದಲೇ ಜೀವನಪ್ರೇಮಿಗಳೆಲ್ಲರೂ ಈ ಕೃತಿಯನ್ನು ಓದಬೇಕು.



ಅರವಿಂದ ಚೊಕ್ಕಾಡಿ
ಕೋಡಂಗಲ್ಲು ಅಂಚೆ
ಮೂಡಬಿದಿರೆ, ದಕ್ಷಿಣ ಕನ್ನಡ





## ಪ್ರೀತಿಯ ಬದುಕು

*ಡಾ|| ಜಿ. ಪ್ರಶಾಂತ ನಾಯಕ*

**ಪುಟ : ೨೬೦** **ಬೆಲೆ : ರೂ. ೧೨೦**

**ಜಿ. ಪ್ರಶಾಂತ ನಾಯಕ,** ಕನ್ನಡ ಭಾರತಿ,
ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ - ೫೭೭ ೪೫೧

ಕವಿ ಕೆ. ಎಸ್. ನರಸಿಂಹ ಸ್ವಾಮಿಯವರು ಮಲ್ಲಿಗೆಯ ಕವಿಯೆಂದೇ ಪ್ರಸಿದ್ಧರು. ಅವರ ಕಾವ್ಯದ ನಾಯಕ ಸದ್ಗೃಹಸ್ಥ; ಅಂತೆಯೇ ನಾಯಕಿ ಸದ್ಗೃಹಿಣಿಯಾಗಿದ್ದು ಸಂಸಾರದ ಎಲ್ಲ ಸುಂದರ ಸುಕೋಮಲ ಭಾವನೆಗಳಿಗೆ ಪ್ರತೀಕವಾಗಿದ್ದಾರೆ. ಮಲ್ಲಿಗೆಯ ನವಿರಾದ ಕಂಪನ್ನು ಬೀರುವಂತಹ ಅವರ ಕವನಗಳು ಹೊಸಬಾಳಿಗೆ ಕಾಲಿಡುವ ಹೊಸಜೋಡಿಗಳಿಗೆ ಅತ್ಯಂತ ಪ್ರಿಯವೆನಿಸಿವೆ. ಸಾಂಪ್ರದಾಯಿಕ ಚೌಕಟ್ಟಿನೊಳಗೆ ಒಲವು-ಗೆಲುವುಗಳನ್ನೂ ಸಮರಸದ ಬಾಳ್ವೆಯನ್ನೂ ಚಿತ್ರಿಸಿದ ಅವರ ಕಾವ್ಯವನ್ನು ನೋಡುವುದೆಂದರೆ ಒಂದು ಶತಮಾನದ ಅರ್ಥಪೂರ್ಣ ಬದುಕನ್ನು ಆಸ್ವಾದಿಸಿದಂತೆಯೇ ಸರಿ. ಈ ಕೃತಿ ಅವರ ಕಾವ್ಯದ ಒಂದು ಅಧ್ಯಯನ. ಬದಲಾದ ಕಾಲಮಾನಕ್ಕೆ ತಕ್ಕಂತೆ ಪರಿಸರಕ್ಕೆ ಹೊಂದಿಕೊಂಡು ರೂಪುಗೊಳ್ಳುತ್ತ ಬಂದ ಅವರ ಹೊರಳುದಾರಿಯನ್ನು ಗುರುತಿಸಲಾಗಿದೆ. ಬದುಕನ್ನು ಆಳವಾಗಿ ಪ್ರೀತಿಸುವ ಕವಿ-ಕಾವ್ಯದ ಪರಿಚಯ.

## ನಾಥ ಸಂಪ್ರದಾಯದ ಇತಿಹಾಸ



*ಮೂಲ : ರಾಮಚಂದ್ರ ಚಿಂತಾಮಣ ಢೇರೆ*

*ಕನ್ನಡಕ್ಕೆ : ಚಂದ್ರಕಾಂತ ಪೋಕಳೆ*

**ಪುಟ : ೨೫೨** **ಬೆಲೆ : ರೂ. ೧೦೦**

**ಕನ್ನಡ ಜಾಗೃತಿ ಪುಸ್ತಕಮಾಲೆ,** ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನ ಮಠ, ಚಿಂಚಣಿ - ೫೯೧ ೨೭೨

ಮಹಾರಾಷ್ಟ್ರದಲ್ಲಿ ಅಸ್ತಿತ್ವದಲ್ಲಿದ್ದ ಬಹುಹಿಂದಿನ ನಾಥ ಸಂಪ್ರದಾಯದ ಇತಿಹಾಸವನ್ನು ತಿಳಿಸಿಕೊಡುವ ಪುಸ್ತಕ. ಮತ್ಸ್ಯೇಂದ್ರನಾಥ, ಗೋರಖನಾಥರಂಥವರ ಉಲ್ಲೇಖಗಳಿರುವ ಇಂಥ ಯೋಗಿಗಳ ಗುರುಪರಂಪರೆಯಲ್ಲಿ ಮುಂದುವರೆದಂತೆ ಜ್ಞಾನದೇವ-ನಾಮದೇವ-ಕಬೀರ್-ನಾನಕ್‌ರವರ ಹೆಸರುಗಳೂ ಸೇರ್ಪಡೆಯಾಗಿವೆ. ಅನೇಕ ವಾಮಾಚಾರ, ತಂತ್ರಸಿದ್ಧಿಗಳನ್ನೊಳಗೊಂಡ ಸಾಧನಾ ತಪಸ್ಸಿನಲ್ಲಿ ಸಾಕಷ್ಟು ಗೊಂದಲಗಳೂ ಶಾಖಾಭೇದಗಳೂ ಕ್ರಮೇಣ ಉದ್ಭವಿಸಿದ್ದು ಮುಂದೆ ಗೋರಕ್ಷನಾಥನು ಈ ಸಾಧನೆಗಳನ್ನು ಶುದ್ಧೀಕರಣ ಮಾಡಿದನೆಂದು ಹೇಳಲಾಗುತ್ತಿದೆ. ನಾಥ ಪಂಥ ಬೆಳೆಸಲು ಕಾರಣರಾದ ಅನೇಕ ಸಂತರನ್ನು ಅವರ ಸಮಕಾಲೀನ ಸಾಮಾಜಿಕ ಪರಿಸರದೊಂದಿಗೆ ಪರಿಚಯಿಸಲಾಗಿದೆ. ಸಿದ್ಧರು, ತಪಸ್ವಿಗಳು ಮತ್ತು ಅವಧೂತರು ಸಾಕಷ್ಟು ಇರುವ ಈ ಪಂಥ ಭಾರತೀಯ ಪ್ರಾಚೀನ ಪ್ರಜೆಗಳನ್ನು ಹೇಗೆ ಮೋಡಿ ಮಾಡಿರಬಹುದೆಂಬುದು ಕುತೂಹಲದ ಅಂಶ.



## ಕರ್ನಾಟಕ ಏಕೀಕರಣ ಹೋರಾಟ ಮತ್ತು ಮಹಿಳೆ

*ಡಾ|| ಶ್ರೀಮತಿ ರತ್ನಶೀಲಾ ಶಿವಲಿಂಗಪ್ಪ ಗುರಡ್ಡಿ*

**ಪುಟ : ೧೨೦** **ಬೆಲೆ : ರೂ. ೪೦**

**ಕನ್ನಡ ಜಾಗೃತಿ ಪುಸ್ತಕಮಾಲೆ,** ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನ ಮಠ, ಚಿಂಚಣಿ - ೫೯೧ ೨೭೨

ಸಮಗ್ರ ಕರ್ನಾಟಕದ ಏಕೀಕರಣಕ್ಕಾಗಿ ಶ್ರಮಿಸಿದ ಅಸಂಖ್ಯ ಜನರಲ್ಲಿ ಮಹಿಳೆಯರ ಕೊಡುಗೆಯನ್ನು ಅಲಕ್ಷಿಸುವಂತಿಲ್ಲ. ಯಾರ ಒತ್ತಡಕ್ಕೂ ಮಣಿಯದೆ ಸ್ವಯಂ ಪ್ರೇರಣೆಯಿಂದಲೇ ಹೋರಾಟ ಚಳುವಳಿಗಳನ್ನು ಬೆಂಬಲಿಸಿ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಸಹಕರಿಸಿದವರಿದ್ದಾರೆ. ಮನೆಯ ಗೋಡೆಯೊಳಗೆ ಬಂದಿಯಾಗಿ ಇರಬಯಸದೆ ಕೆಲವು ಮಹಿಳೆಯರು ನಾಡು-ನುಡಿಯ ಬಗ್ಗೆ ಪ್ರಜ್ಞೆಯನ್ನು ಬೆಳೆಸಿಕೊಂಡು ಮಹಿಳಾ ಸಬಲೀಕರಣದ ಬಗ್ಗೆ ದಿಟ್ಟ ಹೆಜ್ಜೆ ಇರಿಸಿದ್ದಾರೆ. ಭಾಷಾವಾರು ಪ್ರಾಂತ್ಯ ರಚನೆಯಾಗಬೇಕೆಂಬ ಪ್ರಜ್ಞೆಯು ''ಕರ್ನಾಟಕ ಸಭಾ'' ಸ್ಥಾಪನೆಯ ನಂತರ ಕನ್ನಡಿಗರಲ್ಲಿ ಮಿಂಚಿನಂತೆ ಸುಳಿದು ಮುಂದೆ ಹೋರಾಟಕ್ಕೆ ನಾಂದಿಯಾಯಿತು. ಅಂಥ ಚಳುವಳಿಗಳಲ್ಲಿ ಸಹಕರಿಸಿದ ಕೆಲವು ಮಹಿಳೆಯರ ಸಂಕ್ಷಿಪ್ತ ಪರಿಚಯವನ್ನು ಈ ಕೃತಿ ಒಳಗೊಂಡಿದೆ. ನಾಡನ್ನು ಪ್ರತ್ಯೇಕಿಸಲು ಹವಣಿಸುತ್ತಿರುವ ಇಂದಿನ ಸಂದರ್ಭಕ್ಕೆ ಏಕೀಕರಣದ ಮಹತ್ವವನ್ನು ತಿಳಿಸುವ ಒಂದು ಪ್ರಯತ್ನ.

## ಮಹಿಳಾ ಕಾವ್ಯದಲ್ಲಿ ಹೆಣ್ಣಿನ ಪರಿಕಲ್ಪನೆ



*ಡಾ|| ಬಿ. ಪಿ. ಆಶಾಕುಮಾರಿ*

**ಪುಟ : ೨೭೨** **ಬೆಲೆ : ರೂ. ೨೦೦**

**ಅಭಿರುಚಿ ಪ್ರಕಾಶನ,** ನಂ.೪, ೨ನೆಯ ಅಂತಸ್ತು,
ನಗರ ರಸ್ತೆ ಸಾರಿಗೆ ಸಂಸ್ಥೆ ಕಟ್ಟಡ, ಕೆ. ಆರ್. ವೃತ್ತ
ಮೈಸೂರು

ಜೀವನಾನುಭವವಿಲ್ಲದೆ ಸಾಹಿತ್ಯರಚನೆ ಅಸಾಧ್ಯ. ಸ್ವಾನುಭವ ಅಥವಾ ಇತರರ ಅನುಭವದ ಅವಲೋಕನ ಅಲ್ಲಿ ಮುಖ್ಯ ಬಂಡವಾಳವಾಗುತ್ತದೆ. ಹೆಣ್ಣಿರಲಿ, ಗಂಡಿರಲಿ ಸಾಹಿತ್ಯದ ಮೂಲಕ ತನ್ನ ವಿಚಾರಗಳನ್ನು ಅಭಿವ್ಯಕ್ತಿಪಡಿಸಲು ಇಬ್ಬರೂ ಸ್ವತಂತ್ರರಷ್ಟೇ ಅಲ್ಲ ಅರ್ಹರೂ ಹೌದು. ಆದರೂ ಪ್ರಾಚೀನ ಕಾಲದಿಂದಲೂ ಸಾಹಿತ್ಯವನ್ನವಲೋಕಿಸಿದಾಗ ಲೇಖಕಿಯರ ಸಂಖ್ಯೆ ಲೇಖಕರಿಗೆ ಹೋಲಿಸಿದರೆ ತೀರ ಕಡಿಮೆಯಿದೆ. ಆಧುನಿಕ ಸಾಹಿತ್ಯದಲ್ಲಿ ತೀರ ಇತ್ತೀಚೆಗೆ ಸಾಹಿತ್ಯ ಕ್ಷೇತ್ರದಲ್ಲಿ ಮಹಿಳೆ ಬಲವಾದ ಹೆಜ್ಜೆಯನ್ನೂರಿದ್ದಾಳೆ. ಇಂಥ ಬದಲಾವಣೆಯನ್ನು ದೃಷ್ಟಿಯಲ್ಲಿಟ್ಟು ಹೆಣ್ಣು ತನ್ನ ಕಾವ್ಯಗಳಲ್ಲಿ ಹೆಣ್ಣನ್ನು ಹೇಗೆ ಪರಿಭಾವಿಸಿದ್ದಾಳೆಂಬ ಒಂದು ಅಧ್ಯಯನ ಇಲ್ಲಿ ಮೂಡಿಬಂದಿದೆ. ಹೆಣ್ಣಿನ ಅಂತರಂಗದ ಪಿಸುಮಾತುಗಳು ಮಹಿಳಾ ಕಾವ್ಯಗಳಲ್ಲಿ ಕೇಳಿಸುತ್ತಿದೆಯೇ ಎಂಬ ಹುಡುಕಾಟ.



## ಗೀತಾಂಜಲಿ (ಕವನಗಳು)

*ರವೀಂದ್ರನಾಥ ಠಾಕೂರ್* *ಕನ್ನಡಕ್ಕೆ : ಸಿ. ಪಿ. ಕೆ.*

**ಪುಟ : ೧೪೪** **ಬೆಲೆ : ರೂ. ೫೦**

**ತನು ಮನು ಪ್ರಕಾಶನ,** ''ಕಾವ್ಯಲೋಕ''
ಒಂದನೇ ಕ್ರಾಸ್, ಎರಡನೇ ಹಂತ, ಎಚ್.ಐ.ಜಿ-೧೨೬೭
ಶ್ರೀರಾಂಪುರ ಬಡಾವಣೆ, ಮೈಸೂರು - ೫೭೦ ೦೨೩

ರವೀಂದ್ರನಾಥ ಠಾಕೂರ್ ಅವರ ಗೀತಾಂಜಲಿ ಜಗತ್ತೇ ಮೆಚ್ಚಿರುವ ಕವನ ಸಂಕಲನ. ದೇಶವಿದೇಶಗಳ ಬಹುಭಾಷೆಗಳಿಗೆ ಅನುವಾದಗೊಂಡಂತೆ ಕನ್ನಡದಲ್ಲೂ ಹಲವಾರು ಭಾಷಾಂತರಗಳು ಬಂದಿವೆ. ಸ್ವಚ್ಛ ಬದುಕಿನ ಕಡೆಗೆ ಸದ್ಭಾವನೆಯಿಂದ ಮುನ್ನಡೆಯುತ್ತ ಎತ್ತರದ ಸ್ಥಾನ ಗಳಿಸಬೇಕೆಂಬ ಹಂಬಲ, ತುಡಿತಗಳನ್ನು ಅವರ ಕವನಗಳಲ್ಲಿ ಕಾಣಬಹುದು. ''ಎಲ್ಲಿ ಸುವಿಚಾರ ನಿರ್ಮಲ ಜಲದೊಸರು ಹರಿದು ಕಾಳು ರೂಢಿಯ ಮರಳೊಳಿಂಗಿ ಕೆಡದಲ್ಲಿ'' ಅಂಥ ರಾಜ್ಯದಲ್ಲಿ ತಾನು ನೆಲೆಸುವ ಬಯಕೆ ಮತ್ತು ತಲೆಯೆತ್ತಿ ನಿಲ್ಲಬೇಕೆಂಬ ಪಾಠವನ್ನು ಕಲಿಸಿದ ಠಾಕೂರ್ ನಿಸ್ಸಂಶಯವಾಗಿ ಅಗ್ರಮಾನ್ಯ ಕವಿ. ಅವರ ಪದ್ಯಗಳು ಹಾಡಲಷ್ಟೇ ಅಲ್ಲ; ಅಧ್ಯಯನ ಚಿಂತನಗಳಿಗೂ ಯೋಗ್ಯ. ಪದಗಳ ನಡುವೆ ಎಲೆಮರೆಯಂತಿರುವ ಕರೆ-ಹಾರೈಕೆ-ಆಶಯಗಳನ್ನು ತಿಳಿಯಲು ನಮ್ಮ ಒಳಗಣ್ಣು ತೆರೆದು ಅವುಗಳನ್ನೋದಬೇಕು. ನೂರ ಮೂರು ಕವನಗಳ ಭಾವಾನುವಾದ.

## ಮಹಾರಾಜ ಲಿಯರ್ (ನಾಟಕ)




*ಮೂಲ : ಷೇಕ್ಸ್‌ಪಿಯರ್* *ಅನು : ಭಗವಾನ್*

**ಪುಟ : ೧೫೨** **ಬೆಲೆ : ರೂ . ೧೦೦**

**ಮಹಿಮ ಪ್ರಕಾಶನ,** ನಂ.೧೦, ಹುಡ್ಕೊ ಮನೆ
೧ನೆಯ ಹಂತ, ಕುವೆಂಪು ನಗರ, ಮೈಸೂರು - ೫೭೦ ೦೨೩

ಪ್ರಪಂಚದ ಅದ್ಭುತ ಅದ್ವಿತೀಯ ನಾಟಕಕಾರನಾಗಿ ಮೆರೆದ ಷೇಕ್ಸ್‌ಪಿಯರ್‌ನ ''ಕಿಂಗ್ ಲಿಯರ್'' ನಾಟಕದ ಕನ್ನಡಾನುವಾದ. ಆತನ ಏಳು ನಾಟಕಗಳನ್ನು ಈಗಾಗಲೇ ಕನ್ನಡಕ್ಕೆ ತಂದಿರುವ ಹೆಮ್ಮೆ ಶ್ರೀ ಭಗವಾನ್ ಅವರದ್ದು. ಭಾಷಾಂತರ ಎನ್ನುವುದೊಂದು ಸೂಕ್ಷ್ಮ ಕಲೆ; ಮೂಲಕೃತಿಯ ಕೊಲೆ ಅಲ್ಲವೆಂದು ಇವರ ಅನುವಾದಗಳನ್ನು ಗಮನಿಸಿದವರೆಲ್ಲ ಧಾರಾಳವಾಗಿ ಒಪ್ಪಿಕೊಳ್ಳುವಂತೆ ಭಗವಾನ್ ಅನುವಾದಿಸುತ್ತಾರೆ. ಅನುವಾದ ಮತ್ತು ಮೂಲಕೃತಿಯನ್ನು ತಕ್ಕಡಿಯಲ್ಲಿಟ್ಟು ತೂಗಿದಂತೆ ಸಮನಾಗಿ ನಿಲ್ಲಿಸಬಲ್ಲ ಅವರು ಎರಡೂ ಭಾಷೆಗಳ ಅರ್ಥಪರಂಪರೆ ಮತ್ತು ಭಾವನೆಗಳ ಅನುಸಂಧಾನವನ್ನು ಆಳವಾಗಿ ಅಭ್ಯಾಸ ಮಾಡಿದ್ದಾರೆ. ಮೂಲಕೃತಿಯಲ್ಲಿರುವ ನುಡಿಗಟ್ಟುಗಳು ಒಳಮರ್ಮದ ಅರ್ಥ ವಿಸ್ತಾರಗಳು ಕನ್ನಡಕ್ಕೆ ಹೊಂದಿಕೊಳ್ಳುವಂತೆ ಪುನಾರಚಿಸಲಾಗಿದೆ.

ಇಂದಿರಾಕುಮಾರಿ



ನಾ. ಡಿಸೋಜ

# ಪಾಪ ನಿವೇದನೆ ಕೇಳಲು ಪಾದರಿಗಳು ಕುಳಿತುಕೊಳ್ಳುತ್ತಿದ್ದ ಕುರ್ಚಿ

"**ಪಾ**ಪ ನಿವೇದನೆ ಕೇಳಲು ಪಾದರಿಗಳು ಕುಳಿತುಕೊಳ್ಳುತ್ತಿದ್ದ ಕುರ್ಚಿ" ಎಂಬ ತಲೆಬರಹ ಈ ಕತೆಗೆ ಅತೀ ದೀರ್ಘವಾಯಿತು ಎಂಬುದನ್ನು ನಾನು ಬಲ್ಲೆ. ಸ್ಯಾಕ್ರಿಸ್ಟಿ (Sacristy) ಅಂದರೆ ಚರ್ಚಿನ ಹಿಂಭಾಗದಲ್ಲಿ ಪೂಜಾವಸ್ತ್ರ, ವಸ್ತು ಇತ್ಯಾದಿಗಳನ್ನು ಇರಿಸಿರುವ ಎಡೆಯಲ್ಲಿ ಹಿಂದಿನ ಪಾದರಿಗಳು ಉಪಯೋಗಿಸುತ್ತಿದ್ದ ಬೀಟೆ, ಸಾಗುವಾನಿ ಮರದ ವಿವಿಧ ಕುರ್ಚಿ, ಆಸನ, ಟೀಪಾಯಿ, ಮೇಜುಗಳ ನಡುವೆ ಇರುವ ಈ ವಿಶೇಷ ಕುರ್ಚಿಯನ್ನು ಜನ "ಪಾಪ ನಿವೇದನೆ ಕೇಳಲು ಪಾದರಿಗಳು ಕುಳಿತುಕೊಳ್ಳುತ್ತಿದ್ದ ಕುರ್ಚಿ" ಎಂದೇ ಈಗಲೂ ಹೆಸರಿಸುತ್ತಿರುವುದರಿಂದ, ಈ ಬರಹದಲ್ಲಿ ನಾನು ಈ ಕುರ್ಚಿಯ ಬಗ್ಗೆ ಹೇಳಹೊರಟಿರುವುದರಿಂದ, ಅನಿವಾರ್ಯವಾಗಿ ಇದೇ ಹೆಸರನ್ನು ತಲೆಬರಹದಂತೆ ನಾನು ಬಳಸಬೇಕಾಗಿದೆ.

ಬ್ರಿಟಿಷರ ಕಾಲ್ಮದ ಶೈಲಿ, ಸೂಕ್ಷ್ಮತೆ, ನಯಗಾರಿಕೆಯನ್ನು, ಸೊಬಗು ಮೋಹಕತೆಯನ್ನು ತಟ್ಟನೆ ನೆನಪಿಗೆ ತರುವ ಈ 'ಪುರಾತನ' ವಸ್ತು ಇಂದು ಕೊಂಚ ಕಾಲಬಾಹಿರವಾದಂತೆ ಕಾಣುವುದರಿಂದಲೇ ಇದು ಸ್ಯಾಕ್ರಿಸ್ಟಿಯ ಮೂಲೆಯಲ್ಲಿ ಒಂದು ಸ್ಥಾನ ಪಡೆದಿದೆ. ಹೀಗೆಂದು ಈಗ ಅದು ಮುರಿದುಹೋಗಿಲ್ಲ. ತನ್ನ ಆಕರ್ಷಣೆ ಕಳೆದುಕೊಂಡಿಲ್ಲ. ಇಂದಿನ ಪಾದರಿಗಳು ಇದರಲ್ಲಿ ಕುಳಿತು ಜನರ ಪಾಪ ನಿವೇದನೆಗೆ ಕಿವಿಗೊಡಲು ಒಪ್ಪುವುದಿಲ್ಲ ಅನ್ನುವುದೇ, ಅದು ಇಲ್ಲಿ ಒಂದು ಸ್ಥಾನ ಪಡೆಯಲು ಕಾರಣ ಎಂದರೂ ಸರಿಯಾದೀತು.

ಸಾಗುವಾನಿ ಮರದ, ತನ್ನ ಹೊಳಪನ್ನು ಇಂದಿಗೂ ಕಳೆದುಕೊಳ್ಳದ ಈ ಕುರ್ಚಿ ಕುರ್ಚಿಯ ಹಾಗಿಲ್ಲ. ತಟ್ಟನೆ ನೋಡಿದರೆ ಇದೊಂದು ಪೆಟ್ಟಿಗೆಯಂತೆ ಕಾಣುತ್ತದೆ. ಚೌಕಾಕಾರದ ಐದು ಫ್ರೇಮುಗಳಿಂದ ಈ ಕುರ್ಚಿ ಮಾಡಲ್ಪಟ್ಟಿದೆ. ಭದ್ರವಾದ ಲೇತಿನಲ್ಲಿ ಉರುಟು ಉರುಟಾಗಿ ಕೆತ್ತಿದ ನಾಲ್ಕು ಕಾಲುಗಳು ಈ ಕುರ್ಚಿಗಿದೆ. ಬೆನ್ನಿಗೆ ಆಸರೆಯಾಗಿ ಒರಗು ಮಣೆ, ಎಡ ಮತ್ತು ಬಲ ಭಾಗಗಳಲ್ಲಿ ಎರಡು ಜಾಲರಿಗಳು, ಮುಂದೆ ಕುಳಿತುಕೊಂಡ ನಂತರ ಹಾಕಿಕೊಳ್ಳಬಹುದಾದ ಒಂದು ಬಾಗಿಲು, ಇದರ ವಿಶೇಷತೆ.

ಕೆಳಗಿನ, ಒರಗುವ, ಎಡಬಲಭಾಗದ, ಮುಂದಿನ ಹೀಗೆ ಕುರ್ಚಿಗೆ ಜೋಡಿಸಲಾಗಿರುವ ಐದೂ ಜಾಲರಿಗಳನ್ನು ಬೆತ್ತದ ಸಪೂರ ಎಳೆಗಳಿಂದ ಹೆಣೆದು ಮಾಡಲಾಗಿದೆ. ಈ ಹೆಣಿಗೆಯಲ್ಲಿ ಕೂಡ ಒಂದು ನಕ್ಷೆ, ಒಂದು ನಮೂನೆ ಇದ್ದು, ಈ ನಮೂನೆ ಬ್ರಿಟಿಷರ ಕಾಲದ ಒಂದು ಕಸೂತಿಯನ್ನು ನೆನಪಿಗೆ ತಂದುಕೊಡುತ್ತದೆ.

ಪಾದರಿಗಳು ಪಾಪ ನಿವೇದನೆಗೆಂದು ಗೊತ್ತು ಪಡಿಸಿದ ಸಮಯದಲ್ಲಿ ಬಂದು ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಾರೆ. ಮುಂದಿನ ಬಾಗಿಲನ್ನು ಮುಚ್ಚಿಕೊಳ್ಳುತ್ತಾರೆ. ಈಗಾಗಲೇ ಬಂದು ಪಾಪ ನಿವೇದನೆಯ ಸಿದ್ಧತೆ ಮಾಡಿಕೊಂಡ ಜನ ಒಬ್ಬೊಬ್ಬರಾಗಿ ಪಾದರಿಗಳ ಬಲಗಡೆಗೋ ಇಲ್ಲ ಎಡಗಡೆಗೋ ಬಂದು ಜಾಲರಿಗಳ ಆಚೆಗೆ ಮೊಣಕಾಲೂರುತ್ತಾರೆ. ಶಿಲುಬೆ ವಂದನೆ ಮಾಡಿ ಅವರು ಪಾಪ ನಿವೇದನೆಗೆ ತೊಡಗುತ್ತಿರುವಂತೆ ಪಾದರಿಗಳು ಅವರತ್ತ ಬಗ್ಗಿ ಅವರ ಧ್ವನಿಗೆ ಕಿವಿಗೊಡುತ್ತಾರೆ.

ಅಲ್ಲಿ ಪಾಪ ನಿವೇದನೆ ಕೇಳಲು ಕೂತಿರುವವರು ಯಾರು ಅನ್ನುವುದು ಮುಖ್ಯವಲ್ಲ. ಪಾಪ ನಿವೇದನೆ ಮಾಡಿಕೊಳ್ಳುತ್ತಿರುವವರು ಯಾರು ಎಂಬುದೂ ಮುಖ್ಯವಲ್ಲ. ಮಾಡಿದ ಪಾಪಗಳಿಗಾಗಿ ಪಶ್ಚಾತ್ತಾಪ ಪಟ್ಟು ಮುಂದೆ ಮತ್ತೆ ಅಂತದೇ ತಪ್ಪುಗಳನ್ನು ಮಾಡದಂತೆ ಇರುತ್ತೇನೆಂಬ ದೃಢ ನಿರ್ಧಾರವಷ್ಟೇ ಇಲ್ಲಿ ಮುಖ್ಯ. ತಪ್ಪು ಮಾಡಿದ ವ್ಯಕ್ತಿಗೆ ಕ್ಷಮಾಪಣೆ ಬೇಕಿದೆ. ಈ ಕ್ಷಮಾಪಣೆಯನ್ನು ಪಾದರಿ ದೇವರ ಪರವಾಗಿ ದೊರಕಿಸಿಕೊಡುತ್ತಾನೆ. ಈ ಕಾರಣದಿಂದಲೇ ಪಾಪ ನಿವೇದನೆ ಒಂದು ಸಂಸ್ಕಾರ. ಕ್ರಿಸ್ತ ಪ್ರಭು ಕ್ರಿಸ್ತುವರಿಗಾಗಿ ಸ್ಥಾಪಿಸಿದ ಏಳು ಸಂಸ್ಕಾರಗಳಲ್ಲಿ ಪ್ರಮುಖವಾದದ್ದು.

ಈ ಪಾಪ ನಿವೇದನೆ ನಾಳೆ ಏಸು ಪ್ರಭುವನ್ನು ರಕ್ತ ಮಾಂಸದ ರೂಪದಲ್ಲಿ ಸ್ವೀಕರಿಸಲು ಒಂದು ಪರವಾನಗಿ. ಪಾದರಿಗಳಲ್ಲಿ ಪಾಪ ನಿವೇದನೆ ಮಾಡಿಕೊಂಡನಂತರ ಅವರು ಪಶ್ಚಾತ್ತಾಪಪಡಲು ಹೇಳುತ್ತಾರೆ. ಪ್ರಾಯಶ್ಚಿತ್ತ ಮಾಡಿಕೊಳ್ಳಲು ಕೆಲ ಮಂತ್ರಗಳನ್ನು ಜಪಿಸಲು ತಿಳಿಸುತ್ತಾರೆ. ಏಸು ಪ್ರಭು ಅವರಿಗೆ ದಯಪಾಲಿಸಿದ ಕೃಪೆಯಿಂದ ಜನರ ಪಾಪಗಳನ್ನು ಅವರು ಕ್ಷಮಿಸುತ್ತಾರೆ. ಮಾರನೇ ದಿನ ಪೂಜಾ ಸಮಯದಲ್ಲಿ ದಿವ್ಯ ಪ್ರಸಾದ ಪಡೆದು ಈ ಜನ ಪವಿತ್ರರಾಗುತ್ತಾರೆ. ಶುದ್ಧರಾಗುತ್ತಾರೆ. ದೇವರಿಗೆ ಪ್ರಿಯರಾಗುತ್ತಾರೆ. ಏಸು ಪ್ರಭುವಿನ ನಿಜ ಭಕ್ತರಾಗುತ್ತಾರೆ.

ಈ ಕಾರಣದಿಂದಲೇ ಪಾಪ ನಿವೇದನೆಗೆ ಅಂತಹ ಪ್ರಾಮುಖ್ಯತೆ. ಈ ಕುರ್ಚಿಗೂ ಅಂತಹದ್ದೇ ಪ್ರಾಮುಖ್ಯತೆ.

ಇಷ್ಟೆಲ್ಲಾ ಪ್ರಾಮುಖ್ಯತೆ ಇರುವ ಈ ಕುರ್ಚಿಯನ್ನು ನಾನು ನೋಡಿದ್ದು ಸ್ಯಾಕ್ರಿಸ್ಟಿಯಲ್ಲಿ.

ಬ್ರಿಟಿಷರ ಕಾಲದ ಮರದ ಪೀಠೋಪಕರಣಗಳ ಬಗ್ಗೆ ಏನೋ ಒಂದು ಬರವಣಿಗೆ ಮಾಡಹೊರಟ ನಾನು ನಮ್ಮೂರಿನ ನೂರು ವರ್ಷಗಳಷ್ಟು ಹಳೆಯ ಪ್ರವಾಸಿ ಮಂದಿರಕ್ಕೆ ಹೋಗಿದ್ದೆ.

ಅಲ್ಲಿದ್ದ ಎಲ್ಲ ಮರದ ಪೀಠೋಪಕರಣಗಳೂ ಮಾಯವಾಗಿ ಅವುಗಳ ಜಾಗದಲ್ಲಿ ಇಂದಿನ ಪ್ಲೈವುಡ್ಡಿನ ಟಚ್ ಉಡ್ಡಿನ ಕುರ್ಚಿ ಮೇಜುಗಳು ಬಂದು ಕುಳಿತಿದ್ದವು.

''ಅವನ್ನೆಲ್ಲ ಮುಖ್ಯ ಇಂಜಿನಿಯರ್ ಅವರು, ಸೂಪರಿಂಟೆಂಡಿಂಗ್ ಇಂಜಿನಿಯರ್ ಅವರು ಅವರವರ ಮನೆಗಳಿಗೆ ಸಾಗಿಸಿ ಸ್ಕ್ರ್ಯಾಪ್ಡ್ ಎಂದು ಅವುಗಳನ್ನು ತೋರಿಸಿಬಿಟ್ರು ಸಾರ್'' ಎಂದು ಮೇಟಿ ಒಂದು ಗುಟ್ಟನ್ನು ಹೇಳಿದ. ಇದೇ ಮೇಟಿ –

''ನೀವು ಒಂದು ಸಾರಿ ಇಗರ್ಜಿನಲ್ಲಿ, ಪಾದರಿಗಳ ಬಂಗಲೆಗೆ ಹೋಗಿಬನ್ನಿ ಸಾರ್... ಅಲ್ಲಿ ಒಂದಿಷ್ಟು ಕುರ್ಚಿ ಮೇಜುಗಳಿವೆ'' ಎಂದಿದ್ದ.

ನಾನು ಅಲ್ಲಿಗೆ ಹೋದಾಗ ಪಾದರಿಗಳ ಬಂಗಲೆಯಲ್ಲೂ ಸ್ಯಾಕ್ರಿಸ್ಟಿಯಲ್ಲೂ ಹಳೆಯ ಆದರೆ ಗಟ್ಟಿಮುಟ್ಟಾಗಿದ್ದ ವಿಶೇಷ ಮಾದರಿಯ ಪೀಠೋಪಕರಣಗಳನ್ನು ನೋಡಿದೆ. ಅವುಗಳ ಆಕಾರ ಕೂಡ ಬೇರೆಯಾಗಿತ್ತು. ಎಷ್ಟೋ ಪೀಠೋಪಕರಣಗಳ ಹೆಸರು ಕೂಡ ನನಗೆ ತಿಳಿದಿರಲಿಲ್ಲ. ಇವುಗಳ ನಡುವೆ ಇದ್ದ ಈ ಕುರ್ಚಿ ನನ್ನ ಗಮನ ಸೆಳೆಯಿತು.

ಪಾಪ ನಿವೇದನೆ ಕೇಳುವ ಸಂದರ್ಭದಲ್ಲಿ ಕುಳಿತುಕೊಳ್ಳಲೆಂದು ಮಾಡುವ ಕುರ್ಚಿಗಳು ನನಗೆ ಅಪರಿಚಿತವಾಗಿರಲಿಲ್ಲ. ಏಕೆಂದರೆ ವಾರಕ್ಕೊಮ್ಮೆ ಪಾಪ ನಿವೇದನೆ ಮಾಡಿಕೊಳ್ಳುವ ಅಭ್ಯಾಸವಿರಿಸಿಕೊಂಡ ನಾನು ಇಂತಹಾ ಹಲವು ಕುರ್ಚಿಗಳನ್ನು ಹತ್ತಿರದಿಂದ ನೋಡಿದ್ದೆ. ಈಗೀಗ ಈ ಬಗೆಯ ಕುರ್ಚಿಗಳು ಮಾಯವಾಗಿದ್ದವು. ಪಾದರಿಗಳಿಗೂ ಭಕ್ತರಿಗೂ ನಡುವೆ ಪರದೆ ಆಕಾರದ ಸ್ಟ್ಯಾಂಡುಗಳು ಬಂದಿದ್ದವು. ಅಲ್ಲದೆ ಈ ಕುರ್ಚಿ ಅಖಂಡವಾಗಿ ಒಂದು ಪೆಟ್ಟಿಗೆ ಆಕಾರದಲ್ಲಿತ್ತು. ತನ್ನ ಹಳೆಯ ರಚನೆಯಿಂದಾಗಿಯೋ ಏನೋ ಅದರಲ್ಲಿ ಏನೋ ನಿಗೂಢತೆ ಸೇರಿಕೊಂಡಿತ್ತು. ಹಳೇ ಪೀಠಗಳ ನಡುವೆ ಅದನ್ನು ಇರಿಸಿದ್ದರಿಂದ ಅದರ ಸುತ್ತ ಪುರಾತನವಾದ ಯಾವುದೋ ಒಂದು ಗುಟ್ಟೋ ಗಹನತೆಯೋ ವ್ಯಾಪಿಸಿಕೊಂಡಿರುವ ಹಾಗೆ ನನಗೆ ಕಂಡಿತು.

ಸ್ಯಾಕ್ರಿಸ್ಟಿಗೆ ನನ್ನನ್ನು ಕರೆದೊಯ್ದ ಪಾದರಿಗಳ ಅಡಿಗೆ ಆಳಿನತ್ತ ತಿರುಗಿ ನಾನು –

''ಆ ಕುರ್ಚಿ ಮುರಿದು ಹೋಗಿದೆಯೆ ?'' ಎಂದು ಕೇಳಿದೆ.

''ಇಲ್ಲಪ್ಪ, ಅದು ಗಟ್ಟಿಮುಟ್ಟಾಗಿದೆ. ಈ ಇಗರ್ಜಿಗೆ ಆದಷ್ಟೇ ವರ್ಷ ಈ ಕುರ್ಚಿಗೂ ಆಗಿದೆ. ಒಬ್ಬರು ಪಾದರಿಗಳು ಈ ಕುರ್ಚಿ ಮೇಲೆ ಕೂತು ಪಾಪ ನಿವೇದನೆ ಕೇಳತಿರಬೇಕಾದರೇನೆ, ಸತ್ತು ಹೋದರಂತೆ. ಅದಕ್ಕೇ ಅದನ್ನ ತಂದು ಇಲ್ಲಿ ಇಟ್ಟಿದ್ದಾರೆ'' ಎಂದು ಸಹಜವಾಗಿ ಎಂಬಂತೆ ನುಡಿದ.

ಈ ಮಾತನ್ನು ಆತ ಹಿಂದೆಯೂ ಹಲವಾರು ಬಾರಿ ಹೀಗೆಯೇ ಹೇಳಿದ್ದಿರಬಹುದು. ಅವನ ಮಾತಿನ ರೀತಿಯಲ್ಲಿ ಯಾವುದೇ ಉದ್ವೇಗ ಭೀತಿ ಇರಲಿಲ್ಲ.

ಆದರೆ ಈ ಮಾತು ಕೇಳಿ ನಾನು ಕೊಂಚ ಗಾಬರಿಗೊಂಡೆ.

ಆ ಕುರ್ಚಿಯನ್ನು ಅಲ್ಲಿ ನೋಡಿದಾಗ ಅಲ್ಲಿ ಯಾವುದೋ ರಹಸ್ಯ ಘನೀಭೂತವಾಗಿ ಅಡಗಿರುವಂತೆ ನನಗೆ ಅನಿಸಿದ್ದರಿಂದ ಅಡಿಗೆಯಾಳು ಹೇಳಿದ ವಿಷಯ ನನ್ನಲ್ಲಿ ಮತ್ತೂ ಕುತೂಹಲ ಕೆರಳಲು ಕಾರಣವಾಯಿತು. ಈ ಕುತೂಹಲವನ್ನು ತಾತ್ಕಾಲಿಕವಾಗಿ ತಡೆಹಿಡಿದುಕೊಂಡ ನಾನು ಕುರ್ಚಿಯನ್ನು, ಅದರ ಬೆತ್ತದ ಎಳೆಗಳ ಹೆಣಿಗೆಯನ್ನು, ಅದರ ನಯವಾದ ಮೈಮಾಟವನ್ನು ಗಮನಿಸಿ ಉಳಿದ ಪೀಠಗಳನ್ನೂ ನೋಡಿ ಅಲ್ಲಿಂದ ಹೊರಬೀಳುವಾಗ ಸಹಜವಾಗಿ ಎಂಬಂತೆ ಅಡಿಗೆಯಾಳಿನತ್ತ ತಿರುಗಿ,

''ಅಲ್ಲ... ಅದು ಯಾರೋ ಪಾದರಿ ಕುರ್ಚಿ ಮೇಲೆ ಕೂತಿರುವಾಗಲೇ ಸತ್ತರು ಅಂದೆಯಲ್ಲ... ಏನದು ಕತೆ ?'' ಎಂದು ಕೇಳಿದೆ.

''ನನಗೆ ಗೊತ್ತಿರೋದು ಇಷ್ಟೇ'' ಎಂದು ಆತ ಕೈಚೆಲ್ಲಿದ.

''ಬಾವಿಕಟ್ಟೆ ಗುರ್ಕಾರ ಮಾಮರ ಪರಿಚಯ ನಿಮಗುಂಟಲ್ಲ, ಅವರಿಗೆ ಕೇಳಿ...'' ಎಂದ ಆತ.

ಅವನ ಮಾತಿನಿಂದ ನನಗೆ ತೀರಾ ನಿರಾಶೆಯೇನೂ ಆಗಲಿಲ್ಲ. ಸದ್ಯ ಆತ ಸರಿಯಾದ ವ್ಯಕ್ತಿಯನ್ನೇ ತೋರಿಸಿದ್ದ. ಆಯಿತು ಎಂದು ಹೇಳಿ ನಾನು ಅಲ್ಲಿಂದ ಹೊರಟೆ.

ಇಗರ್ಜಿ ಕೇರಿಯ ಗುರ್ಕಾರ ಮಾಮ ನನಗೆ ಪರಿಚಿತರೆ. ಅವರು ಕೂಡ ಊರ ಇಗರ್ಜಿಯಷ್ಟೇ ಹಳೆಯ ಜನ. ಅವರಿಗೆ ತೊಂಬತ್ತರ ವಯಸ್ಸು. ಜೀರ್ಣವಾದ ದೇಹ. ಕಣ್ಣು ಚುರುಕಾಗಿಲ್ಲ. ಕಿವಿ ಮಾತ್ರ ಕೇಳಿಸುತ್ತದೆ. ನೆನಪಿನ ಶಕ್ತಿಯೂ ಹೋಗಿಲ್ಲ. ಹಳೆಯದನ್ನೆಲ್ಲ ವಿವರ ವಿವರವಾಗಿ ಹೇಳುತ್ತಾರೆ. ಆದರೆ ಮೊಮ್ಮಕ್ಕಳ ಹೆಸರು ಕೇಳಿದರೆ ನೆನಪಿಲ್ಲ ಅನ್ನುತ್ತಾರೆ. ಇಗರ್ಜಿ ಕಟ್ಟಿದವರು ಫ್ರೆಂಚ್ ಪಾದರಿ ಪಿರಾಂಡೆಲೋ ಎಂದು ಹೇಳುತ್ತಾರೆ. ಈಗಿರುವ ಪಾದರಿ ಹೆಸರು ಅವರಿಗೆ ನೆನಪಿನಲ್ಲಿ ಉಳಿಯುವುದಿಲ್ಲವಂತೆ. ಹೀಗಾಗಿ ಅವರೀಗ ಗುರ್ಕಾರ ಅಲ್ಲ. ಅವರ ಮಗ ಈಗ ಇಗರ್ಜಿ ಕೇರಿಯ ಗುರ್ಕಾರ.

ಗುರ್ಕಾರ ಮಾಮ ಅಂಗಳದಲ್ಲಿ ಕುಳಿತಿದ್ದರು. ಸೊಸೆ ಭತ್ತ ಬೇಯಿಸಿ ಒಣಗಿಸಿದ್ದಳು. ಬೇಯಿಸಿದ ಭತ್ತದ ವಿಶಿಷ್ಟವಾದ ಪರಿಮಳ ಅಲ್ಲೆಲ್ಲ ಹರಡಿತ್ತು. ಅವರ ಕೈಲೊಂದು ಕೋಲು. ಅದನ್ನು ಆಗಾಗ್ಗೆ ''ಹಾ'' ಎಂದು ಕೂಗಿ ಬೀಸುತ್ತಿದ್ದರು. ಕಾಗೆ ಗುಬ್ಬಿಗಳು ಬರಲಿ ಬಾರದಿರಲಿ ಇವರ ಬೆತ್ತ ಬೀಸುವ ಕಾರ್ಯ ನಡೆದಿತ್ತು.

ನಾನು ಅಂಗಳಕ್ಕೆ ಕಾಲಿಟ್ಟಾಗ ಅವರೊಮ್ಮೆ ಹಾ ಎಂದು ಬೆತ್ತ ಬೀಸಿದರು.

''ಅಜ್ಜ... ನಾನು'' ಎಂದೆ.

''ನಾನು ರೈಮಂಡ ಸೋಜರ ಮಗ ಎಡ್ಡಿ... ಎಡ್ವರ್ಡ್...''

''ಹಾಂ.. ಬಾ ಬಾ...'' ಎಂದರವರು.

''ಚೆನ್ನಾಗಿದೀಯ ? ಎಲ್ಲಿಯಾದರೂ ಕೆಲಸ ಸಿಗ್ತ ? ನಿನ್ನ ತಂದೆಗೆ ನಿವೃತ್ತಿ ಆಯ್ತಾ... ನಿನ್ನಕ್ಕನಿಗೆ ಎಲ್ಲಿಯಾದರೂ ನೆಂಟಸ್ತಿಕೆ ನೋಡಿದ್ದೀರಾ...''

ಅವರು ಒಂದರ ಹಿಂದೆ ಒಂದರಂತೆ ಪ್ರಶ್ನೆ ಕೇಳತೊಡಗಿದರು.

ನನಗೆ ಕೆಲಸ ಸಿಕ್ಕಿರಲಿಲ್ಲ. ಆದರೆ ಅಪ್ಪ ನಿವೃತ್ತಿ ಹೊಂದಿದ್ದರು. ಅಕ್ಕನ ಮದುವೆಯಾಗಿತ್ತು. ಈ ಹಿಂದೆ ನಾನೇ ಒಂದೆರಡು ಬಾರಿ ಅವರಿಗೆ ಹೇಳಿದ್ದೆ. ಅವರದನ್ನು ಮರೆತಿದ್ದರು. ಹೀಗಾಗಿ ಮತ್ತೆ ಎಲ್ಲವನ್ನೂ ಅವರಿಗೆ ತಿಳಿಸಲು ಹೋಗದೆ ನೇರವಾಗಿ –

''ಅಜ್ಜ... ಆ ಪಾಪ ನಿವೇದನೆ ಕೇಳಲು ಪಾದರಿ ಕುಳಿತುಕೊಳ್ಳುವ ಕುರ್ಚಿ...'' ಎಂದು ವಿಷಯ ಪ್ರಸ್ತಾಪಿಸಿದೆ.

''ಓ ! ಪಾದರಿ ಪಿರಾಂಡೆಲೋ ಮಾಡಿಸಿದ ಕುರ್ಚಿ... ಈ ಕುರ್ಚೀನ ಮಾಡಲಿಕ್ಕೆ ಸುತಾರಿ ಇನಾಸ ಆರುತಿಂಗಳು ತೊಕೊಂಡ. ಪಾದರಿಗಳು ಇವನನ್ನ ಹೊಡೆಯೋದೊಂದು ಬಾಕಿ. ಅವರು ಹೇಳಿದ್ದು ಇವನಿಗೆ ಅರ್ಥ ಆಗೋಲ್ಲ.. ಅವನು ಮಾಡಿದ್ದು ಇವರಿಗೆ ಹಿಡಿಸೋದಿಲ್ಲ.. ಕೊನೆಗೂ ಆ ಕುರ್ಚಿ ಮಾಡಿ ಭಲೆ ಅನ್ನಿಸಿಕೊಂಡ ಸುತಾರಿ...'' ಎಂದು ಅವರು ಬಾಯಿತುಂಬ ನಕ್ಕರು.

''ಕುರ್ಚಿ ಚೆನ್ನಾಗಿದೆ... ಮಜಬೂತಾಗಿದೆ'' ಎಂದೆ ಅವರನ್ನು ಈ ಬಗ್ಗೆ ಮಾತಿಗೆ ಎಳೆಯಲು.

''ಎಷ್ಟು ಜನ ಪಾದರಿಗಳು ಈ ಕುರ್ಚಿ ಮೇಲೆ ಕೂತು ಪಾಪ ನಿವೇದನೆ ಕೇಳಿದಾರೆ ಗೊತ್ತ ? ಫ್ರೆಂಚ್ ಪಾದರಿಗಳು, ಇಟಾಲಿಯನ್ ಪಾದರಿಗಳು, ಗೋವಾನಿ, ಯುರೋಪಿಯನ್, ಕಾರವಾರಿ, ಮಂಗಳೂರ್‌ಕಾರ್, ಕೊನೆಗೆ ಕರಿಕಾಲಿನ ಜೋಸ್‌ಸಾರನ... ಈಗಿನ ಹುಡುಗ ಪಾದರಿಗಳು ಮಾತ್ರ ಡೊಂಟವಾಂಟ ಅಂದ್ರು. ಅದು ಪೆಟ್ಟಿಗೆಯಂತೆ, ಜೈಲಂತೆ, ಕೇಜ್ ಅಂತೆ, ಗೂಡಂತೆ... ಒಳಗೆ ದೆವ್ವಭೂತ ಕೂತ್ರು ಕಾಣಲ್ಲ ಅಂದರು ಈ ಹುಡುಗರು.. ಇವರು ಕುರ್ಚೀಲಿ ಕೂತು ಪಾಪ ನಿವೇದನೆ ಕೇಳೋದನ್ನ ಜನ ನೋಡಬೇಕು. ಹೆಂಗಸರು ನೋಡಬೇಕು. ಹುಡುಗೀರು ನೋಡಬೇಕು.. ಏಸು ಪ್ರಭು ಸ್ಥಾಪನೆ ಮಾಡಿದ ಒಂದು

ದಿವ್ಯ ಸಂಸ್ಕಾರಾನ ನಡೆಸಿಕೊಂಡು ಹೋಗೋದು ಇವರಿಗೆ ಮುಖ್ಯ ಅಲ್ಲ... ಅಲ್ಲೂ ಶೋಕಿಮಾಡಬೇಕು ಅಂತಾರೆ ಇವರು'' ಎಂದು ಗುರ್ಕಾರ ಮಾಮ ದನಿ ಎತ್ತರಿಸಿದ್ದು ಅವರ ಮಾತಿನ ಧಾಟಿ ವೇಗ ಗಮನಿಸಿ ನಾನು ಅಚ್ಚರಿಪಟ್ಟೆ.

''ಅಲ್ಲ ಮಾಮ... ಯಾರೋ ಪಾದರಿಗಳು ಅದರಲ್ಲಿ ಕೂತು ಪಾಪ ನಿವೇದನೆ ಕೇಳುವಾಗಲೇ...'' ಎಂದು ನಡುವೆ ಬಾಯಿ ಹಾಕಿದೆ.

''ಅದು ನನಗೆ ನೆನಪಿದೆಯಪ್ಪ. ಅವರು ಗೋವಾನಿ ಪಾದರಿ ದುಮಿಂಗೋ ಅಂತ...'' ಎಂದು ಹುರುಪುಗೊಂಡರು ಗುರ್ಕಾರ ಮಾಮ.

ಅವರು ಹಾಗೇ. ತಮಗೆ ತೀರ ಪ್ರಿಯವೆನಿಸುವ ವಿಚಾರ ಬಂದರೆ ಉತ್ಸಾಹ ಹುರುಪಿನಿಂದ ಪುಟದು ಹೇಳುತ್ತಾರೆ.

''ಅದೊಂದು ಶನಿವಾರ. ಅರ್ಧ ಇಗರ್ಜಿ ತುಂಬ ಪಾಪ ನಿವೇದನೆಗೆ ಅಂತ ಬಂತು. ಮೊಣಕಾಲೂರಿರೋ ಜನ. ಈ ಹಿಂದಿನ ದಿವ್ಯ ಪ್ರಸಾದ ಸ್ವೀಕಾರದಿಂದ ಹಿಡಿದು ಈವರೆಗಿನ ಅವಧಿಯಲ್ಲಿ ಮಾಡಿದ ಪಾಪಗಳನ್ನು ನೆನಪಿಗೆ ತಂದುಕೊಂಡು ಅವುಗಳಿಗಾಗಿ ಪಶ್ಚಾತ್ತಾಪ ಪಟ್ಟು, ಮತ್ತೆ ಇಂತಹಾ ಪಾಪಗಳನ್ನು ಮಾಡುವುದಿಲ್ಲ ಎಂದು ನಿರ್ಧರಿಸಿ, ಮಾಡಿದ ಪಾಪಗಳನ್ನು ನಿವೇದಿಸಿ ಕೊಳ್ಳಲು ಪಾದರಿಗಳ ಬಳಿ ಬರುತ್ತಿದ್ದಾರೆ.

''ಪಾದರಿ ದುಮಿಂಗೊ ಕುರ್ಚಿಯಲ್ಲಿ ಕುಳಿತಿದ್ದಾರೆ. ಅವರ ನಶ್ಯದ ಬಣ್ಣದ ನಿಲುವಂಗಿ, ಕರಿ ಬೂಡ್ಸುಗಳು, ಕುತ್ತಿಗೆಗೆ ತೂಗುಬಿದ್ದ ಬೆಳ್ಳಿ ಸರಪಳಿ ತುದಿಯ ಶಿಲುಬೆ. ಅವರ ಕೈಗಳು ಕಾಣುತ್ತಿವೆ. ಅಸ್ಪಷ್ಟವಾಗಿ, ನೆರಳು ಅನ್ನುವ ಹಾಗೆ ಕುರ್ಚಿ ಪಕ್ಕದ ತೆರೆಯ ಹಿಂದೆ ಅವರು ಕಾಣುತ್ತಿದ್ದಾರೆ. ಜನ ಯಾರೂ ಅವರನ್ನು ನೋಡುವುದಿಲ್ಲ. ಕುರ್ಚಿಯ ಮಗ್ಗುಲಿಗೆ ಹೋಗಿ ಮೊಣಕಾಲೂರುತ್ತಾರೆ. ಶಿಲುಬೆ ವಂದನೆ ಮಾಡುತ್ತಾರೆ. ಪಾದರಿಗಳು ಸಾಮಾನ್ಯವಾಗಿ ದೈವಿಕ ಕಾರ್ಯದಲ್ಲಿ ತೊಡುವ ಸ್ಟೋಲ್ ಎಂಬ ಕೊರಳ ಪಟ್ಟಿಯ ಜರಿಯ ಎಳೆಗಳು ಜನರಿಗೆ ಕಾಣುತ್ತವೆ. ಜನ ಈ ಹಿಂದೆ ತಾವು ಪಾಪ ನಿವೇದನೆ ಮಾಡಿಕೊಂಡು ಎಷ್ಟು ದಿನಗಳಾದವು ಎಂಬುದನ್ನು ತಿಳಿಸಿ ಅನಂತರದ ದಿನಗಳಲ್ಲಿ ಮಾಡಿದ ಪಾಪಗಳನ್ನು ಹೇಳುತ್ತ ಹೋಗುತ್ತಾರೆ.

''ಪಾದರಿಗಳು ನಿಧಾನವಾಗಿ ಇವರತ್ತ ಬಾಗಿ ಇವರ ಪಿಸು ನುಡಿಗೆ ಕಿವಿಗೊಡುತ್ತಾರೆ.''

ಪಾಪ ನಿವೇದನೆಯ ನಂತರ ಪಾದರಿಗಳು –

''ತಂದೆ ಮಗನ ಸ್ಥಿತಿ ಅರಿತು ಸಾಂತುವಿನ ಹೆಸರಿನಲ್ಲಿ ನಾನು ನಿಮ್ಮ ಪಾಪಗಳನ್ನು ಕ್ಷಮಿಸುತ್ತೇನೆ'' ಎಂದು ಹೇಳುತ್ತಾರೆ.

''ಪಶ್ಚಾತ್ತಾಪವೆಂದು ಪರಲೋಕ ಮಂತ್ರ, ನಮೋ ರಾಣೆ ಮಂತ್ರಗಳನ್ನು ನಿತ್ಯ ಜಪಿಸಲು ಹೇಳುತ್ತಾರೆ.''

''ಇದೆಲ್ಲ ಅಭ್ಯಾಸಬಲದಿಂದ ನಡೆದುಹೋಗುತ್ತದೆ.''

ಪಾಪ ನಿವೇದನೆಯ ಪ್ರಕ್ರಿಯೆ ಪಿಸುನುಡಿಯಲ್ಲಿ ನಡೆಯುತ್ತದೆ. ತಾನು ಎಸಗಿದ್ದ ಪಾಪಗಳನ್ನು ಪಾದರಿಗಳು ದೇವರಿಂದ ಪಡೆದ ಅನುಗ್ರಹದ ಆಧಾರದ ಮೇಲೆ ಕ್ಷಮಿಸಿದ್ದಾರೆ. ತಾನು ಪಾಪ ಮುಕ್ತನಾಗಿದ್ದೇನೆ ಎಂಬ ಸಮಾಧಾನವೇ ಇಲ್ಲಿ ಮುಖ್ಯವಾಗುತ್ತದೆ.

''ಆ ಶನಿವಾರ ಐದೂವರೆ ಆರರಿಂದ ಪಾದರಿ ದುಮಿಂಗೋ ಸುಮಾರು ಜನರ ಪಾಪ ನಿವೇದನೆ ಕೇಳಿದರು. ಆರೂವರೆ ಹೊತ್ತಿಗೆ ಚೂರಿ ಲುವಿಸ, ಕೆಳಗಿನ ಕೇರಿ ದುಮಿಂಗ, ನಂತರ ಟೈಲರ್ ಅಂತೋಣಿ, ಆಮೇಲೆ ಹಂದಿ ಗುಸ್ತೀನ ಇವರೆಲ್ಲ ಪಾಪ ನಿವೇದನೆ ಮುಗಿಸಿಕೊಂಡು ಬಂದರು.

''ಇವರಲ್ಲಿ ಚೂರಿ ಲುವಿಸ ಊರಿನಲ್ಲಿ ಒಂದು ಚಾಪ್ಟರ್ ಎಂದೇ ಪ್ರಖ್ಯಾತನಾದವ. ಊರಿನಲ್ಲಿ ಕೇರಿಯಲ್ಲಿ ಏನಾದರೂ ಜಗಳ ಹೊಡೆದಾಟವಾದರೆ ಅವರ ಹಿಂದೆ ಚೂರಿ ಲುವಿಸ ಇರುತ್ತಿದ್ದ. ಮಾತು ಮಾತಿಗೆ ನಾನು ಯಾರು ಗೊತ್ತ ಎಂದು ಕೇಳುವುದು ಅವನ ಅಭ್ಯಾಸ. ಜೊತೆಗೆ ಸೊಂಟದಲ್ಲಿ ಇರಿಸಿ ಕೊಳ್ಳುತ್ತಿದ್ದ ಚೂರಿಯನ್ನು ತೋರಿಸುವುದು.

''ಈಗ ಆರು ತಿಂಗಳ ಹಿಂದೆ ಈತ ಮಗನಿಗೆ ಮದುವೆ ಮಾಡಿ ಸೊಸೆಯನ್ನು ತಂದಿದ್ದ. ನೈಂದೂರಿನ ಗಾಬ್ರಿ ಮೆಲಸೋಜನ ಮಗಳು ಈ ಹುಡುಗಿ. ಹುಡುಗಿ ಒಳ್ಳೆಯವಳೆ. ಆದರೆ ಆಕೆ ಮನೆಗೆ ಬಂದಂದಿನಿಂದ ತಂದೆ ಮಗ ಆ ಹುಡುಗಿಯನ್ನು ನಾನಾ ರೀತಿಯಲ್ಲಿ ಹಿಂಸಿಸುತ್ತಾರೆ ಎಂಬುದು ಊರಿಗೆಲ್ಲ ಗೊತ್ತಿರುವ ಸುದ್ದಿ.

''ಈ ಚೂರಿ ಲುವಿಸ ದೈವಭಕ್ತ. ಪ್ರತಿ ಶನಿವಾರ ಪಾಪ ನಿವೇದನೆಗೆ ಬರುತ್ತಾನೆ. ಭಯ ಭಕ್ತಿಯಿಂದ ಪಾಪ ನಿವೇದನೆ ಮಾಡಿಕೊಳ್ಳುತ್ತಾನೆ. ಮಾರನೇ ದಿನ ಪೂಜಾ ಸಮಯದಲ್ಲಿ ಅಷ್ಟೇ ಭಕ್ತಿಯಿಂದ ದಿವ್ಯಪ್ರಸಾದ ಸ್ವೀಕರಿಸುತ್ತಾನೆ.

''ಎಂದಿನಂತೆ ಶನಿವಾರ ಚೂರಿ ಲುವಿಸ ಪಾಪ ನಿವೇದನೆ ಮುಗಿಸಿ ಬಂದು ಮೊಣಕಾಲೂರಿ ಪ್ರಾರ್ಥನೆಗೆ ತೊಡಗಿದರು. ನಂತರ ದುಮಿಂಗ, ಅಂತೋಣಿ, ಗುಸ್ತೀನರ ಪಾಪ ನಿವೇದನೆ ಕೂಡ ಮುಗಿಯಿತು.

''ನಾನು ಬಾಗಿಲ ಹತ್ತಿರ ನನ್ನ ಸರದಿ ಕಾಯುತ್ತ ಮೊಣಕಾಲೂರಿದ್ದೆ.

''ಹಂದಿ ಗುಸ್ತೀನ ಪ್ರಾರ್ಥನೆ ಮುಗಿಸಿ ನೇರ ನನ್ನ ಬಳಿ ಬಂದ. ಅವನ ನಡವಳಿಕೆಯಲ್ಲಿ ಏನೋ ಗಡಿಬಿಡಿ ಅವಸರ ಕಂಡಿತು.

''ಗುರ್ಕಾರ ಮಾಮ ಹೊರಗೆ ಬನ್ನಿ, ಸ್ವಲ್ಪ'' ಎಂದ.

''ಎದ್ದು ಹೊರಬಂದೆ.

''ಪಾಪ ನಿವೇದನೆ ಕುರ್ಚಿಯಲ್ಲಿ ಕೂತಿರೋ ಪಾದರಿಗಳನ್ನು ಗಮನಿಸಿದ್ದೀರಾ ? ಎಂದು ಕೇಳಿದ.

''ಹೌದು... ಏನೀಗ ?''

''ನನಗೇನೋ ಅನುಮಾನ... ಅವರು ಮಾತನಾಡತಿಲ್ಲ... ಏನೂ ಹೇಳತಿಲ್ಲ...''

''ಹೌದೆ ?

''ನಾನು ಸರಸರನೆ ಒಳಹೋದೆ. ಹಂದಿ ಗುಸ್ತೀನನ ನಂತರ ಪಾಪ ನಿವೇದನೆ ಮುಗಿಸಿಕೊಂಡ ಅಲೆಕ್ಸಿ ಪಾದರಿಗಳ ಬಳಿಯಿಂದ ಏಳುತ್ತಿರುವಾಗ ನಾನು ಹೋಗಿ ಅಲ್ಲಿ ಮೊಳಕಾಲೂರಿದೆ...'' ಗುರ್ಕಾರ ಮಾಮ ಇಷ್ಟು ಹೇಳಿ ಸುಮ್ಮನಾದರು.

''ಮುಂದೆ ಏನಾಯ್ತು ಮಾಮ ?'' ಎಂದು ನಾನು ಕೇಳಿದೆ.

**ಸುದ್ದಿ ಚಿತ್ರ**



ಗುಲ್ಬರ್ಗಾ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಸಹಕಾರದೊಂದಿಗೆ ನವಕರ್ನಾಟಕ ಪುಸ್ತಕ ಪ್ರದರ್ಶನ ಮತ್ತು ಮಾರಾಟ ಕಾರ್ಯಕ್ರಮ ಯಶಸ್ವಿಯಾಗಿ ನಡೆಯಿತು.

ಶ್ರೀ ಅಮೃತರಾವ್ ಪಾಟೀಲ್ (ಮಹಾಪೌರರು) ಉದ್ಘಾಟನೆ ಮಾಡಿದರು. ಶ್ರೀ ಅಪ್ಪಾರಾವ್ ಅಕ್ಕೋಣಿ ಮುಖ್ಯ ಅತಿಥಿಗಳಾಗಿದ್ದರು. ಶ್ರೀ ವೀರಭದ್ರ ಸಿಂಪಿ, ಪ್ರೊ॥ ಈಶ್ವರಯ್ಯ ಮಠ್, ಶ್ರೀ ಸೂರ್ಯಕಾಂತ ಸೊನ್ನದ ಹಾಗೂ ಹಲವಾರು ಪುಸ್ತಕಾಸಕ್ತರು ಭಾಗವಹಿಸಿದ್ದರು. ಶ್ರೀ ಆರ್. ಕೆ. ಹುಡುಗಿ ಅಧ್ಯಕ್ಷತೆ ವಹಿಸಿದ್ದರು.

ನನ್ನ ಪ್ರಶ್ನೆಗೆ ಉತ್ತರ ಹೇಳುವುದನ್ನು ಬಿಟ್ಟು ಗುರ್ಕಾರ ಮಾಮ ಪಾದರಿ ದುಮಿಂಗೋ ವಿಷಯ ಹೇಳತೊಡಗಿದರು.

''ಪಾದರಿ ದುಮಿಂಗೋ ಗೋವಾದವರು.

''ಕ್ರೈಸ್ತ ಧರ್ಮದಲ್ಲಿ ಕ್ರಿಸ್ತನ ಬೋಧನೆಗಳಲ್ಲಿ ಅತೀವ ವಿಶ್ವಾಸವಿರಿಸಿಕೊಂಡವರು.

''ಅವರು ಊರಿಗೆ ಬಂದು ಎರಡೇ ವರ್ಷ ಗಳಾಗಿದ್ದರೂ ಈ ಅಲ್ಪ ಅವಧಿಯಲ್ಲಿ ಜನ ಕ್ರಿಸ್ತನ ಬೋಧನೆಗಳಿಗೆ ಅನುಗುಣವಾಗಿ ಬದುಕುವುದು ಹೇಗೆ ಎಂಬುದನ್ನು ಜನರಿಗೆ ತಿಳಿಸಿಕೊಟ್ಟಿದ್ದರು.

''ಮುಖ್ಯವಾಗಿ ಅವರು ಬರುವುದಕ್ಕೂ ಮೊದಲು ಇಲ್ಲಿದ್ದ ಪಾದರಿ ಜನ ಇಗರ್ಜಿಗೆ ಬರಲೇಬೇಕೆಂದು ಹೇಳುತ್ತಿರಲಿಲ್ಲ. ವಾರಕ್ಕೊಮ್ಮೆ ಪಾಪ ನಿವೇದನೆ ಮಾಡಬೇಕೆಂದು ದಿವ್ಯ ಪ್ರಸಾದ ಸ್ವೀಕರಿಸಬೇಕೆಂದು ಒತ್ತಾಯ ಮಾಡುತ್ತಿರಲಿಲ್ಲ.

''ಇವರು ಊರಿಗೆ ಬಂದದ್ದೇ ಮನೆ ಮನೆಗೆ ಭೇಟಿ ನೀಡಿದರು.

''ಪ್ರತಿ ಭಾನುವಾರ ಇಗರ್ಜಿಗೆ ಬರುತ್ತೀರಾ ?

''ವಾರಕ್ಕೊಮ್ಮೆ ಪಾಪ ನಿವೇದನೆ ಮಾಡಿ ಕೊಳ್ಳುತ್ತೀರಾ ?

''ಉಪವಾಸವಿದ್ದು ದಿವ್ಯ ಪ್ರಸಾದ ಸ್ವೀಕರಿಸುತ್ತೀರಾ ?''

''ನಿತ್ಯ ಮನೆಯಲ್ಲಿ ಪ್ರಾರ್ಥನೆ ಮಾಡುತ್ತೀರಾ ?'' ಎಂದು ಕೇಳಿದರು.

''ನಿಜವಾದ ಕ್ರಿಸ್ತುವರಿಗೆ ಇದರ ಅವಶ್ಯಕತೆ ಎಷ್ಟಿದೆ ಎಂಬುದನ್ನು ವಿವರಿಸಿದರು.

''ನೀವು ದಿನನಿತ್ಯ ಒಂದಲ್ಲಾ ಒಂದು ಪಾಪ ಮಾಡುತ್ತೀರಿ.

''ಈ ಪಾಪಗಳ ಸಂಖ್ಯೆ ಅಧಿಕವಾಗುತ್ತಾ ಹೋಗುತ್ತದೆ.

''ಪದರು ಪದರಾಗಿ ಈ ಪಾಪಗಳು ಹೆಚ್ಚುತ್ತ ಹೋಗುತ್ತವೆ.

''ನಿಮ್ಮ ಪಾಪದ ಕೊಡ ತುಂಬುತ್ತದೆ.

''ಇದರ ಬದಲು ಮಾಡಿದ ಪಾಪಗಳನ್ನು ನೆನಪಿಗೆ ತಂದುಕೊಳ್ಳಿ. ಅವುಗಳನ್ನು ಪಾದರಿಗಳ ಬಳಿ ನಿವೇದಿಸಿ ಕೊಳ್ಳಿ. ಮಾಡಿದ ಪಾಪಗಳಿಗಾಗಿ ಪಶ್ಚಾತ್ತಾಪಪಡಿ. ಮತ್ತೆ ಇಂತಹ ಪಾಪಗಳನ್ನು ಮಾಡುವುದಿಲ್ಲ ಎಂದು ನಿರ್ಧರಿಸಿ.

''ಏಸು ಪ್ರಭು ನಮಗೆಲ್ಲ ಒಂದು ಅವಕಾಶ ಕಲ್ಪಿಸಿ ಕೊಟ್ಟಿದ್ದಾರೆ. ಸಾಮಾನ್ಯರಾದ ನಾವು ಮಾಡಿದ ಪಾಪ ಗಳನ್ನು ಪಾದರಿಗಳಲ್ಲಿ ಹೇಳಿಕೊಂಡಾಗ ಪಾದರಿಗಳು ದೇವರ ಕೃಪೆಯಿಂದ ಈ ಪಾಪಗಳನ್ನು ಕ್ಷಮಿಸುತ್ತಾರೆ. ನಾವು ಪಾಪಮುಕ್ತರಾಗುತ್ತೇವೆ. ಸ್ನಾನ ಮಾಡಿ ಬಂದರೆ ನಮ್ಮ ದೇಹ ಹೇಗೆ ಸ್ವಚ್ಛವಾಗುತ್ತದೋ ಹಾಗೆಯೇ ನಮ್ಮ ಆತ್ಮ ನಮ್ಮ ಅಂತರಂಗ ಸ್ವಚ್ಛವಾಗುತ್ತದೆ. ಈ ಕಾರಣಕ್ಕೆ ನಾವು ಪಾಪ ನಿವೇದನೆ ಮಾಡಬೇಕು. ದಿವ್ಯ ಪ್ರಸಾದ ಸ್ವೀಕರಿಸಬೇಕು.

''ಪಾದರಿ ದುಮಿಂಗೋ ಸರಳವಾಗಿ ಮತ್ತೆ ಮತ್ತೆ ಜನರಿಗೆ ಹೇಳಿದರು –

''ಒಂದು ಪಾಪ ಮಾಡಿದೆ ಅಂತ ನಿಮಗೆ ಅನಿಸಿದರೆ ತಕ್ಷಣ ನೀವು ಪಾದರಿಗಳಲ್ಲಿ ಬನ್ನಿ. ಮಾಡಿದ ಪಾಪವನ್ನು ಅರಿಕೆ ಮಾಡಿಕೊಳ್ಳಿ. ನಿಮಗೆ ಕ್ಷಮೆ ಸಿಗುತ್ತದೆ...

''ಜನ ಪಾದರಿಗಳ ಮಾತಿಗೆ ಬೆಲೆಕೊಟ್ಟಂತೆ ಪಾಪ ನಿವೇದನೆಗೆ ಬರತೊಡಗಿದರು. ಈ ಸಂಖ್ಯೆ ಹೆಚ್ಚಿತು.

''ಪಾದರಿ ದುಮಿಂಗೊ ಇದೊಂದು ಒಳ್ಳೆಯ ಕೆಲಸ ಮಾಡಿದರು...''

''ಅದು ಸರಿ ಗುರ್ಕಾರ ಮಾಮ... ಹಿಂದಿನದೆಲ್ಲ ಇರಲಿ... ಆ ಶನಿವಾರ ಏನಾಯ್ತು?'' ಎಂದು ನಾನು ನಡುವೆ ಬಾಯಿ ಹಾಕಿದೆ.

ವಿಷಾದದಿಂದ ಅವರೆಂದರು – ''ಆಗೋದೆಲ್ಲ ಆಗಿಹೋಗಿತ್ತು. ಪಾಪ ನಿವೇದನೆ ಕೇಳ್ತಾ ಕೇಳ್ತಾ... ಎಲ್ಲರ ಪಾಪಾನ ಕ್ಷಮಿಸುತ್ತಾ... ಪಾದರಿ ದುಮಿಂಗೋ ಕ್ರಿಸ್ತ ಪ್ರಭುವಿನ ಹತ್ತಿರಕ್ಕೆ ಹೊರಟುಹೋಗಿದ್ರು... ಕೊನೆಯ ಐದಾರು ಜನ ಅಲ್ಲಿ ಪಾದರಿ ದುಮಿಂಗೋ ಇದಾರೆ ಅಂತ ತಿಳಕೊಂಡೇ ಪಾಪ ನಿವೇದನೆ ಮಾಡಿ ಕೊಂಡಿದ್ರು... ಇದು ತಪ್ಪೂ ಅಲ್ಲ... ನಾವು ಪಾದರಿಗಳ ಮೂಲಕ ದೇವರಲ್ಲಿ ಮೊರೆ ಇಡೋದ್ರಿಂದ... ನಾವು ಹೇಳಿದ್ದು ದೇವರಿಗೆ ತಲುಪಿರುತ್ತೆ ಅಂತ ನಾವು ತಿಳಿದಿರುತ್ತೇವೆ... ಆದರೆ...'' ಗುರ್ಕಾರ ಮಾಮ ತುಂಬಾ ಪೇಚಾಡಿಕೊಂಡರು.

''ಅಲ್ಲ ಇದು ಹೇಗಾಯ್ತು, ಗುರ್ಕಾರ ಮಾಮ''– ನಾನು ಅವರ ನೋವನ್ನು ಹಂಚಿಕೊಳ್ಳುವಂತೆ ಕೇಳಿದೆ.

''ಹ್ಯಾಗೆ ಅಂತ ಹೇಳಲಿ... ಪಾಪ ನಿವೇದನೆ ಕೇಳೋ ಕುರ್ಚಿನಲ್ಲೇ ಅವರ ಪ್ರಾಣ ಹೋದದ್ದಂತು ನಿಜ... ನಾವಿಲ್ಲಿ ಪಾದರಿಗಳಿಗೆ ಹೀಗಾಯ್ತು ಅನ್ನುವ ಆತಂಕದಲ್ಲಿ ಇದ್ದಾಗ... ಚೂರಿ ಲುವಿಸನ ಮನೆಗೆ ಬೆಂಕಿ ತಗುಲಿ, ಮನೆಯೊಳಗಿದ್ದ ಅವನ ಸೊಸೆ ಬೆಂದು ಹೋದಳು... ಈ ಚೂರಿ ಲುವಿಸ ಇಗರ್ಜಿಯಿಂದ ಮನೆಗೆ ಹೊರಟಾಗಲೇ ಅವನ ಮನೆಗೆ ಬೆಂಕಿ ಬಿದ್ದಿತ್ತು... ತಾನು ಪಾಪ ನಿವೇದನೆ ಮಾಡಿಕೊಳ್ಳುವಾಗ ಪಾದರಿಗಳು ಸರಿಯಾಗಿದ್ರು, ತನ್ನ ಮಾತುಗಳನ್ನೆಲ್ಲ ಮತ್ತೆ ಮತ್ತೆ ಕೇಳಿದ್ರು ಅಂತ ಅನಂತರ ಲುವಿಸ ಹೇಳಿದ... ಇವನ ಸೊಸೆ ಮಾತ್ರ ಮನೆಗೆ ಬೆಂಕಿ ಬೀಳೋದಕ್ಕಿಂತ ಮುಂಚೇನೆ ಸತ್ತಿದ್ಲು ಅಂತ ಆಮೇಲೆ ವೈದ್ಯರು ಹೇಳಿದರು. ಅವಳ ಸಾವಿಗೂ ಕಾರಣ ತಿಳೀಲಿಲ್ಲ, ಪಾದರಿಗಳು ಹೇಗೆ ಸತ್ರು ಗೊತ್ತಾಗಲಿಲ್ಲ. ಲುವಿಸ ಈಗಲೂ ಇಗರ್ಜಿಗೆ ಬರತಾನೆ... ಪಾಪ ನಿವೇದನೆ ಮಾಡಿ ದಿವ್ಯ ಪ್ರಸಾದ ಸ್ವೀಕರಿಸುತ್ತಾನೆ...''

ಗುರ್ಕಾರ ಮಾಮ ಒಂದು ನಿಮಿಷ ಮೌನ ದಿಂದಿದ್ದು ನಂತರ ಮಾತನ್ನು ಮುಂದುವರಿಸಿದರು –

''ಆಮೇಲೆ ತುಂಬಾ ದಿನ ಈ ಕುರ್ಚಿ ಇಗರ್ಜೀನಲ್ಲಿ ಇತ್ತು... ಆದರೆ ಅದರ ಮೇಲೆ ಕೂತು ಪಾಪ ನಿವೇದನೆ ಕೇಳೋದಕ್ಕೆ ಪಾದರಿಗಳು ಒಪ್ಪುತ್ತಿರಲಿಲ್ಲ... ನಾನೇ ಅದನ್ನು ಸ್ಯಾಕ್ರಿಸ್ಟಿಗೆ ಸಾಗಿಸಿದೆ... ಈಗೆಲ್ಲ ಬೇರೆ ಕುರ್ಚಿಗಳು ಬಂದಿವೆ...''

ಗುರ್ಕಾರ ಮಾಮ ಇನ್ನು ಹೇಳಲು ಏನೂ ಇಲ್ಲ ಎಂಬಂತೆ ಕುಳಿತರು.

ಬೇಯಿಸಿ ಒಣಗಿಸಿದ ಭತ್ತದ ವಾಸನೆಯನ್ನು ಆಘ್ರಾಣಿಸುತ್ತಾ ನಾನಲ್ಲಿ ಬಹಳ ಹೊತ್ತು ಕುಳಿತಿದ್ದೆ.


ನಾ. ಡಿಸೋಜ

೧೫/೧೪, ೨ನೇ ಕ್ರಾಸ್, ನೆಹರು ನಗರ, ಸಾಗರ - ೫೭೭ ೪೦೧


## ಬಾನುಲಿ



ಮನಸ್ಸು ಚುರ್ರೆನ್ನುತ್ತಿದೆ
ನನ್ನ ಪ್ರೀತಿಯ ರೇಡಿಯೋ ಒಡೆದು ಹೋಗಿದೆ

ಕೆಳಗೆ ಎತ್ತಿ ಹಾಕಿದ್ದಲ್ಲ
ಕೈ ತಾಗಿ ಬಿದ್ದು ಹೋದದ್ದು
ಬಿದ್ದ ಕ್ಷಣ ಹಾಡು ನಿಂತು ಹೋಗಿ
ಮನಸ್ಸೆಲ್ಲ ಮಬ್ಬಾಗಿ
ಒಡೆದ ಚೂರು ಅಣಕಿಸಿತು

ಪ್ರೀತಿ ಹೆಚ್ಚಾಗಿ ಕುರುಡಾಯಿತೇ ?
ಹೆಚ್ಚೆಚ್ಚು ಬಳಸಿ
ಇರುವಿಕೆಯೇ ಇಲ್ಲವಾಯಿತೇ ?
ಸಹಜ ಧ್ವನಿ – ರಾಗಗಳಿಗೆ
ತುಡಿಯುವ ಪ್ರೀತಿ ಸುಳ್ಳೇ ?

ಏನಿದು ? ಅರ್ಥವಾಗದ ಸತ್ಯ
ಮನವ ಚುರುಗುಟ್ಟಿಸುತ್ತಿರುವ ಸತ್ಯ

ಚುರು ಚುರುವಿನ ಕಣಕಣದಲ್ಲೂ
ಒಡೆದ ರೇಡಿಯೋ ಚೂರು

ಅಂಟಿಸಿ ಮತ್ತೆ ಈ ಚೂರನ್ನು
ರೇಡಿಯೋ ಆನ್ ಮಾಡಿ ಮತ್ತೆ
ಒಗ್ಗೊಟ್ಟಾಗ ಮಾತ್ರ
ಈ ನೋವು ಮಾಯಬಹುದು...

ಅದುವರೆಗೆ –
ಕ್ಷಮಿಸು ನನ್ನ ಪ್ರೀತಿಯ ರೇಡಿಯೋವೇ
ನನ್ನ ಕುರುಡು ಕಂಗಳಿಗೆ
ಪ್ರೀತಿಯ ದೃಷ್ಟಿ ಪಾಲಿಸಿದ ಮಹಾಮಹಿಮ ನೀನು !


ಜ್ಯೋತಿ ಗುರುಪ್ರಸಾದ್
'ಕಾವೇರಿ', ತೆಕ್ಕಾರು ರಸ್ತೆ, ಹಡಿಯಾಲದವೇ ತರುವು, ಕಾರ್ಕಳ - ೫೭೪ ೧೦೪

# ನಮ್ಮ ವಿದೇಶಿ ವಿನಿಮಯ ಸಂಗ್ರಹ ವಿಪರೀತವೇ ?

**ಅತ್ಯಂತ ಬಂಡವಳಿಗ ರಾಷ್ಟ್ರಗಳಲ್ಲಿ ಸರ್ಕಾರದ ಯಂತ್ರ ಬೆಳೆಯುತ್ತಲೇ ಇದೆ. ಅದರ ಅನಿವಾರ್ಯತೆ ಪ್ರಶ್ನಾತೀತವಾಗಿದೆ. ಅದು ಸಮರ್ಥವಾಗಿ ನಡೆಯಬೇಕು ಎಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಈ ಮಧ್ಯೆ ಒಂದು ಕೆಟ್ಟ ಬೆಳವಣಿಗೆಯೆಂದರೆ ಮಿಲಿಟರಿ, ಪೊಲೀಸ್ ವ್ಯವಸ್ಥೆಯ ನಿರಂತರ ವಿಸ್ತಾರ. ಪ್ರಜಾಪ್ರಭುತ್ವಕ್ಕೆ ಧಕ್ಕೆ ಉಂಟುಮಾಡುವ ಪ್ರಭುತ್ವದ ಹಿಂಸಕ ಶಕ್ತಿಯ ವಿಸ್ತಾರವು ಖಾಸಗಿ ಉದ್ಯಮಗಳಿಗೆ ಅಪಾರ ಲಾಭ ತರುವ, ಸಾರ್ವಜನಿಕ ಪಾರದರ್ಶಕತೆಗೆ ಸಿಗದ ಒಂದು ವಿಷಯವೇ ಆಗಿದೆ.**



**ಕೆ. ಎಸ್. ಪಾರ್ಥಸಾರಥಿ**

ನಮ್ಮ ದೇಶದ ವಿದೇಶಿ ವಿನಿಮಯ ಸಂಗ್ರಹ ೧೪೦ ಬಿಲಿಯನ್ ಡಾಲರುಗಳಿಗೂ ಮೀರುವುದರಲ್ಲಿದೆ. ಇದು ಸುಮಾರು ೬,೩೦,೦೦೦ ಕೋಟಿ ರೂಪಾಯಿಗಳು. ೧೯೯೧ರಲ್ಲಿ ನಮ್ಮ ಈ ಸಂಗ್ರಹ ಕೆಲವೇ ದಿನಗಳ ಆಮದಿನ ಬೆಲೆ ನೀಡಲು ಸಾಕಾಗುವಷ್ಟೂ ಇಲ್ಲದೆ, ನಾವು ಗಡುವಿನಂತೆ ಹಿಂದಿರುಗಿಸಬೇಕಾದ ಸಾಲಗಳನ್ನು ಹಿಂದಿರುಗಿಸಲೂ ಆಗದೆ, ಒಂದು ರಾಷ್ಟ್ರವಾಗಿ ದಿವಾಳಿಯಾದಂತೆ ಆಗಿತ್ತು. ಆಗ ನಮ್ಮಲ್ಲಿ ನಿಕ್ಷೇಪವಾಗಿದ್ದ ಚಿನ್ನವನ್ನು ಪರದೇಶದ ಬ್ಯಾಂಕಿನಲ್ಲಿ ಅಡಮಾನ ಮಾಡಿ, ತತ್ಕಾಲದ ಬಿಕ್ಕಟ್ಟನ್ನು ನಿರ್ವಹಿಸಲುಬೇಕಾದ ವಿದೇಶಿ ವಿನಿಮಯವನ್ನು ಪೂರೈಸಿಕೊಂಡೆವು. ಆ ಹಿನ್ನೆಲೆಯಲ್ಲಿ ಯಾವಾಗಲೂ ವಿದೇಶಿ ವಿನಿಮಯದ ಕೊರತೆಯ ತಾಪತ್ರಯವಿದ್ದ ದೇಶದಲ್ಲಿ ಇಷ್ಟೊಂದು ಸಂಗ್ರಹ ಶ್ರೀಮಂತಿಕೆಯ ಭ್ರಮೆ ತರುತ್ತದೆ. ಹಿಂದೆ ವಿದೇಶಕ್ಕೆ ಹೋಗಬೇಕಾದರೆ ಅಥವಾ ತುರ್ತಾಗಿ ವಿದೇಶಿ ಔಷಧಿ ಖರೀದಿಸಬೇಕೆಂದರೂ ನೂರಾರು ಕಾನೂನಿನ ತಕರಾರುಗಳನ್ನು ಎದುರಿಸಬೇಕಾಗುತ್ತಿತ್ತು. ಈಗ ಐಷಾರಾಮದ ವಿದೇಶಿ ಪ್ರವಾಸ ಕೈಗೊಂಡರೂ ೧೦,೦೦೦ ಡಾಲರುಗಳು (ಸುಮಾರು ೪,೫೦,೦೦೦ ರೂಪಾಯಿ) ಲಭ್ಯ. ಇದನ್ನು ಇನ್ನೂ ಹೆಚ್ಚಿಸುವುದರಲ್ಲಿದ್ದಾರೆ! ಹೀಗಿರುವಾಗ ಸಾಮಾನ್ಯವಾಗಿ ಹೊಳೆಯುವ ವಿಷಯವೆಂದರೆ ಈ ಅಪಾರ ಧನರಾಶಿಯನ್ನು ದೇಶದ ಆಂತರಿಕ ಅಭಿವೃದ್ಧಿಯ ಕ್ಷೇತ್ರದಲ್ಲಿ, ಅದರಲ್ಲೂ ಅತ್ಯಂತ ತುರ್ತಾಗಿ ಆಗಬೇಕಾದ ಮೂಲಭೂತ ಸೌಕರ್ಯಗಳ ಸೃಷ್ಟಿಗೆ, ಉದಾ: ರಾಷ್ಟ್ರೀಯ ಹೆದ್ದಾರಿ, ವಿಮಾನ ನಿಲ್ದಾಣ, ಬಂದರುಗಳು, ವಿದ್ಯುಚ್ಛಕ್ತಿ, ನೀರಾವರಿ ಅಣೆಕಟ್ಟುಗಳು, ಮುಂತಾದುವಕ್ಕೆ ತೊಡಗಿಸಬಾರದೇಕೆ ಎಂಬ ಪ್ರಶ್ನೆ. ಈ ಸಲಹೆಯನ್ನು ಕೇಂದ್ರ ಯೋಜನಾ ಮಂಡಲಿ ಸಹ ನೀಡಿದೆ.

ಈ ಸಾಲಿನ ಕೇಂದ್ರದ ಬಜೆಟ್‌ನಲ್ಲಿ ಮೂಲಭೂತ ಸೌಕರ್ಯಗಳ ಸೃಷ್ಟಿಗೆ ಹತ್ತು ಸಹಸ್ರ ಕೋಟಿ ರೂಪಾಯಿಗಳ ಒಂದು ವಿಶೇಷ ಹಣಕಾಸು ಸಂಸ್ಥೆಯನ್ನು ಹುಟ್ಟು ಹಾಕಲಾಗುವುದು ಎಂದು ತಿಳಿಸಲಾಯ್ತು. ಬಹಳ ಜನ ವಿದೇಶಿ ವಿನಿಮಯ ಸಂಗ್ರಹದಿಂದ ಈ ಹಣವನ್ನು ಪಡೆಯಲಾಗುತ್ತದೆ ಎಂದುಕೊಂಡರು. ಚಿದಂಬರಂರವರು ಅದು ಹಾಗಲ್ಲ ಎಂದು ವಿವರಣೆ ನೀಡಿದ್ದಾರೆ. ವಿವರಣೆ ಎರಡು ಹಂತದ್ದು: ಮೂಲಭೂತ ಸೌಕರ್ಯಕ್ಕೆ ಬೇಕಾದ ಸಾಧನ ಸಂಪತ್ತಿನ ಸ್ವಭಾವದಂಥದು ಒಂದು. ವಿದೇಶಿ ಹಣ ಸಂಗ್ರಹ ಹೇಗೆ ನೇರವಾಗಿ ನಮ್ಮ ಬಳಕೆಗೆ ಸಿಗದು, ಆದರೂ ನಮಗೆ ಏಕೆ ಅದರ ಸಂಗ್ರಹ ಬೇಕು ಎಂಬುದು ಎರಡನೆಯದು.

ಮೂಲಭೂತ ಸೌಕರ್ಯಗಳ ಸೃಷ್ಟಿಗೆ ಬೇಕಾದ ತಂತ್ರಜ್ಞಾನ, ಮೂಲವಸ್ತುಗಳು ನಮ್ಮ ದೇಶದ ಒಳಗೇ ಲಭ್ಯವಿದ್ದರೆ ಅವನ್ನೇ ಬಳಸುತ್ತೇವೆ. ಸಿಮೆಂಟು, ಉಕ್ಕು ಮುಂತಾದವು. ಹೊರನಾಡಿನಿಂದ ಏನನ್ನಾದರೂ ತರಿಸಿಕೊಳ್ಳಬೇಕೆಂದರೆ ಕಷ್ಟವಿಲ್ಲ. ಅದಕ್ಕೆ ಬೇಕಾದಷ್ಟು ವಿದೇಶಿ ವಿನಿಮಯ ಸಂಗ್ರಹ ನಮ್ಮಲ್ಲಿದೆ. ಅಗತ್ಯವಿದ್ದ ಒಳನಾಡಿನ ರೂಪಾಯಿ ಬಂಡವಾಳ ಸಂಗ್ರಹಿಸಿದರೆ ಸಾಕು. ಅಗತ್ಯವಿದ್ದಷ್ಟು ಡಾಲರನ್ನು ರೂಪಾಯಿ ಕೊಟ್ಟು ರಿಸರ್ವ್ ಬ್ಯಾಂಕಿನಿಂದ ಪಡೆಯಬಹುದು; ನಮ್ಮಲ್ಲಿಲ್ಲದ ತಂತ್ರಜ್ಞಾನ ಮುಂತಾದುವನ್ನು ಪಡೆಯಬಹುದು. ಮುಕ್ತ ಮಾರುಕಟ್ಟೆಯ ನಿಯಮವನ್ನು ಅನ್ವಯಿಸಿದರೆ ಆಂತರಿಕ ಸರಕುಗಳು ಆಮದು ಮಾಡಿಕೊಳ್ಳುವುದಕ್ಕಿಂತ ತುಟ್ಟಿಯಾದರೆ ಅವನ್ನೂ ಹೊರಗಿನಿಂದ ತರಿಸಿಕೊಳ್ಳುವುದೇ ಸರಿಯಾದ ಅರ್ಥನೀತಿ. ಈ ವಿಷಯಗಳು ಸರ್ಕಾರದ ನೀತಿ ನಿರೂಪಣೆ ವಿಷಯ. ಆದ್ದರಿಂದ ಒಟ್ಟಿನಲ್ಲಿ ಆಂತರಿಕವಾಗಿ ಈ ಬಂಡವಾಳ ಸಂಗ್ರಹಿಸುವ, ಉದ್ಯಮ ಪ್ರಾರಂಭಿಸುವ ಖಾಸಗಿ/ಸಾರ್ವಜನಿಕ ಔದ್ಯಮಿಕ ಉತ್ಸಾಹದ ಕೊರತೆಯೇ ವಿನಾ ಇವು ನಿಂತಿರುವುದು ವಿದೇಶಿ ವಿನಿಮಯ ಇಲ್ಲ ಎಂದಲ್ಲ. ರಾಷ್ಟ್ರದ ಒಳಗೆ ಸಾಕಷ್ಟು ರೂಪಾಯಿ ರೂಪದ ಹಣ ಉದ್ಯಮಿಗಳು ಬೇಡಿದಷ್ಟು ಕಡಿಮೆ ದರದಲ್ಲಿ ತುಂಬಿದೆ. ನಮ್ಮ ಈ ವರ್ಗದ ರಫ್ತು ಹಣವೇ ೭೦ ಬಿಲಿಯನ್ ಆಗಿದ್ದು, ಇದಕ್ಕೆ ಸಮನಾದಷ್ಟು ರೂಪಾಯಿ ಆಂತರಿಕ ವ್ಯವಹಾರದಲ್ಲಿ ಬೆರೆತು ನಗದು ರೂಪಾಯಿ ರಾಸಿ ತುಂಬಿದೆ. ಮೂಲಭೂತ ಸೌಕರ್ಯದ ಉದ್ಯಮದಲ್ಲಿ ಲಾಭಕ್ಕೆ ದೀರ್ಘಕಾಲ ಕಾಯಬೇಕು. ಹೂಡಿಕೆ, ಸಂಘಟನೆ ಎಲ್ಲ ಆಗಿ ಒಂದಷ್ಟು ಲಾಭ ಬರಲು ಪ್ರಾರಂಭವಾಗಬೇಕಾದರೆ ೫-೬ ವರ್ಷಗಳಾಗುತ್ತವೆ. ೧೦-೧೨ ವರ್ಷಗಳಲ್ಲಿ ಸಮೃದ್ಧಿಯಾಗಿ ಲಾಭ ತರಬಹುದು. ಈ ಕಾಲಾವಧಿ ತುಂಬ ವಿಸ್ತಾರವಿದ್ದು, ಏತನ್ಮಧ್ಯೆ ನಷ್ಟ ಉಂಟುಮಾಡುವ ಯಾವ ಬೆಳವಣಿಗೆಯೂ ಉಂಟಾಗಬಹುದು. ಅಂಥ ಉದ್ಯಮಗಳಲ್ಲಿ ತೊಡಗುವುದು ಒಂದು ಸಾಹಸವೆನಿಸುತ್ತದೆ; ಉದ್ಯಮಿಯ ಸಾಮರ್ಥ್ಯದ ಪರಾಕಾಷ್ಠತೆಯನ್ನು ಬಯಸುತ್ತದೆ. ನಮ್ಮ ಸ್ವಾತಂತ್ರ್ಯದ ಪ್ರಾರಂಭದ ದಿನಗಳಲ್ಲಿ ಈ ಕೆಲಸವನ್ನು ಸರ್ಕಾರ ಮಾಡಿದ್ದರಿಂದಲೇ ಇಂದು ಈ ಸಾಧನೆಗಳ ಬೆನ್ನಿನ ಮೇಲೆ ಸವಾರಿ ಮಾಡಿ, ಖಾಸಗಿ ಕ್ಷೇತ್ರದಲ್ಲಿ ಅಷ್ಟು ಸಾಹಸವಲ್ಲದ ಉದ್ಯಮಗಳು ಬೆಳೆಯಲು ಸಾಧ್ಯವಾದುದು. ಅದು ಹಾಗಿರಲಿ ; ವಾಸ್ತವವೆಂದರೆ ನಮ್ಮ ಉದ್ಯಮಗಳು ಈ ಕ್ಷೇತ್ರವನ್ನು ಪ್ರವೇಶಿಸದೆ, ವಿದೇಶಿ ಉದ್ಯಮಿಗಳು ಬಂದು ಈ ಕೆಲಸ ಮಾಡಲಿ ಎನ್ನುತ್ತವೆ. ಅವರು ಬಂದು ತಮ್ಮ ಉದ್ಯಮ ನಡೆಸಲು ಎಲ್ಲ ಅನುಕೂಲಗಳನ್ನೂ ಕೊಡಿ ಎನ್ನುತ್ತಾರೆ. ವಸ್ತುಸ್ಥಿತಿ ಎಂದರೆ ಅವರ್‍ಯಾರೂ ಬರುತ್ತಿಲ್ಲ. ಇದು ಕೇವಲ ಮುಕ್ತ ನೀತಿಯ ವಿಷಯವಲ್ಲ. ಅವರು ಬಂದರೆ ಅವರಿಗೆ ಬೇಕಾದ ವಿದೇಶಿ ವಿನಿಮಯವನ್ನು ಅವರೇ ತರುತ್ತಾರೆ. ಚಿದಂಬರಂ ಪ್ರಕಾರ ಅಂಥ ಉದ್ಯಮಗಳನ್ನು ಸಾರ್ವಜನಿಕ-ಖಾಸಗಿ-ವಿದೇಶಿ ಒಟ್ಟಾರೆ ಪಾಲುಗಾರಿಕೆಯಲ್ಲಿ ಪ್ರಾರಂಭಿಸಬೇಕು. ಅದಕ್ಕೆ ಈ ಹೊಸ ಹಣಕಾಸು ಸಂಸ್ಥೆ ನಾಯಕತ್ವ ನೀಡುತ್ತದೆ. ಈ ಕ್ಷೇತ್ರದಲ್ಲಿ ಸರ್ಕಾರದ ನಾಯಕತ್ವ ಇಲ್ಲದೆ ಆಗುವುದಿಲ್ಲ ಎಂದಂತಾಯ್ತಲ್ಲಾ! ಸಣ್ಣ ಕಾಲಾವಧಿಯ ಅಪಾಯಗಳನ್ನು ಖಾಸಗಿಯವರು ಹೊರಲಿ. ದೀರ್ಘಕಾಲೀನ ಅಪಾಯಗಳನ್ನು ಸರ್ಕಾರ ಸಾರ್ವಜನಿಕವಾಗಿ ಹೊರುತ್ತದೆ ಎನ್ನುವ ಚಿಂತನೆ ಇದು. ಪ್ರಾಸಂಗಿಕವಾಗಿ ಒಂದು ವಿಷಯ. ಚೀನಾ ಇಂದು ನೂರು ಮಿಲಿಯ ಟನ್ನಿಗೂ ಹೆಚ್ಚು ಉಕ್ಕನ್ನು ಆಮದು ಮಾಡಿಕೊಳ್ಳುತ್ತಿದೆ. ಅಲ್ಲಿ ವಿದೇಶಿ ಉದ್ಯಮಿಗಳು

ಉಕ್ಕಿನ ಉದ್ಯಮ ಸ್ಥಾಪಿಸಲು ಮುನ್ನುಗ್ಗಿ ಹೋಗಿಲ್ಲ. ಉಕ್ಕು ಒಂದು ಮೂಲಭೂತ ಉದ್ದಿಮೆ. ನಾವು ಇಂದು ನಮ್ಮ ಎಲ್ಲ ಆಂತರಿಕ ಉಕ್ಕಿನ ಉತ್ಪಾದನೆಯನ್ನು ಬಳಸಲಾಗಿಲ್ಲ. ರಫ್ತು ಮಾಡುತ್ತಿದ್ದೇವೆ. ಲೆನಿನ್ ಉಕ್ಕು ಮತ್ತು ವಿದ್ಯುಚ್ಛಕ್ತಿಯೇ ರಷ್ಯಾದ ಆರ್ಥಿಕ ಕ್ರಾಂತಿಯ ಮೂಲಮಂತ್ರ ಎಂದಿದ್ದರು. ನಮ್ಮ ಆಂತರಿಕ ಅರ್ಥವ್ಯವಸ್ಥೆಯ ಬಿಕ್ಕಟ್ಟಿನಿಂದಾ` ನಾವು ಕಡಿಮೆ ಉಕ್ಕನ್ನು ಬಳಸುತ್ತೇವೆ. ವಿಶ್ವದ ಪ್ರಥಮ ಶ್ರೇಣಿಯ ಅರ್ಥವ್ಯವಸ್ಥೆಯಲ್ಲಿರುವಷ್ಟು ಉಕ್ಕಿನ ಆಂತರಿಕ ಬೇಡಿಕೆ ನಮ್ಮಲ್ಲಿ ಬರಬೇಕಾದರೆ ಹತ್ತಾರು ವರ್ಷಗಳೇ ಬೇಕಾಗಬಹುದು. ಚೀನಾ ವರ್ಷಕ್ಕೆ ೩೦೦ ಮಿಲಿಯನ್ ಟನ್ ಬಳಸುತ್ತಿದೆಯಂತೆ. ನಾವು ಸುಮಾರು ೩೫ ಮಿಲಿಯನ್ ಟನ್ ಅಷ್ಟೇ ಬಳಸುವುದು. (ಮಿಲಿಯನ್ = ಹತ್ತು ಲಕ್ಷ). ನಮ್ಮ ಖಾಸಗಿ ಉದ್ದಿಮೆಯ ಸಾಹಸ ಪ್ರವೃತ್ತಿಯ ಕೊರತೆಗೆ ಇದೊಂದು ನಿದರ್ಶನ!

ಸರ್ಕಾರವೇ ಅಗತ್ಯವಿದ್ದ ಎಲ್ಲಾ ಬಂಡವಾಳವನ್ನೂ ಮೂಲಭೂತ ಉದ್ದಿಮೆಗಳಲ್ಲಿ ಹೂಡಲಿ ಎಂಬ ಮಾತಿದೆ. ಯೋಜನಾಬದ್ಧ ಆರ್ಥಿಕ ನೀತಿಯಿದ್ದಾಗ ಇದು ನಮ್ಮ ಲಕ್ಷ್ಯವಾಗಿತ್ತು. ಈಗಲೂ ಯೋಜನಾ ಆಯೋಗ ಮತ್ತು ಯೋಜನೆ ಇದ್ದರೂ, ಅದರ ನೀತಿ ಉದಾರವಾದ ಖಾಸಗೀಕರಣ ತತ್ವದ, ವಿಶ್ವಬ್ಯಾಂಕ್, ವಿಶ್ವ ಹಣಕಾಸು ನಿರ್ದೇಶನದ ಒಟ್ಟಾರೆ ಜಾಗತೀಕರಣವೆನಿಸಿಕೊಳ್ಳುವ ತತ್ವಕ್ಕೆ ಪರವಾಗಿರುವುದರಿಂದ ಇದು ಸಾಧ್ಯವಾಗುತ್ತಿಲ್ಲ. ಈ ತತ್ವಗಳ ಪ್ರಕಾರ ಸರ್ಕಾರ ಮೊದಲಿಗೆ ಆರ್ಥಿಕ ವ್ಯವಹಾರ ನಡೆಸಲೇಕೂಡದು. ಅದು ತೆರಿಗೆ ಸುಂಕಗಳ ಮೂಲಕ ಅಗತ್ಯಕ್ಕೆ ಮೀರಿ, ಅಂದರೆ ಆರ್ಥಿಕ ಉದ್ದಿಮೆಗಳಿಗಾಗಿ, ಹಣ ಸಂಗ್ರಹಿಸುವುದು ಸಲ್ಲದು. ರಾಷ್ಟ್ರೀಯ ಆದಾಯದ ಶೇಕಡ ಇಷ್ಟು ತೆರಿಗೆ ಎಂಬ ಮಾನಕ ಒಂದಿದೆ. ಈ ಪ್ರಮಾಣ ೧೯೯೧ರಿಂದೀಚೆಗೆ ಅಂದರೆ ಉದಾರವಾದ, ಖಾಸಗೀಕರಣ ತತ್ವ ಬಂದಮೇಲೆ ಕಡಿಮೆಯಾಗುತ್ತಾ, ಶೇಕಡ ೯ರಷ್ಟಕ್ಕೆ ನಿಂತಿದೆ. ಇದು ಮುಂದುವರಿದ ರಾಷ್ಟ್ರಗಳ ಶೇಕಡ ೧೫ಕ್ಕೂ ಮಿಕ್ಕು, ಏಷ್ಯದ ಪ್ರಬುದ್ಧ ಅರ್ಥವ್ಯವಸ್ಥೆಯ ರಾಷ್ಟ್ರಗಳಲ್ಲಿ ೧೨ಕ್ಕಿಂತ ಹೆಚ್ಚಿದೆ. ಹೀಗೆ ಕಡಿಮೆ ತೆರಿಗೆ ವಸೂಲು ಮಾಡುತ್ತಾ ಸರ್ಕಾರದ ಬೊಕ್ಕಸದಲ್ಲಿ ಹಣ ಕಡಿಮೆಯಾಗುತ್ತಾ ಬಂದಿದೆ. ಅದೇ ಕಾಲದಲ್ಲಿ ಖಾಸಗಿ ಲಾಬಿಗಳು ವಿಪರೀತ ಹೆಚ್ಚುತ್ತಾ ಬಂದಿವೆ. ಸರ್ಕಾರ ಸಂಬಳಕ್ಕೆ, ಸಾರ್ವಜನಿಕ ಸಾಲಕ್ಕೆ, ಅದರ ಮೇಲಿನ ಬಡ್ಡಿಗೆ ತಮ್ಮ ಆದಾಯವನ್ನೆಲ್ಲಾ ವ್ಯರ್ಥ ಮಾಡುತ್ತದೆ ಎಂದು ಆಪಾದಿಸುತ್ತಾರೆ. ವಾಸ್ತವವೇನು? ಸರ್ಕಾರಿ ನೌಕರಿ ೧೯೮೫ರಿಂದೀಚೆಗೆ ಅಲಭ್ಯವಾಗಿದ್ದು ಸರ್ಕಾರದಲ್ಲಿ ಈಗ ಬಹುತೇಕ ಹೊಸಪೀಳಿಗೆಯ ಕಾರ್ಯಕರ್ತರೇ ಇಲ್ಲ. ಸರ್ಕಾರದ ಸಾಲದ ಹೊರೆ ಏನಿದ್ದರೂ ಯೋಜನೆಗಾಗಿ ಮಾಡಿದ್ದು. ಅದೇ ಕಾಲದಲ್ಲಿ ಖಾಸಗಿ ಕ್ಷೇತ್ರ ಇಂದು ಎಂದಿಗಿಂತ ಶ್ರೀಮಂತವಾಗಿದ್ದು, ಅತ್ಯಂತ ಕಡಿಮೆ ತೆರಿಗೆ ನೀಡುತ್ತಿದೆ. ತೆಗೆದುಕೊಂಡ ಸಾಲ ಹಿಂದಿರುಗಿಸದ್ದೇ ಲಕ್ಷಾಂತರ ಕೋಟಿ ರೂಪಾಯಿಗಳು, ತೆರಿಗೆ ಬಾಕಿಯೇ ಹತ್ತಾರು ಸಹಸ್ರ ಕೋಟಿಗಳು. ಅವರಿಗೆ ರಾಜಕೀಯ ಶಕ್ತಿ ಸಂಪೂರ್ಣವಾಗಿ ಇದ್ದಿದ್ದರೆ ಸರ್ಕಾರದ ಆಡಳಿತ ಯಂತ್ರವನ್ನೇ ಅರ್ಥವಾಗಿಸಿಬಿಡುವಂತೆ ಮಾತನಾಡುತ್ತಾರೆ. ವಾಸ್ತವವೆಂದರೆ ಅತ್ಯಂತ ಬಂಡವಳಿಗ ರಾಷ್ಟ್ರಗಳಲ್ಲಿ ಸರ್ಕಾರದ ಯಂತ್ರ ಬೆಳೆಯುತ್ತಲೇ ಇದೆ, ಅದರ ಅನಿವಾರ್ಯತೆ ಪ್ರಶ್ನಾತೀತವಾಗಿದೆ. ಅದು ಸಮರ್ಥವಾಗಿ ನಡೆಯಬೇಕು ಎಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಮತ್ತೊಂದು ಕೆಟ್ಟ ಬೆಳವಣಿಗೆ ಎಂದರೆ ಮಿಲಿಟರಿ, ಪೋಲೀಸ್ ವ್ಯವಸ್ಥೆಯ ನಿರಂತರ ವಿಸ್ತಾರ. ಪ್ರಜಾಪ್ರಭುತ್ವಕ್ಕೆ ಧಕ್ಕೆ ಉಂಟುಮಾಡುವ ಪ್ರಭುತ್ವದ ಹಿಂಸಕ ಶಕ್ತಿಯ ವಿಸ್ತಾರವು ಖಾಸಗಿ ಉದ್ಯಮಗಳಿಗೆ ಅಪಾರ ಲಾಭ ತರುವ, ಸಾರ್ವಜನಿಕ ಪಾರದರ್ಶಕತೆಗೆ ಸಿಗದ ಒಂದು ವಿಷಯವೇ ಆಗಿದೆ. ಸರ್ಕಾರ ಯಂತ್ರದ ಅಗತ್ಯ-ಅನಗತ್ಯವನ್ನು ವರ್ಣಿಸುವುದು ಒಂದು ರಾಜಕೀಯ ಜಾಣ್ಮೆಯೇ ವಿನಾ ಆರ್ಥಿಕ ತಜ್ಞರ ಅಭಿಪ್ರಾಯವಲ್ಲ.

ವಿದೇಶಿ ವಿನಿಮಯ ಸಂಗ್ರಹ ಸರ್ಕಾರದ್ದಲ್ಲ, ಸ್ವಾಯತ್ತ ಸಂಸ್ಥೆಯಾದ ರಿಸರ್ವ್ ಬ್ಯಾಂಕಿನದು. ಅದಕ್ಕೆ ಅನೇಕ ಜವಾಬ್ದಾರಿಗಳಿವೆ; ಉದಾಹರಣೆಗೆ, ಡಾಲರ್-ರೂಪಾಯಿ ನಡುವಿನ ಬೆಲೆಯ ಸಮೀಕರಣವನ್ನು ನಿರ್ವಹಿಸುವುದು. ಒಂದು ಡಾಲರಿಗೆ ಎಷ್ಟು ರೂಪಾಯಿ ಎನ್ನುವ ವಿಷಯ ಇದು. ಸಾಮಾನ್ಯ ತಿಳುವಳಿಕೆಯೆಂದರೆ ಕಡಿಮೆ ರೂಪಾಯಿ ಕೊಟ್ಟು ಒಂದು ಡಾಲರು ಪಡೆಯು ವಂತಾದಷ್ಟೂ ಒಳ್ಳೆಯದು ಎನ್ನುವುದು. ಡಾಲರು ಎಂಬುದು ಅದೇನೋ ದೇವರೇ ಎಂಬಂತೆ ಪೂಜನೀಯ ವಸ್ತು! ವ್ಯವಹಾರದಲ್ಲಿ ಹಾಗಲ್ಲ. ಪರದೇಶದವರು ಡಾಲರು ಕೊಟ್ಟು ನಮ್ಮ ದೇಶದ ಸರಕನ್ನು ಕೊಳ್ಳಬೇಕೆಂದರೆ, ನಮ್ಮ ಸರಕುಗಳು ರೂಪಾಯಿ ಬೆಲೆಯಲ್ಲಿ ಸುಲಭ ದರದ್ದು ಎನಿಸಬೇಕಾದರೆ, ಡಾಲರಿಗೆ ಹೆಚ್ಚು ರೂಪಾಯಿ ಬಂದಷ್ಟೂ ಅವರಿಗೆ ಸಂತೋಷ. ನಮಗೂ ಇದು ಸಂತೋಷವಾಗಬೇಕಾದ ವಿಷಯವೇ. ಆಗ ನಮ್ಮ ರಾಷ್ಟ್ರದೊಳಗಿನ ವಸ್ತುಗಳ ಉತ್ಪಾದನೆ ಹೆಚ್ಚಿ, ಹೆಚ್ಚು ರಫ್ತಾಗುತ್ತದೆ. ನಾಡಿನೊಳಗಿನ ಸಂಪತ್ತು, ಉದ್ಯೋಗ ಇತ್ಯಾದಿ ಹೆಚ್ಚಾಗುತ್ತದೆ. ಆದರೆ ನಮ್ಮ ಬಂಡವಳಿಗರಿಗೆ ನಿವ್ವಳ ಲಾಭ ದೊರೆಯುವ ಮಟ್ಟದವರೆಗೆ ಡಾಲರ್‌ನ ರೂಪಾಯಿ ಬೆಲೆ ಹೆಚ್ಚುತ್ತಾ ಹೋಗಬಹುದು. ಇದು ಈ ಬೆಲೆಯ ನಿರ್ಧಾರಕ್ಕೆ ಒಂದು ಮಿತಿ. ಡಾಲರು-ರೂಪಾಯಿ ಬೆಲೆ ಏರುತ್ತಾ ಹೋಗುತ್ತಿದ್ದರೆ ಪರದೇಶದವರು ನಮ್ಮ ವಸ್ತುಗಳನ್ನು ಕೊಳ್ಳುವುದು ಕಡಿಮೆಯಾಗುತ್ತದೆ. ಅದು ಒಂದು ಮಿತಿ. ರಫ್ತು ಮತ್ತು ಆಮದುಗಳ ನಡುವೆ ಸಮೀಕರಣವಿಲ್ಲದಿದ್ದರೆ, ಡಾಲರು-ರೂಪಾಯಿ ಅಂತರ ಬೆಲೆ ಸಮತೋಲನ ತಪ್ಪುತ್ತದೆ. ಹಣದುಬ್ಬರಕ್ಕೂ ಕಾರಣ ವಾಗುತ್ತದೆ. ವಿಪರೀತ ಡಾಲರಿನ ಶೇಖರಣೆ ಅಥವಾ ಅದು ಸಂಪೂರ್ಣ ಖಾಲಿಯಾಗುವುದು ಎರಡೂ ನಮ್ಮ ಆರ್ಥಿಕತೆಯ ಮೇಲೆ ದುಷ್ಪರಿಣಾಮ ಉಂಟು ಮಾಡುತ್ತದೆ. ರೂಪಾಯಿಯ ವಿದೇಶಿ ವಿನಿಮಯದಲ್ಲಿ ಅಪಮೌಲ್ಯ-ಅತಿಮೌಲ್ಯಗಳ ಅತಿರೇಕ ಅರ್ಥವ್ಯವಸ್ಥೆಗೆ ಮಾರಕ. ಈ ಸಮೀಕರಣವೇ ರೂಪಾಯಿಯ ಮೌಲ್ಯ ಅಪಮೌಲ್ಯದ ವಿಷಯ. ರಿಸರ್ವ್ ಬ್ಯಾಂಕ್ ಇದನ್ನು ರಾಷ್ಟ್ರದ ಹಿತದೃಷ್ಟಿಯಿಂದ ನಿರ್ವಹಿಸುತ್ತಾ, ಆ ಬಗ್ಗೆ ಸರ್ಕಾರಕ್ಕೆ ನೀತಿ ನಿರೂಪಣೆಯ ಸೂತ್ರ ನೀಡುತ್ತಿರುತ್ತದೆ. ನಮ್ಮ ಆರ್ಥಿಕತೆ ಅತ್ಯಂತ ವಿಸ್ತಾರವಾಗಿ, ವಿದೇಶಿ ಸರಕುಗಳ ಪ್ರವೇಶದ ಬಗ್ಗೆ ಹೆದರಿಕೆಯೇ ಇಲ್ಲದಾಗ, ರೂಪಾಯಿ-ಡಾಲರ್ ಬೆಲೆಯನ್ನು ಮಾರುಕಟ್ಟೆಯ ಬೇಡಿಕೆ-ಪೂರೈಕೆಗಳು ಯಾವ ಅಡೆತಡೆಯೂ ಇಲ್ಲದೆ ನಿರ್ಧರಿಸುತ್ತವೆ. ನಮ್ಮಮಟ್ಟಿಗೆ ಇಂದು ಇದು ಕೇವಲ ಸೈದ್ಧಾಂತಿಕ ವಿಷಯವಷ್ಟೇ. ಅಮೆರಿಕ ಈಗ ಈ ಮುಕ್ತ ವಿದೇಶಿ ವಿನಿಮಯವನ್ನು ಪ್ರತಿಪಾದಿಸುವ ಮಹಾರಾಷ್ಟ್ರ ವಾಗಿದ್ದು, ಅದು ಈಗ ವಿಪರೀತ ಹಣದುಬ್ಬರ, ವಿಪರೀತ ಸಾಲದ ಹೊರೆ ಮುಂತಾದುವನ್ನು ಅನುಭವಿಸುತ್ತಿದೆ. ಬಂಡವಾಳ ವ್ಯವಸ್ಥೆಯಲ್ಲಿ ಈ ಕಾಯಿಲೆ ನಿರಂತರವಾದುದು. ಆಗ್ನೇಯ ರಾಷ್ಟ್ರಗಳು ಮುಕ್ತ ವಿದೇಶಿ ವಿನಿಮಯ ನೀತಿಯನ್ನು ಅಳವಡಿಸಿಕೊಂಡು ಹತ್ತು ವರ್ಷಗಳ ಕೆಳಗೆ ಮಾರುಕಟ್ಟೆಯ ಕಲ್ಲೋಲಕ್ಕೆ ಒಳಗಾಗಿ ತತ್ತರಿಸಿದುವು. ಅದರ ಪರಿಣಾಮದಿಂದ ಅವು ಇನ್ನೂ ಚೇತರಿಸಿಕೊಳ್ಳುತ್ತಿವೆ.

ರಿಸರ್ವ್ ಬ್ಯಾಂಕ್‌ನಲ್ಲಿ ಇರುವ ವಿದೇಶಿ ವಿನಿಮಯ ನಮ್ಮದಂತೂ ಅಲ್ಲ. ಅದು ಯಾರು ಯಾರಿಗೋ ಸೇರಿದ್ದು. ರಫ್ತು ಮಾಡಿ ಸಂಪಾದಿಸಿದ್ದು. ಅದಕ್ಕೆ ತಕ್ಕ

ರೂಪಾಯಿ ಮೌಲ್ಯವನ್ನು ವ್ಯಾಪಾರಿ ಪಡೆದಾಗಿದೆ. ಅದು ಅವನದಲ್ಲ, ಸರ್ಕಾರದ್ದೂ ಸಾಮಾನ್ಯವಾಗಿ ಅಲ್ಲ. ಆಮದು ಮಾಡಿಕೊಂಡವರ ಪರವಾಗಿ ವಿದೇಶಿ ವಿನಿಮಯವನ್ನು ಈ ಸಂಗ್ರಹದಿಂದಲೇ ರಿಸರ್ವ್ ಬ್ಯಾಂಕು ಪರದೇಶದ ವ್ಯಾಪಾರಿಗಳಿಗೆ ನೀಡುವುದು. ನಮ್ಮ ರಫ್ತು ಆಮದಿಗಿಂತ ಕಡಿಮೆಯಿದ್ದು, ಯಾವಾಗಲೂ ನಮಗೆ ಡಾಲರಿನ ಕೊರತೆ ಇದೆ. ಈ ಕೊರತೆಯನ್ನು ತುಂಬಿಕೊಳ್ಳಲು ರಿಸರ್ವ್ ಬ್ಯಾಂಕ್ ಡಾಲರನ್ನು ಮುಕ್ತ ಮಾರುಕಟ್ಟೆಯಿಂದ ರೂಪಾಯಿ ಕೊಟ್ಟು ಕೊಳ್ಳುತ್ತದೆ ಹಾಗೂ ವಿದೇಶಿ ಜನ ಅನೇಕ ಕಾರಣಗಳಿಗಾಗಿ (ಉದಾಹರಣೆಗೆ, ನಮ್ಮ ದೇಶದಲ್ಲಿ ಬಡ್ಡಿಗಾಗಿ) ಡಾಲರಿನ ನಿಕ್ಷೇಪ ಇಡುತ್ತಾರೆ. ಈಗಲೂ ನಮ್ಮ ಬಡ್ಡಿಯ ದರ ಅಮೆರಿಕದ ದರಕ್ಕಿಂತ ಹೆಚ್ಚಿನದು. ಜಪಾನಿನಲ್ಲಿ ಇದು ಶೂನ್ಯ. ನಮ್ಮ ಅನಿವಾಸಿ ಭಾರತೀಯರು ನಿಕ್ಷೇಪವೆಂದು ಹಾಗೂ ತಮ್ಮ ಬಂಧುಗಳಿಗೆಂದು ಡಾಲರು ಕಳುಹಿಸುತ್ತಾರೆ. ನಮ್ಮ ಷೇರುಪೇಟೆಯಲ್ಲಿ ಲಾಭ ಸಂಪಾದಿಸಲು ವಿದೇಶಿ ದಳ್ಳಾಳಿಗಳು ಡಾಲರ್ ತರುತ್ತಾರೆ, ತಮ್ಮ ಲಾಭ, ಬಡ್ಡಿ, ತೆಗೆದುಕೊಂಡು ಹೋಗುತ್ತಾರೆ. ಹೀಗೆ ಹಲವಾರು ಕಾರಣಗಳಿಂದ ಡಾಲರ್ ಶೇಖರಣೆಯಾಗಿ ಈಗ ಸದ್ಯಕ್ಕೆ ನಮ್ಮ ರಿಸರ್ವ್ ಬ್ಯಾಂಕ್ ಬಳಿ ವಿಪರೀತವೆನಿಸುವಷ್ಟು ಡಾಲರ್ ಸಂಗ್ರಹವಾಗಿದೆ. ಅಂದರೆ ಇದನ್ನು ತಮ್ಮದೇ ಬೊಕ್ಕಸದಿಂದ ಎಂಬಂತೆ ದೇಶದ ಆಂತರಿಕ ಬಳಕೆಗೆ ತೆಗೆದುಕೊಡಲಾಗುವುದಿಲ್ಲ. ಡಾಲರಿಗೆ ತಕ್ಕ ರೂಪಾಯಿ ಕೊಟ್ಟರೆ ಇಂದು ಡಾಲರ್ ಸಿಗುತ್ತದೆ ಎಂದಷ್ಟೆ ಅರ್ಥ.

ಡಾಲರ್-ರೂಪಾಯಿ ಹಾಗೆಯೇ ಇನ್ನಿತರ ವಿದೇಶಿ ನಾಣ್ಯಗಳ ಪರಸ್ಪರ ಬೆಲೆಯೂ ಸರಕುಗಳ ಮಾರುಕಟ್ಟೆಯಂತೆಯೇ ಬೇಡಿಕೆ-ಪೂರೈಕೆಗಳ ಪ್ರಮಾಣದ ಮೇಲೆ ನಿರ್ಧಾರವಾಗುವುದು ಬಂಡವಾಳಶಾಹಿ ವ್ಯವಸ್ಥೆಯ ಮತ್ತೊಂದು ವಿಶಿಷ್ಟತೆ. ಹಾಗಾಗಿ, ಕೇಳುವಷ್ಟು ಡಾಲರು ಒಂದೇ ದರದಲ್ಲಿ ಸಿಗುವುದಿಲ್ಲ. ಈ ದರದ ಏರುಪೇರು ವಿಷಮಿಸದಂತೆ ರಕ್ಷಿಸುವ ಹೊಣೆಗಾರಿಕೆ ರಿಸರ್ವ್ ಬ್ಯಾಂಕಿನದು. ಇಂದು ಸಮಾಧಾನಕರ ವಿಷಯವೆಂದರೆ ಉದ್ಯಮಕ್ಕೆ ಅಗತ್ಯವಿದ್ದರೆ ವಿದೇಶಿ ವಿನಿಮಯದ ಕೊರತೆಯಿಲ್ಲ; ಸಾಹಸಿ ಉದ್ಯಮಿಗಳ ಕೊರತೆಯಷ್ಟೆ!

ವಿದೇಶಿ ಬಂಡವಾಳವನ್ನು ಮೂಲಭೂತ ಸೌಕರ್ಯಗಳ ಉದ್ಯಮಕ್ಕೆ ಮುಕ್ತವಾಗಿ ಆಹ್ವಾನಿಸುವುದು ಬೇಕೆ ಬೇಡವೆ ಎನ್ನುವುದು ಸರ್ಕಾರದ ನೀತಿಗೆ ಸಂಬಂಧಪಟ್ಟ ವಿಷಯ. ಚೀನದೊಳಗೆ ಈ ವರ್ಷ ೬೦ ಬಿಲಿಯನ್ ಡಾಲರ್ ಬಂಡವಾಳ ಬಂದರೆ, ನಮಗೆ ೯ ಬಿಲಿಯನ್ ಮಾತ್ರ. ಬಹುಶಃ ಈಗಷ್ಟೆ ನಮ್ಮ ದೇಶದಲ್ಲೂ ವಿದೇಶೀ ಬಂಡವಾಳದ ಹೊಳೆ ಹರಿದುಬರಲು ಬೇಕಾದ ಆಂತರಿಕ ಅನುಕೂಲಕರ ಪರಿಸ್ಥಿತಿ ಆರ್ಥಿಕವಾಗಿ ಉಂಟಾಗಿರಬಹುದು. ಈ ಮಾರ್ಗದ ಸೈದ್ಧಾಂತಿಕ ಸರಿ-ತಪ್ಪುಗಳ ವಿಷಯದ ಚರ್ಚೆ ಬೇರೆ. ಬಂಡವಾಳ ಪದ್ಧತಿ ವಿಕಾಸ ಮಾರ್ಗದಲ್ಲಿ ಆಪತ್ತುಗಳು ಏನೇ ಇರಲಿ, ಇಂದು ನಮ್ಮ ದೇಶ ಈ ವಿಕಾಸದ ಎಲ್ಲ ಸಾಧ್ಯತೆಗಳಿಗೂ ತೆರೆದುಕೊಂಡಿದೆ ಎನ್ನುವುದನ್ನು ಗಮನಿಸಬಹುದು.

೧೯೯೧ರ ಆರ್ಥಿಕ ಸುಧಾರಣೆಯ ನಂತರ ಕೆಲವೇ ವರ್ಷಗಳಲ್ಲಿ ನಾವು ಅಡವಿಟ್ಟ ಚಿನ್ನವನ್ನು ಬಿಡಿಸಿಕೊಂಡು ಬರಲು ಸಾಧ್ಯವಾಯಿತು. ನಮ್ಮ ವಿದೇಶಿ ಸಾಲವನ್ನು ಈಗ ಒಂದಿಷ್ಟು ತೀರಿಸುತ್ತಿದ್ದೇವೆ. ಹೊಸ ಸಾಲವನ್ನು ಅಂದರೆ ಸರ್ಕಾರಿ ಸಾಲವನ್ನು ಮಾಡುತ್ತಿಲ್ಲ. (ಕೆಲವು ಸಣ್ಣ ಸಣ್ಣ ವಿನಾಯಿತಿಗಳು ಎಂದೂ ಇರುತ್ತವೆ). ಆದರೆ ಸರ್ಕಾರದ ಗ್ಯಾರಂಟಿ ನೀಡಿ, ಖಾಸಗಿ ಕಂಪನಿಗಳು, ಬ್ಯಾಂಕುಗಳು, ವಿದೇಶಿ ಹಣಕಾಸನ್ನು ಮಾರುಕಟ್ಟೆಯಲ್ಲಿ ಸಾಲ ತೆಗೆಯುತ್ತಿವೆ. ಇವು ಉದ್ದಿಮೆಯ ಸಾಲಗಳು. ವ್ಯವಹಾರ ಸರಿಯಾಗಿ ನಡೆಸಿ, ಲಾಭ ಸಂಪಾದಿಸಿ, ಸಾಲ ತೀರಿಸುವ ಭರವಸೆಯಂಥವು. ಅವರು ವಿಫಲರಾದರೆ ಅದು ವಿದೇಶಿ ವಿನಿಮಯ ರೂಪದ ಸರ್ಕಾರಿ ಸಾಲದ ಹೊಣೆಗಾರಿಕೆಯೇ ಆಗುತ್ತದೆ. ವಿದೇಶಿ ಬಂಡವಳಿಗರು ನಮ್ಮ ಖಾಸಗಿ ಕಂಪನಿಗಳಿಗೆ ಸಾಲ ನೀಡುತ್ತಾರೆ ಎಂಬುದು, ನಮ್ಮ ಆರ್ಥಿಕತೆಯ ಬಗ್ಗೆ, ನಮ್ಮ ಸರ್ಕಾರದ ಬಗ್ಗೆ, ಅವರಿಗೆ ಇರುವ ನಂಬಿಕೆ ವಿಶ್ವಾಸದ ಸೂಚಕವಾಗಿದೆ. ಹೀಗೆ ಸಾಲವೆಂಬುದು ಸಾರ್ವಜನಿಕ ಸರ್ಕಾರಿ ಸಾಲ ಕ್ಷೇತ್ರದಲ್ಲಿ ಕಡಿಮೆಯಾಗುತ್ತಾ ಉದ್ಯಮದಲ್ಲಿ ಬಳಸುವ ಬಂಡವಾಳ ಸ್ವರೂಪದ ಖಾಸಗಿ ಸಾಲವಾಗುವುದು ಅಪೇಕ್ಷಣೀಯ ಎನ್ನುತ್ತದೆ ಬಂಡವಾಳಶಾಹಿ.

ಇನ್ನು ಹಣದುಬ್ಬರದ ವಿಷಯ. ನನ್ನ ಕೈಯಲ್ಲಿ ಇಲ್ಲದ ಹಣವನ್ನು ಖರ್ಚು ಮಾಡುವುದೆಂದರೆ ಅದು ಸಾಲವಾಗುತ್ತದೆ. ಆರ್ಥಿಕ ವ್ಯವಸ್ಥೆಯ ಒಟ್ಟಾರೆ ಉತ್ಪಾದನೆಯ ಮೌಲ್ಯಕ್ಕೆ ಮೀರಿದ ಹಣದ ಬಿಡುಗಡೆ ಹಣದುಬ್ಬರವಾಗುತ್ತದೆ. ಬಿಡುಗಡೆಯಾದ ಆ ಹೆಚ್ಚುವರಿ ಹಣ ಉತ್ಪಾದನೆಯಾಗುವ ಬಂಡವಾಳವಾಗುವುದಾದರೆ ಅದರಿಂದಾಗುವ ಹಣದುಬ್ಬರ ಸ್ವೀಕಾರಾರ್ಹ, ಅದು ಸ್ವಲ್ಪ ಕಾಲದ್ದು, ನಿಭಾಯಿಸಬಹುದಾದ್ದು ಎಂದು ಒಂದು ವಾದ. ಕೇವಲ ಲೆಖ್ಖ ಪರಿಶೋಧಕರನ್ನೇ ಕೇಳಿದರೆ ಅದು ದುಂದುಗಾರಿಕೆ, ಸಲ್ಲದು, ಅದರಿಂದ ಬೆಲೆ ಏರುತ್ತದೆ ಎಂದು ವಾದಿಸುತ್ತಾರೆ. ವಿದೇಶಿ ವಿನಿಮಯದ ಆಧಾರದ ಮೇಲೆ ರಿಸರ್ವ್ ಬ್ಯಾಂಕ್ ಒಂದಿಷ್ಟು ನೋಟ್ ಪ್ರಿಂಟ್ ಮಾಡಿ, ಸರ್ಕಾರಕ್ಕಾಗಲಿ ಉದ್ಯಮಿಗಳಿಗಾಗಲಿ ಕೊಟ್ಟರೆಂದರೆ ಅದು ಅಂತಹ ಹೆಚ್ಚುವರಿ ಹಣ. ಹಣದುಬ್ಬರವಾಗಿ ಬೆಲೆ ಏರಲು ಅದು ಕಾರಣವಾಗಬಹುದು. ಅದು ಬಂಡವಾಳವಾದರೆ, ಬೆಲೆ ಏರಿದರೂ ಏರಲಿ ಬಿಡಿ ಎನ್ನಬಹುದು. ಹಾಗಿದ್ದರೂ ಅದಕ್ಕೂ ಒಂದು ಕನಿಷ್ಠಮಿತಿ ಇರುತ್ತದೆಯೇ ವಿನಾ ವಿಪರೀತ ಮಾಡಲಾಗುವುದಿಲ್ಲ. ಚಿದಂಬರಂರವರು ಮೂಲಭೂತ ಉದ್ದಿಮೆಗಳಿಗಾಗಿ ರಚಿಸುವ ವಿಶೇಷ ನಿಧಿಯ ಸಂಸ್ಥೆ ಇಂಥದ್ದಲ್ಲ. ಅವರು ವಿದೇಶಿ ವಿನಿಮಯದ ಸಾಲ ಪಡೆಯುತ್ತಿಲ್ಲ. ಆಂತರಿಕವಾಗಿಯೇ ಬಹುಕಾಲೀನ ಸಾಲದ ಸ್ವರೂಪದ ನಿಧಿಯನ್ನು ರಚಿಸುತ್ತಾರೆ.

ಮತ್ತೊಂದು ವಿಷಯ: ಬಡ್ಡಿ ಹೆಚ್ಚಿದರೆ ಬಂಡವಾಳ ಹೂಡಿಕೆಯ ಮೇಲೆ ಪರಿಣಾಮವಾಗುತ್ತದೆ. ಹಣದುಬ್ಬರವಾದರೆ ವಾಸ್ತವ ಬಡ್ಡಿಯ ದರ ಕಡಿಮೆಯಾಗುತ್ತದೆ. ಬಡ್ಡಿ ಕಡಿಮೆಯಾದರೆ ಉಳಿತಾಯ ಕಡಿಮೆಯಾಗಿ, ಬಂಡವಾಳ ಹೂಡಿಕೆಗೆ ಲಭ್ಯವಿರುವ ಹಣ ಕಮ್ಮಿಯಾಗುತ್ತದೆ. ಇವೆಲ್ಲವುಗಳ ಪರಿಣಾಮ ವಿದೇಶಿ ಹಣದೊಂದಿಗೆ ನಮ್ಮ ರೂಪಾಯಿಯ ಬೆಲೆಯಲ್ಲಿ ಪತನವಾಗುತ್ತದೆ. ಅದು ನಮ್ಮ ರಫ್ತಿನ ಮೇಲೆ, ಆಮದಿನ ಮೇಲೆ ಪರಿಣಾಮ ಬೀರುತ್ತದೆ. ಇವೆಲ್ಲವುಗಳ ನಡುವೆ ಆದಷ್ಟೂ ಸಮತೋಲನವನ್ನು ಸಾಧಿಸುವುದೇ ಅರ್ಥನೀತಿಯ ಉದ್ದೇಶ. ಇವನ್ನು ಸಮರ್ಥ ನೀತಿಗಳ ಮೂಲಕ, ಯೋಜಿತ ಅರ್ಥವ್ಯವಸ್ಥೆಯ ಮೂಲಕ ಸಾಧಿಸಬೇಕೆ ಅಥವಾ ಮಾರುಕಟ್ಟೆ ತೀರ್ಮಾನಿಸಲಿ ಎಂದು ಬಿಡಬೇಕೆ ಎಂಬುದೇ ಅರ್ಥಸಿದ್ಧಾಂತ ಮತ್ತು ತತ್ಸಂಬಂಧ ರಾಜಕೀಯ ಸಿದ್ಧಾಂತಗಳಲ್ಲಿನ ವಿಘಟನೆಗಳ ಜೀವಾಳ. ಮಾರುಕಟ್ಟೆಯ ಅನಾಯಕ ಪರಿಸ್ಥಿತಿಯ ಏರುಪೇರುಗಳುಳ್ಳ ಬಂಡವಾಳ ಪದ್ಧತಿಯ ಬೆಳವಣಿಗೆಯ ಬೆನ್ನು ಹತ್ತಿರುವ ನಮಗೆ ಕಳೆದ ವರ್ಷಗಳಲ್ಲಿ ತೀರ ಅನುಭವವಾಗಿದೆ. ಇದನ್ನೇ ಯೋಜಿತ ಅರ್ಥವ್ಯವಸ್ಥೆಯ ಸಮರ್ಥಕರು ಬೇರೆ ರೀತಿಯಲ್ಲಿ ಹೇಳುತ್ತಾರೆ: ಬಂಡವಾಳ ಪದ್ಧತಿಯಲ್ಲಿ ಉದ್ಭವವಾಗುವ ಸಮಸ್ಯೆಗಳಿಗೆ ಅವರು ನೀಡುವ ಪರಿಹಾರಗಳು, ಮತ್ತಷ್ಟು ಪ್ರಬಲವಾದ ಹೊಸ ಹೊಸ ಸಮಸ್ಯೆಗಳಿಗೆ ಹಾದಿ ಮಾಡಿಕೊಡುತ್ತವೆಯೇ ವಿನಾ ವಾಸ್ತವದಲ್ಲಿ ಅದೇ ಮಾರ್ಗದ ಆಂತರ್ಯದಲ್ಲೇ ಪರಿಹಾರವಿಲ್ಲ; ರೋಗಗ್ರಸ್ತ ವ್ಯವಸ್ಥೆಯ ಹೊರಗೆ ನಿಂತು ಹುಡುಕಿದರೆ ಪರಿಹಾರ ದೊರೆಯಬಹುದು.

ಆಮದು ಮತ್ತು ರಫ್ತು ವ್ಯವಹಾರಕ್ಕೆ ಹೊರತಾಗಿ ಸಂಗ್ರಹವಾದ ವಿದೇಶಿ ವಿನಿಮಯ ಸಂಗ್ರಹ ನಮ್ಮ ಆಂತರಿಕ ವ್ಯವಹಾರಕ್ಕೆ ದೀರ್ಘಕಾಲ ಬಂಡವಾಳವಾಗಿ ದಕ್ಕುವುದಿಲ್ಲ. ದೇಶದ ಆರ್ಥಿಕ ವ್ಯವಸ್ಥೆ ಹಿಗ್ಗುತ್ತಾ ಹೋದಂತೆ ಈ ಸ್ವಾಗತಾರ್ಹ ಸಂಗ್ರಹ ಹೆಚ್ಚುತ್ತಾ ಹೋಗುತ್ತದೆ. ನಮ್ಮ ದೇಶದ ಆರ್ಥಿಕತೆಯ ಪ್ರಮಾಣ ಮತ್ತು ಸಾಧ್ಯತೆಗಳಿಗೆ ಹೋಲಿಸಿದರೆ, ನಮ್ಮಲ್ಲಿರುವ ಸಂಗ್ರಹ ತೀರ ಕಡಿಮೆ. ನಮ್ಮದು ಇನ್ನೂ ಸಣ್ಣ ಉತ್ಪಾದನಾ ವ್ಯವಸ್ಥೆ ಎನ್ನುವುದನ್ನು ಅದು ತೋರಿಸುತ್ತದೆ.

> ಡಾಲರು-ರೂಪಾಯಿ ಬೆಲೆ ಏರುತ್ತಾ ಹೋಗುತ್ತಿದ್ದರೆ, ಪರದೇಶದವರು ನಮ್ಮ ವಸ್ತುಗಳನ್ನು ಕೊಳ್ಳುವುದು ಕಡಿಮೆಯಾಗುತ್ತದೆ. ಅದು ಒಂದು ಮಿತಿ. ರಫ್ತು ಮತ್ತು ಆಮದುಗಳ ನಡುವೆ ಸಮೀಕರಣವಿಲ್ಲದಿದ್ದರೆ, ಡಾಲರು-ರೂಪಾಯಿ ಅಂತರ ಬೆಲೆ ಸಮತೋಲನ ತಪ್ಪುತ್ತದೆ. ಹಣದುಬ್ಬರಕ್ಕೂ ಕಾರಣವಾಗುತ್ತದೆ. ವಿಪರೀತ ಡಾಲರಿನ ಶೇಖರಣೆ ಅಥವಾ ಅದು ಸಂಪೂರ್ಣ ಖಾಲಿಯಾಗುವುದು ಎರಡೂ ನಮ್ಮ ಆರ್ಥಿಕತೆಯ ಮೇಲೆ ದುಷ್ಪರಿಣಾಮ ಉಂಟುಮಾಡುತ್ತದೆ.

**ಕೆ. ಎಸ್. ಪಾರ್ಥಸಾರಥಿ**
ಸಿ-೧, 'ನಾಗಾರ್ಜುನ ಎನ್‌ಕ್ಲೇವ್', ೭೬/ಎ
೧೪ನೇ ಅಡ್ಡರಸ್ತೆ, ೧ನೇ ಹಂತ, ಜೆ. ಪಿ. ನಗರ
ಬೆಂಗಳೂರು - ೫೬೦ ೦೭೮

# ಕೋಮುವಾದವನ್ನು ಮಟ್ಟಹಾಕುವುದೆಂದರೆ...

**ಕೋ**ಮುವಾದ ಎಂಬುದು ಒಂದು ರೀತಿಯ ವಿಷ. ಇದು ಸಮಾಜವೊಂದಕ್ಕೆ ಅಂಟಿಕೊಂಡರೆ ಆಗಬಹುದಾದ ದುರಂತಗಳೆಂತಹವು ಎಂಬುದಕ್ಕೆ ಇತಿಹಾಸದಲ್ಲಿ ನೂರಾರು ನಿದರ್ಶನಗಳು ದಾಖಲಾಗಿವೆ. ಮಿಥ್ಯೆಗಳ ಆಧಾರದ ಮೇಲೆ ಹುಟ್ಟಿಕೊಳ್ಳುವುದಷ್ಟೇ ಅಲ್ಲ, 'ಮಿಥ್ಯೆ'ಗಳನ್ನೇ ಮುಂದಿಟ್ಟು ಬೆಳೆಯುವುದು ಇದರ ವಿಶೇಷ ಗುಣ. ಅನಕ್ಷರತೆ-ಅಜ್ಞಾನಗಳಿಂದ ಪೀಡಿತವಾಗಿರುವ ಪ್ರದೇಶಗಳು ಇದರ ಪ್ರಯೋಗಾಲಯ. ಸಮಾಜದ ಕೆಳವರ್ಗಗಳು ಪ್ರಗತಿ ಪಥದೆಡೆಗೆ ದಾಪುಗಾಲು ಹಾಕಿಕೊಂಡು ಮುಂದುವರೆಯಲು ತಯಾರಾದಾಗ, ಅದರ ಪ್ರಗತಿಗೆ ತಡೆಯೊಡ್ಡಲು ಆಳುವ ವರ್ಗಗಳು ಬಳಸುವ ಅಸ್ತ್ರವೇ ಕೋಮುವಾದ. ಸಾಮಾಜಿಕ ವಾಸ್ತವಿಕತೆಗಳನ್ನು ತಿರುಚಿ ಸಮಾಜವೊಂದನ್ನು ವಿನಾಶಕಾರಿ ರೀತಿಯ 'ಭಾವೋತ್ಕರ್ಷ'ದತ್ತ ನಡೆಸಿಬಿಡಬಲ್ಲ ವಿಕೃತ ಸಾಧನ ಕೋಮುವಾದ! ಕಳೆದೆರಡು ದಶಕಗಳಲ್ಲಿ ನಮ್ಮ ದೇಶದಲ್ಲಿ ಹಿಂದೂ ಮೂಲಭೂತವಾದವು ಉಂಟುಮಾಡಿರುವ ತಲ್ಲಣಗಳು ಮೇಲಿನ ವ್ಯಾಖ್ಯಾನಕ್ಕೆ ವಿವರಣೆಯಾಗಿವೆ.

೨೦ನೇ ಶತಮಾನದ ಆರಂಭವು, ಬಂಡವಾಳವಾದಕ್ಕೆ ತನ್ನ 'ಅತ್ಯುಚ್ಚ' ಘಟ್ಟವನ್ನು ತಲುಪಲು ಸಾಧ್ಯವಿರುವಂತಹ ವಸ್ತುಸ್ಥಿತಿಗಳನ್ನು ಒದಗಿಸಿದಂತೆಯೇ ಅದರ ನಿಖರ ಜಾಡು ಹಿಡಿದು ಶ್ರಮಜೀವಿವರ್ಗ ನಡೆಸಿದ ಮಹಾನ್ ಹೋರಾಟದ ಫಲವಾಗಿ ೧೯೧೭ರಲ್ಲಿ 'ಸಮಾಜವಾದಿ ಸೋವಿಯತ್ ರಷ್ಯಾ'ದ ಉಗಮಕ್ಕೂ ದಾರಿಯಾಯಿತಷ್ಟೆ. ಈ ಬೆಳವಣಿಗೆಯು ಅದುವರೆಗಿದ್ದ ಜಾಗತಿಕ ಭೂಪಟದ ಬದಲಾವಣೆಗೆ ಕಾರಣವಾಯಿತು. ಭಾರತವೂ ಸೇರಿದಂತೆ ಅಂದು ವಸಾಹತು ದಾಸ್ಯದಲ್ಲಿದ್ದ ರಾಷ್ಟ್ರಗಳ ವಿಮೋಚನೆಗೆ ಬಹಿರಂಗವಾಗಿ ಬೆಂಬಲಿಸಿದ 'ಸಮಾಜವಾದಿ ರಷ್ಯಾ' ಪ್ರತಿಯೊಂದು ಹೆಜ್ಜೆಯಲ್ಲೂ 'ಬಂಡವಾಳವಾದದ ಸಾಮ್ರಾಜ್ಯಶಾಹಿ' ಹುನ್ನಾರಗಳಿಗೆ ಅಡ್ಡಿಯಾಗುತ್ತಾ ಹೊರಟಿತು. ಎರಡನೇ ಜಾಗತಿಕ ಯುದ್ಧದಲ್ಲಿ ಸೋವಿಯತ್ ರಷ್ಯಾವನ್ನು ಮುಗಿಸಲು ಮಿಲಿಟರಿ ಯತ್ನಗಳು ವಿಫಲವಾದಾಗ ಸಾಮ್ರಾಜ್ಯಶಾಹಿಯು ಭೂಮಂಡಲದಿಂದ ಸಮಾಜವಾದವನ್ನಷ್ಟೇ ಅಲ್ಲ, ಅದರ ಪರಿಕಲ್ಪನೆಗಳನ್ನೂ ನಾಶಗೊಳಿಸುವ ಹತಾಶ ಯತ್ನಕ್ಕೆ ಮುಂದಾಗುವಂತಾಯಿತು. ಶೀತಲ ಸಮರದಾದ್ಯಂತ ಸಾಮ್ರಾಜ್ಯಶಾಹಿಯು ತನ್ನ ಈ ಕಾರ್ಯಸಾಧನೆಗಾಗಿ ಬಳಸಿದ ಸಾವಿರಾರು ತಂತ್ರಗಳ ಭಾಗವಾಗಿ ಉಗಮಗೊಂಡದ್ದು ಈ ಆಧುನಿಕ ಕೋಮುವಾದ. ಸಮಾಜದಲ್ಲಿ ಅಸ್ತಿತ್ವದಲ್ಲಿರುವ ''ವರ್ಗ ಪ್ರಜ್ಞೆ''ಯನ್ನು ವ್ಯವಸ್ಥಿತವಾಗಿ ನಾಶಗೊಳಿಸಲು ಸಿದ್ಧಪಡಿಸಿದ ಅಸ್ತ್ರವಾಗಿ ಕಾರ್ಯ ನಿರ್ವಹಿಸುತ್ತಾ ಈವತ್ತಿನ ಜಾಗತಿಕ ದುಃಸ್ಥಿತಿಗೆ ತನ್ನ ವಿಕೃತ ಕೊಡುಗೆಗಳನ್ನೂ ಕೊಟ್ಟಂತಹ ಮಾನವ ಕುಲದ ಶತ್ರು ಅದು. ಆಹಾರಕ್ಕಾಗಿ, ವಸತಿಗಾಗಿ, ಶಿಕ್ಷಣಕ್ಕಾಗಿ, ಆರೋಗ್ಯ-ಉದ್ಯೋಗಗಳಂತಹ ಅಗತ್ಯಗಳಿಗಾಗಿ ಭ್ರಾತೃಭಾವದೊಂದಿಗೆ ಹೋರಾಡಬೇಕಾಗಿರುವ ಜರೂರತ್ತಿರುವ ದುಡಿಯುವ ಜನರನ್ನು ದಿಕ್ಕು ತಪ್ಪಿಸಿ 'ಜಿಹಾದ್' 'ರಾಮ್ ರಾಮ್' ಎನ್ನುತ್ತಾ ಒಬ್ಬರನ್ನೊಬ್ಬರು ತಮ್ಮಷ್ಟಕ್ಕೆ ತಾವೇ ಕೊಚ್ಚಿಕೊಂಡು ಸಾಯುವಂತೆ ಉತ್ತೇಜಿಸುವುದನ್ನು ಬಿಟ್ಟರೆ, ಮತ್ತೆ ಆ ಮೂಲಕ ಜಾಗತಿಕ ಬಂಡವಳಿಗರ ಹಿತ ಕಾಪಾಡಿ ಈವರೆಗೂ 'ಕೋಮುವಾದಿ'ಗಳು ಏನನ್ನು ಸಾಧಿಸಿದ್ದಾರೆ ?

ಈಗ ನಮ್ಮ ದೇಶದ ಹಿಂದುತ್ವವಾದಿಗಳ ಕಡೆ ನೋಡೋಣ. ಬದಲಾದ ಅಂತರರಾಷ್ಟ್ರೀಯ ಬೆಳವಣಿಗೆಗಳಿಗೆ ತಕ್ಕಂತೆ ತಾನೇ ಸೃಷ್ಟಿಸಿದ್ದ ಇಸ್ಲಾಂ ಮೂಲಭೂತವಾದವು, ತನಗೇ ಮುಳುವಾಗಬಹುದಾದ ಅಪಾಯವನ್ನರಿತ ಅಮೆರಿಕಾ ನೇತೃತ್ವದ ಸಾಮ್ರಾಜ್ಯಶಾಹಿ 'ಏಷಿಯಾ'ದಲ್ಲಿ ಅದನ್ನು ಎದುರಿಸುವ ಇನ್ನೊಂದು ಸಾಧನವೆಂಬಂತೆ ಸೃಷ್ಟಿಸಿದ 'ಹಿಂದೂ ಮೂಲಭೂತವಾದ' ೮೦ರ ದಶಕದಲ್ಲಿ ಹೊಸ ಅಜೆಂಡಾದೊಂದಿಗೆ ಚಟುವಟಿಕೆಗಳನ್ನು ಆರಂಭಿಸಿದಾಗ ಹಿಂದೂ ಮೂಲಭೂತವಾದಿಗಳು ಬಾಬರಿ ಮಸೀದಿಯನ್ನು ಕೆಡವುದರೊಂದಿಗೆ ಹೆಚ್ಚು ಹೆಚ್ಚು ಪ್ರಾಬಲ್ಯ ಪಡೆಯುತ್ತಾ ಬೆಳೆದರು. ಬಾಬರಿ ಮಸೀದಿ ಧ್ವಂಸದ ನಂತರ ದೇಶಾದ್ಯಂತ ನಡೆದ ಗಲಭೆಗಳು ಸಾವಿರಾರು ಅಮಾಯಕರನ್ನು ಬಲಿ ತೆಗೆದುಕೊಂಡದ್ದಲ್ಲದೆ ಕೋಟ್ಯಂತರ ರೂಪಾಯಿ ಸಾರ್ವಜನಿಕ ಆಸ್ತಿಯನ್ನು ನಾಶಪಡಿಸಿದವು. ಆದರೆ ಅದರಿಂದ ಲಾಭವಾದದ್ದಾದರೂ ಯಾರಿಗೆ ? ವಿಚಿತ್ರವೆಂದರೆ, ಯಾರು ೧೯೯೨ ಡಿಸೆಂಬರ್ ೬ರಂದು ಅಯೋಧ್ಯೆಯಲ್ಲಿ ಜರುಗಿದ ಘಟನೆಗೆ ನೇತೃತ್ವ ವಹಿಸಿ – ಅಲ್ಲಿ ರಾಮಮಂದಿರ ನಿರ್ಮಿಸುವುದೇ ತಮ್ಮ ಪರಮ ಗುರಿಯೆಂದು ಸಾರಿದ್ದರೋ – ಅವರೆಲ್ಲರೂ ಸತತ ಆರು ವರ್ಷಗಳವರೆಗೆ ಕೇಂದ್ರ ಸರ್ಕಾರದ ನಾಯಕ ಸ್ಥಾನದಲ್ಲಿದ್ದರೂ, ತಮ್ಮದೇ ಆಡಳಿತಾವಧಿಯಲ್ಲೂ ಅಲ್ಲಿ ಮಂದಿರ ನಿರ್ಮಾಣಕ್ಕೆ ಮುಂದಾಗಲಿಲ್ಲವೆನ್ನುವುದು ! ಇದರರ್ಥ ಅವರ ಅಧಿಕಾರಾವಧಿಯಲ್ಲಿ ಮಂದಿರ ನಿರ್ಮಾಣವಾಗಬೇಕಿತ್ತು ಎಂದಲ್ಲ! ಬದಲಿಗೆ ಮಂದಿರ ನಿರ್ಮಾಣ ಕುರಿತು ಅವರೆಷ್ಟೇ ಬಗೆಯಲ್ಲಿ ತಮ್ಮ ಹೇಳಿಕೆಗಳನ್ನು ಹೊರಡಿಸಿದರೂ ಅವರ ಮೂಲ ಆಶಯ ಬಾಬರಿ ಮಸೀದಿಯನ್ನು ಧ್ವಂಸಗೊಳಿಸುವುದನ್ನೇ ಗುರಿಯಾಗಿರಿಸಿಕೊಂಡದ್ದಾಗಿತ್ತು ಎಂದು ತೋರಿಸುವುದಾಗಿದೆ. ಅಂದರೆ, ವಾಸ್ತವವಾಗಿ ಬಾಬರಿ ಮಸೀದಿ ಮತ್ತು ರಾಮಮಂದಿರಗಳು ಬರೀ ಸಂಕೇತವಾಗಿದ್ದು ಜನಜೀವನದ ಮಧ್ಯೆ ಒಡಕನ್ನು ತೀವ್ರಗೊಳಿಸುವುದೇ ಅವರ ಅಸಲು ಗುರಿಯಾಗಿತ್ತು ಎಂಬುದನ್ನು ಸ್ಪಷ್ಟಪಡಿಸಿಕೊಳ್ಳುವುದಾಗಿದೆ. ಹೀಗೆ ಭಾರತದ ರಾಜಕಾರಣವನ್ನು ಕೋಮುವಾದೀಕರಣಕ್ಕೆ ಒಳಪಡಿಸುವ ಸಾಮ್ರಾಜ್ಯಶಾಹಿಯ 'ವಿನ್ಯಾಸ'ವಾಗಿಯೇ ಭಾರತದಲ್ಲಿ ಹಿಂದುತ್ವವಾದವು ಹೊಸ ರಂಗಿನೊಂದಿಗೆ ಮೈದಳೆದಿದೆ, ಅದಕ್ಕಾಗಿ ಇನ್ನೂ ಶ್ರಮಿಸುತ್ತಲೇ ಇದೆ.

**ಅಯ್ಯಪ್ಪ ಹೂಗಾರ್**

೧೯೮೦ರ ದಶಕದಲ್ಲಿ ಭಾರತದಲ್ಲಿ ಹೊಸ ಅಜೆಂಡಾದೊಂದಿಗೆ ಕೋಮುವಾದಿಗಳಿಂದ ಆರಂಭಗೊಂಡ ಪ್ರಚಾರ ಮತ್ತು ಅದರ ಬೆಳವಣಿಗೆಗಳಿಂದಾಗಿ ಇಂದು 'ಕೋಮುವಾದಿ ಸಿದ್ಧಾಂತ'ವೆಂಬುದು ಸಾಮಾನ್ಯ ವ್ಯಕ್ತಿಯ ಸಾಮಾಜಿಕ ಜ್ಞಾನದ ಭಾಗವಾಗಿದೆ. ಅದು ಹರಡಲು ಆರಂಭಿಸಿದ ಸುಳ್ಳುಗಳು ಜನಸಮೂಹಗಳ ಮನಸ್ಸಿನಲ್ಲಿ ವಿಸ್ತೃತವಾಗಿ ಹರಡಿಕೊಂಡಿವೆಯೆಂಬುದನ್ನು ಅಲ್ಲಗಳೆಯಲು ಸಾಧ್ಯವಿದೆಯೇ ?

''ಮುಸ್ಲಿಮರಿಗೆ ಕೊಡುತ್ತಿರುವ ವಿಶೇಷ ಸವಲತ್ತುಗಳೇ ಹಿಂದೂಗಳ ಬಡತನಕ್ಕೆ ಕಾರಣ ; ಭಾರತದಲ್ಲಿನ ಮುಸ್ಲಿಮರು ಭಾರತದಲ್ಲಿದ್ದುಕೊಂಡು ಎಲ್ಲಾ ಸವಲತ್ತುಗಳನ್ನು ಪಡೆದರೂ ಆತ್ಮದಲ್ಲಿ ಮಾತ್ರ ಪಾಕಿಸ್ತಾನವನ್ನೇ ಪ್ರೀತಿಸುತ್ತಾರೆ; ಅವರು ಕುಟುಂಬ ಯೋಜನೆಯನ್ನು ಪಾಲಿಸುವುದಿಲ್ಲವಾದ್ದರಿಂದ ಮುಂದಿನ ದಿನಗಳಲ್ಲಿ ಅವರ ಸಂಖ್ಯೆಯೇ ಜಾಸ್ತಿಯಾಗಿ ಹಿಂದೂಗಳ ಸಂಖ್ಯೆ ಕಮ್ಮಿಯಾಗುತ್ತದೆ; ಆಗ ಅವರು ಹಿಂಸಿಸದೇ ಸುಮ್ಮನಿದ್ದಾರೆಯೇ ? ಅವರಲ್ಲಿರುವ ಒಗ್ಗಟ್ಟು ನಮ್ಮಲ್ಲಿಲ್ಲ. ನಾವು ಒಗ್ಗಟ್ಟು ಸಂಪಾದಿಸಿಕೊಂಡು ಅವರನ್ನು ಮಟ್ಟಹಾಕದ ಹೊರತು ನಮ್ಮ ಸಮಸ್ಯೆಗಳು ಬಗೆಹರಿಯುವುದಿಲ್ಲ.'' ಹೀಗೆ ಸಾಮಾನ್ಯ ವ್ಯಕ್ತಿಯನ್ನು ಮತ್ತೆ ಮತ್ತೆ ತಲುಪುವಂತೆ – ಆತ ಅಂತಹ ಸುಳ್ಳು ಪ್ರಚಾರಗಳನ್ನು ನಂಬುವಂತೆ ಮಾಡಲು ಕೋಮುವಾದವು ತನಗೊಂದು ಸೈದ್ಧಾಂತಿಕ ಘನತೆಯನ್ನೇ ಸಂಪಾದಿಸಿಕೊಂಡು ಬಿಟ್ಟಿದೆ. ಕ್ರಿಶ್ಚಿಯನ್ನರ ಕುರಿತು ಅದು ಹರಡಿದ ಮಿಥ್ಯೆಗಳಿಗಂತೂ ಲೆಕ್ಕವಿಲ್ಲ. 'ಮತಾಂತರ'ದ ಪ್ರಶ್ನೆ ಮುಂದಿಟ್ಟು ಹಸುಗೂಸುಗಳನ್ನು ಒಳಗೊಂಡಂತೆ ಆಸ್ಟ್ರೇಲಿಯಾದ ಪಾದ್ರಿ ಸ್ಟೈನ್ಸ್‌ನನ್ನ ಜೀವಂತವಾಗಿ ಸುಡುವ ಮಟ್ಟಕ್ಕೆ ಭಾರತೀಯನ ಮನಸ್ಸಿನಲ್ಲಿ ವಿಕೃತ ಕ್ರೌರ್ಯವನ್ನು ಸೃಷ್ಟಿಸಿದ ಕುಖ್ಯಾತಿಯು ಈ ಕೋಮುವಾದಿ ಸಿದ್ಧಾಂತಕ್ಕೇ ಸಲ್ಲಬೇಕಲ್ಲವೆ ? ಕೋಮುವಾದ ಸಿದ್ಧಾಂತದ ಹರವು ಹೆಚ್ಚಿದ ಕಡೆಗಳಲ್ಲೆಲ್ಲಾ ನೂರಾರು ಗಲಭೆಗಳು ಜರುಗಿವೆ. ಸಾವಿರಾರು ಜನರ ಮಾನ-ಪ್ರಾಣಗಳ ಹರಣಕ್ಕೆ ದಾರಿ ಮಾಡಿವೆ. ಗೋಧ್ರಾ ಹತ್ಯಾಕಾಂಡದ ಕ್ರೌರ್ಯವು ನಂತರದ ಗುಜರಾತ್ ಗಲಭೆಗಳಿಗೂ ಕಾರಣೀಭೂತವಾದದ್ದು, ಕೋಮುವಾದೀ ಸಿದ್ಧಾಂತವು ಮನುಷ್ಯರ ಮನಸ್ಸಿನೊಳಗೆ ಸೃಷ್ಟಿಸಿದ ಅಮಾನುಷತೆ, ಕ್ರೌರ್ಯ ಮತ್ತು ವಿಕೃತ ಅಟ್ಟಹಾಸಗಳೇ ಅಲ್ಲವೆ ?

ಆದರೆ, ಕೋಮುವಾದದಿಂದ ಆವೃತವಾಗಿರುವ ಮನಸ್ಸುಗಳಿಗೆ ಇದು ಕ್ರೌರ್ಯದಂತೆ ಕಾಣುವುದಿಲ್ಲ. ವಾಜಪೇಯಿಯಂತಹ ಪ್ರಧಾನಿ ಪಟ್ಟವನ್ನು ಅಲಂಕರಿಸಿದ್ದ ರಾಜಕಾರಣಿಗೆ ಬಾಬರಿ ಮಸೀದಿಯ ಧ್ವಂಸದ ಘಟನೆಯು ''ಬಹುಸಂಖ್ಯಾತ ಜನರ ಭಾವನೆಗಳ ಅಭಿವ್ಯಕ್ತಿ''ಯಾಗಿ ಕಂಡಂತೆಯೇ, ತಳಮಟ್ಟದಲ್ಲಿ ಅದು 'ದೇಶಪ್ರೇಮ'ದ ಖದರು ಪಡೆದುಕೊಳ್ಳುವ ಅಪಾಯದ ಸ್ಥಿತಿಯನ್ನು ತಲುಪಿದೆ. ಇದು ''ಕೋಮುವಾದಿ ಸಿದ್ಧಾಂತ''ವು ತನ್ನನ್ನು ಹರಡಿಕೊಳ್ಳುವ ಸ್ವರೂಪ. ಅವರೆದುರು ಬಿಡಿ ಸಂದರ್ಭಗಳಲ್ಲಿ ಬಡ ಮುಸ್ಲಿಂ ಒಬ್ಬನ ಪರ ವಹಿಸಿ

೬೨ನೇ ಪುಟಕ್ಕೆ

---

ಗತಕಾಲದ ಮೇಲುಕೀಳೆಂಬ ಹೊಲಸಿನಿಂದ ಸಮಾಜವನ್ನು ತೊಳೆಯಲು ಆಧುನಿಕ ಕಾಲಘಟ್ಟದಲ್ಲಿ ಸೃಜಿತಗೊಂಡಿರುವ ಉತ್ಪಾದನಾ ವಿಧಾನದ ಚೌಕಟ್ಟಿನೊಳಗೆ, ಜನರೆಲ್ಲರನ್ನು ಗುರುತಿಸಬೇಕಾದ ವೈಜ್ಞಾನಿಕ ವಿಧಾನವಾಗಿ 'ವರ್ಗ ದೃಷ್ಟಿಕೋನ' ಮಾತ್ರವೇ ಸಂಜೀವಿನಿಯಾದ್ದರಿಂದ, ಪ್ರತಿಯೊಬ್ಬರೂ ಇದರ ಬೆಳವಣಿಗೆಗಾಗಿ ಶ್ರಮಿಸಬೇಕಾಗಿದೆ. ಅಂತಿಮ ಅರ್ಥದಲ್ಲಿ ಕೋಮುವಾದವನ್ನು ಮಟ್ಟಹಾಕುವುದೆಂದರೆ ವರ್ಗದೃಷ್ಟಿಕೋನವನ್ನು ಬೆಳೆಸಿಕೊಳ್ಳುವುದು ಮತ್ತು ಬೆಳೆಸುವುದೇ ಆಗಿದೆ.

# 'ಲೋಕಾಯತ'ದಲ್ಲಿ ಸತ್ಯದ ಪರಿಕಲ್ಪನೆ



**ಎಸ್. ಎಸ್. ಹಿರೇಮಠ**

'**ಸ್ಕಾಂ**ದ ಪುರಾಣ'ದ ಮಾಹೇಶ್ವರ ಖಂಡದಲ್ಲಿ (ಕುಮಾರಿಕಾ ಖಂಡ) ಸತ್ಯವ್ರತನೆಂಬ ನಾಸ್ತಿಕನ ಕತೆಯೊಂದಿದೆ. (ಗೋರಖಪುರದ 'ಕಲ್ಯಾಣ' ಪತ್ರಿಕೆಯವರು ೧೯೫೧ರಲ್ಲಿ ಪ್ರಕಟಿಸಿರುವ ಹಿಂದಿ ಗ್ರಂಥವನ್ನು ಗಮನಿಸಿ.)

ಕಾಮರೂಪದಲ್ಲಿ ಬಹೂದಕವೆಂಬ ಕುಂಡ. ಅಲ್ಲಿ ಕಪಿಲ ತಪಸ್ಸು ಮಾಡಿ ಕಪಿಲೇಶ್ವರಲಿಂಗವನ್ನು ಸ್ಥಾಪಿಸಿದನೆಂದು ನಾರದ ಅರ್ಜುನನಿಗೆ ಕತೆ ಹೇಳ ತೊಡಗುತ್ತಾನೆ. ನಂದಭದ್ರನೆಂಬ ವ್ಯಾಪಾರಿ ಈ ಕಪಿಲೇಶ್ವರಲಿಂಗ ಪೂಜಕ. ಈತ ಧರ್ಮ ರಾಜನಂತೆ ಧರ್ಮದಲ್ಲಿ ವಿಶೇಷಜ್ಞನಾಗಿದ್ದ. ವ್ಯಾಪಾರದಲ್ಲಿ ಸ್ವಲ್ಪ ಮಾತ್ರ ಲಾಭ ಪಡೆಯುತ್ತಿದ್ದ. ಹೆಂಡ ಮಾರುತ್ತಿರಲಿಲ್ಲ, ಯಜ್ಞ ಮಾಡುತ್ತಿರಲಿಲ್ಲ, ಸನ್ಯಾಸಿಯಾಗಿರಲಿಲ್ಲ. ಅವನ್ನೆಲ್ಲ ವಿರೋಧಿಸುತ್ತಿದ್ದ. ಕರ್ಮವೇ ಶಿವನ ಆರಾಧನೆಯೆಂದು ತಿಳಿದಿದ್ದ. ಆತನಿಗೆ ಐಶ್ವರ್ಯದ ಮದವಿರಲಿಲ್ಲ (ಈ ವಿವರಗಳನ್ನೆಲ್ಲ ನೋಡಿದರೆ ಈತ ಅವೈದಿಕನಾಗಿದ್ದನೆಂದು ಖಚಿತವಾಗುತ್ತದೆ.)

ಈತನ ಮನೆಯ ಪಕ್ಕದಲ್ಲಿ ಸತ್ಯವ್ರತನೆಂಬ ಶೂದ್ರನಿದ್ದ. ಆತ ನಾಸ್ತಿಕ ಮತ್ತು ದುರಾಚಾರಿ. ಆತ ಯಾವಾಗಲೂ ನಂದಭದ್ರನನ್ನು ಟೀಕಿಸುತ್ತ ಅಪಹಾಸ್ಯ ಮಾಡುತ್ತಿದ್ದ. ನಾಸ್ತಿಕರು ತಾವೂ ಅಧಃಪತನದಲ್ಲಿರುತ್ತಾರೆ, ಇತರರನ್ನೂ ಹಾಗೆಯೇ ಮಾಡಲಿಚ್ಛಿಸುತ್ತಾರೆ. ನಂದಭದ್ರನ ಒಬ್ಬನೇ ಮಗ ತೀರಿಹೋದ. ಆತನ ಪತ್ನಿಯೂ ತೀರಿಹೋದಳು. ಆಗ ಸತ್ಯವ್ರತ ಅವನ ಹತ್ತಿರ ಬಂದು ''ನಿನ್ನಂಥ ಧರ್ಮಾತ್ಮನಿಗೆ ಹೀಗಾಯಿತಲ್ಲ. ಧರ್ಮ, ಕರ್ಮ ಇವೆಲ್ಲ ವ್ಯರ್ಥ. ನಿನ್ನ ಜತೆ ಮಾತಾಡುವ ಆಸೆಯಿತ್ತು. ಆದರೆ ನಿನ್ನಲ್ಲಿ ಆಸಕ್ತಿ ಇಲ್ಲದ್ದರಿಂದ ಮಾತಾಡಲಿಲ್ಲ. ಪ್ರಸ್ತಾವವಿಲ್ಲದಾಗ ಬೃಹಸ್ಪತಿ ಕೂಡ ಏನಾದರೂ ಹೇಳಿದರೆ ಅವನ ಬುದ್ಧಿಯ ಅವಹೇಳನವಾಗುತ್ತದೆ. ಆತ ನೀಚನಂತೆ ಅಪಮಾನಿತವಾಗುತ್ತಾನೆ'' ಎಂದ.

''ನಾನು ಮಾತಿನ ೧೮ ಮತ್ತು ಬುದ್ಧಿಯ ೬ ದೋಷಗಳಿಲ್ಲದ ನಿರ್ದೋಷ ವಾಕ್ಯಗಳನ್ನು ಹೇಳುತ್ತೇನೆ ಕೇಳು. ಸೂಕ್ಷ್ಮತೆ, ಸಂಖ್ಯೆ, ಕ್ರಮ, ನಿರ್ಣಯ, ಪ್ರಯೋಜನ ಎಂಬ ಐದು ಅರ್ಥಗಳಿರುವುದೇ ವಾಕ್ಯ. ಧರ್ಮ, ಅರ್ಥ, ಕಾಮ, ಮೋಕ್ಷಗಳ ಉದ್ದೇಶದಿಂದ ಹೇಳುವುದೇ 'ಪ್ರಯೋಜನ'ವಾಕ್ಯ. ಇದು ವಾಕ್ಯದ ಮೊದಲ ಲಕ್ಷಣ. ಧರ್ಮ, ಅರ್ಥ, ಕಾಮ, ಮೋಕ್ಷಗಳ ಚರ್ಚೆಯ ಉಪಸಂಹಾರದಲ್ಲಿ 'ಇದೇ ಅದು' ಎಂದು ಸಿದ್ಧಾಂತ ಮಾಡುವುದೇ 'ನಿರ್ಣಯ ವಾಕ್ಯ'. ಇದನ್ನು ಮೊದಲು ಹೇಳಿ ನಂತರ ಅದನ್ನು ಹೇಳಬೇಕೆಂದು ವಿಷಯ ಪ್ರತಿಪಾದನಾ ಕ್ರಮದಂತೆ ವಿಭಾಗ ಮಾಡಿ ಹೇಳಿದರೆ 'ಕ್ರಮಯೋಗ', ಗುಣದೋಷಗಳ ವಿಭಾಗಮಾಡಿ ಎರಡಕ್ಕೂ ಪ್ರಮಾಣ ಒದಗಿಸಿದರೆ 'ಸಂಖ್ಯಾ' ವಾಕ್ಯ. ವಾಕ್ಯದ ವಿಭಿನ್ನಾರ್ಥಗಳಲ್ಲಿ ಅಭೇದವನ್ನು ತೋರಿಸುವ ಉದ್ದೇಶವೇ 'ಸೂಕ್ಷ್ಮತೆ'.

''ಮಾತಿನ ೧೮ ದೋಷಗಳು ಇವು – ಅಪೇತಾರ್ಥ, ಅಭಿನ್ನಾರ್ಥ, ಅಪ್ರವೃತ್ತ, ಅಧಿಕ, ಅಶ್ಲಕ್ಷ್ಣ, ಸಂದಿಗ್ಧ, ಪದಾಂತ ಅಕ್ಷರ ಗುರುವಾಗುವುದು, ಪರಾಙ್ಮುಖ ಮುಖ, ಅನೃತ, ಅಸಂಸ್ಕೃತ, ತ್ರಿವರ್ಗ ವಿರುದ್ಧ, ನ್ಯೂನ, ಕಷ್ಟಶಬ್ದ, ಅತಿಶಬ್ದ, ವ್ಯುತ್ಕ್ರಮಭಿವೃತ್, ಸಶೇಷ, ಅಹೇತುಕ ಮತ್ತು ನಿಷ್ಕಾರಣ.

''ಉಚ್ಚರಿಸಿದಾಗ ಅರ್ಥವಾಗದೇ ಇರುವುದು 'ಅಪೇತಾರ್ಥ'. ಸ್ಪಷ್ಟ ಅರ್ಥವಾಗದೇ ಇರುವುದು 'ಅಭಿನ್ನಾರ್ಥ'. ವ್ಯವಹಾರದಲ್ಲಿ ಬರಲಾರದ್ದು 'ಅಪ್ರವೃತ್ತ' ಶಬ್ದ. ಇಲ್ಲದಿದ್ದರೂ ವಾಕ್ಯಾರ್ಥ ಗೊತ್ತುಮಾಡುವುದೇ 'ಅಧಿಕ'. ಅಸ್ಪಷ್ಟವಾದದ್ದು 'ಅಶ್ಲಕ್ಷಣ'. ಅರ್ಥದಲ್ಲಿ ಸಂದಿಗ್ಧತೆ, ಸಂದೇಹವಿರುವುದೇ 'ಸಂದಿಗ್ಧ'. ಪದಾಂತ ಅಕ್ಷರ ಗುರುವಾಗಿ ಉಚ್ಚರಿಸುವುದು ಒಂದು ದೋಷ. ಹೇಳಬೇಕಿರುವ ಅರ್ಥಕ್ಕಿಂತ ಬೇರೆ ಅರ್ಥ ಹೊರಟರೆ ಅದು ಪರಾಙ್ಮುಖ. ಅಸತ್ಯವೇ ಅನೃತ. ವ್ಯಾಕರಣಸಿದ್ಧವಲ್ಲದ್ದು ಅಸಂಸ್ಕೃತ. ಧರ್ಮ ಅರ್ಥ ಕಾಮಗಳಿಗೆ ವಿಪರೀತ ವಿಚಾರ ಹೇಳುವುದು ತ್ರಿವರ್ಗ ವಿರುದ್ಧ. ಅರ್ಥ ತಿಳಿಯಲು ಬೇರೆ ಪದವಿಲ್ಲದಿದ್ದರೆ ನ್ಯೂನ. ಉಚ್ಚಾರಣೆಯಲ್ಲಿ ಕ್ಲೇಶವಿದ್ದರೆ ಕಷ್ಟಶಬ್ದ. ಅತಿಶಯೋಕ್ತಿಯಿರುವ ಪದ ಅತಿಶಬ್ದ. ಕ್ರಮವನ್ನು ಮೀರಿ ಹೇಳುವುದು ವ್ಯುತ್ಕ್ರಮಭಿಹೃತ. ವಾಕ್ಯ ಪೂರ್ಣವಾದರೂ ಅರ್ಥಪೂರ್ಣವಿಲ್ಲದಿರುವುದು ಸಶೇಷ. ಅರ್ಥವನ್ನು ಖಚಿತಪಡಿಸಲು ಉಚಿತ ತರ್ಕ ಇಲ್ಲದಿದ್ದರೆ 'ಅಹೇತುಕ' ದೋಷ. ಹೇಳುವಾಗ ಯೋಗ್ಯ ಕಾರಣ ಕೊಡದಿರುವುದು ನಿಷ್ಕಾರಣ.

''ಬುದ್ಧಿಯ ೬ ದೋಷಗಳು ಇವು – ಕಾಮ, ಕ್ರೋಧ, ಭಯ, ಲೋಭ, ದೈನ್ಯ, ಕುಟಿಲತಾ. ದಯಾ, ಸಮ್ಮಾನ, ಧರ್ಮ ಈ ಗುಣಗಳಿಲ್ಲದ ಯಾವ ಮಾತನ್ನೂ ನಾನು ಆಡುವುದಿಲ್ಲ ವಕ್ತೃ, ಶ್ರೋತೃ ಮತ್ತು ವಾಕ್ಯ ಮೂರು ವಿಕಲವಿಲ್ಲದಂತೆ, ಸಮಾನಾವಸ್ಥೆಯಲ್ಲಿ ಇದ್ದರೆ, ವಕ್ತೃವು ತನ್ನ ಅಭಿಪ್ರಾಯವನ್ನು ಯಥಾವತ್ತಾಗಿ ಪ್ರಕಟ ಮಾಡಬಲ್ಲ. ಮಾತಾಡುವಾಗ ವಕ್ತೃ, ಕೇಳುವವನನ್ನು ಅವಹೇಳನ ಮಾಡಿದರೆ, ಇಲ್ಲವೇ ಕೇಳುವವನೇ ಹೇಳುವವನನ್ನು ನಿರ್ಲಕ್ಷ್ಯ ಮಾಡಿದರೆ ಹೇಳುವ ವಾಕ್ಯ ಬುದ್ಧಿಗೆ ಮುಟ್ಟಲಾರದು. ಸತ್ಯವನ್ನು ಕೈಬಿಟ್ಟು ತನಗೆ ಇಲ್ಲವೇ ಕೇಳುಗನಿಗೆ ಪ್ರಿಯವಾಗುವಂಥ ಮಾತನ್ನು ಹೇಳತೊಡಗಿದರೆ ಅಂಥ ಮಾತಿನಲ್ಲಿ ಸಂದೇಹ ಹುಟ್ಟುತ್ತದೆ. ಅಂಥ ವಾಕ್ಯಗಳು ದೋಷಪೂರ್ಣ. ಹಾಗಾಗಿ ಸತ್ಯವನ್ನು ಮಾತ್ರ ಹೇಳಬೇಕು. ಇಂಥವನೇ ಭೂಮಿಯಲ್ಲಿ ಯೋಗ್ಯ ವಕ್ತೃ.

''ಶಾಸ್ತ್ರಜಾಲದಲ್ಲಿ ಸಿಕ್ಕಿರುವ ಸುಳ್ಳು ವಾದಗಳನ್ನು ಬಿಟ್ಟು ಸತ್ಯ ಹೇಳುವುದೇ ನನ್ನ ವ್ರತ ಹಾಗಾಗಿ ನನಗೆ 'ಸತ್ಯವ್ರತ' ಎನ್ನುತ್ತಾರೆ. ನನ್ನ ಸತ್ಯವನ್ನು ನೀನು ಸ್ವೀಕಾರ ಮಾಡಬೇಕು. ಶಿಲೆಯನ್ನು ಪೂಜಿಸುತ್ತಿರುವ ನಿನಗೆ ಒಳ್ಳೆಯದೇನೂ ಆಗಿಲ್ಲ. ನಿನ್ನ ಪತ್ನಿ ಪುತ್ರರು ಮೃತರಾದರು. ಸುಳ್ಳು, ವಂಚನೆಯ ಕರ್ಮಗಳ ಫಲವೇ ಇಂಥದು. 'ದೇವತೆ'ಗಳೆಲ್ಲಿವೆ? ಎಲ್ಲವೂ ಸುಳ್ಳು. ಇದ್ದರೆ ಕಾಣಬೇಕಿತ್ತಲ್ಲ? ಇವೆಲ್ಲ ಕಪಟ ಬ್ರಾಹ್ಮಣರ ಸುಳ್ಳು ಕಲ್ಪನೆ. ಜನ ಪಿತೃಗಳಿಗೆ ದಾನ ಕೊಡುತ್ತಾರಷ್ಟೇ? ಇದನ್ನು ಕಂಡು ನನಗೆ ನಗೆ ಬರುತ್ತದೆ. ನನ್ನ ದೃಷ್ಟಿಯಲ್ಲಿ ಇದು ಅನ್ನದ ದುರುಪಯೋಗ. ಸತ್ತವ ಏನನ್ನು ಉಂಡಾನು? ಮೂರ್ಖನಾದ ನೀಚ ಬ್ರಾಹ್ಮಣ ಸಂಸಾರ ಮತ್ತು ಸೃಷ್ಟಿಯ ಕುರಿತು ಹೇಳುವ ಮಾತುಗಳಲ್ಲಿ ಯಥಾರ್ಥ ಇದೆಯೇ?

''ಸಂಸಾರದ ಸೃಷ್ಟಿ ಮತ್ತು ಸಂಹಾರಗಳ ಕಲ್ಪನೆಯೇ ಸುಳ್ಳು. ಜಗತ್ತು ಸತ್ಯವಾಗಿದೆ. ಅದು ನಿರಂತರವಾಗಿದೆ. ವಿಶ್ವ ಸ್ವಭಾವತಃ ಅಸ್ತಿತ್ವದಲ್ಲಿದೆ. ಸೂರ್ಯ ಗ್ರಹಗಳು ಸ್ವಭಾವತಃ ತಿರುಗುತ್ತಿವೆ, ಸ್ವಭಾವದಿಂದಲೇ ಗಾಳಿ ಚಲಿಸುತ್ತಿದೆ, ಮೋಡ ಮಳೆ ಸುರಿಸುತ್ತಿವೆ, ನದಿ ಹರಿಯುತ್ತಿವೆ, ಧಾನ್ಯ ಬೆಳೆಯುತ್ತವೆ, ಸಮುದ್ರ ಸ್ಥಿತವಿದೆ, ಪರ್ವತ ಅವಿಚಲವಿವೆ, ಜೀವ ಉತ್ಪತ್ತಿಯಾಗುತ್ತವೆ, ಸಂಪೂರ್ಣ ಜಗತ್ತು ಪ್ರಕಾಶಿತವಿದೆ. ಇದಕ್ಕೆ ಪ್ರತ್ಯಕ್ಷವಾಗಿ ಕಾಣುವ ಸೃಷ್ಟಿಕರ್ತ ಯಾರೂ ಇಲ್ಲ.

''ಇದೆಲ್ಲ ತಿಳಿದೂ ಮೂರ್ಖನು ಮಾತ್ರ ಮೋಹದಲ್ಲಿ ಸಿಲುಕುವನು. ಧೂರ್ತನು ಮಾತ್ರ ಮನುಷ್ಯಜನ್ಮ ಶ್ರೇಷ್ಠ ಎನ್ನುತ್ತಾನೆ. ಮಾನವ ಜನ್ಮವೇ ಹೆಚ್ಚು ಕಷ್ಟಕರ. ಮಾನವನ ಕಷ್ಟ ಅವನ ಶತ್ರುಗಳಿಗೂ ಇರಬಾರದು. ಅವನೆದುರು ಕ್ಷಣಕ್ಷಣಕ್ಕೂ ಸಹಸ್ರಾರು ದುಃಖ ಪ್ರಸಂಗಗಳಿವೆ. ಮಾನವ ಯೋನಿ ಬಂಧಿಗೃಹ. ಸ್ಥಾವರಗಳು ಎಷ್ಟೊಂದು ನಿಶ್ಚಿಂತವಾಗಿವೆ? ಇವೇ ನಿಜವಾಗಿ ಸುಖಿಗಳು. ಮಾನವನನ್ನು ಹೊರತುಪಡಿಸಿ ಇತರೆಲ್ಲ ಜೀವಗಳು ಧನ್ಯವಾಗಿವೆ. ಜೀವ, ಅಜೀವಗಳಿಗೆ ಸ್ವಭಾವವೇ ಪ್ರಧಾನ ಕಾರಣ.

''ಪಾಪ ಪುಣ್ಯಗಳು ಕಲ್ಪನೆಗಳು. ಮಿಥ್ಯಾಧರ್ಮವನ್ನು ಬಿಟ್ಟು ಸುಖವಾಗಿ ಉಣ್ಣು, ಕುಡಿ, ಆಡು, ಭೋಗಿಸು. ಭೂಮಿಯ ಮೇಲೆ ಇದೇ ಸತ್ಯ.''

ಸದ್ಯಕ್ಕೆ ಇಲ್ಲಿ ಸ್ವಲ್ಪ ನಿಂತು ಕತೆಯನ್ನು ವಿವೇಚಿಸಬೇಕು.

ಕತೆ ಪ್ರಾರಂಭದಲ್ಲಿ ಸತ್ಯವ್ರತನನ್ನು ತೆಗಳಿದರೂ ಕತೆಯ ಆಂತರ್ಯ ಅದನ್ನು ಸಮರ್ಥಿಸುವುದಿಲ್ಲ. ನಾಸ್ತಿಕವಾದದಲ್ಲಿದ್ದಿರಬಹುದಾದ 'ಸತ್ಯ'ದ ಸ್ವರೂಪವನ್ನು ಇಲ್ಲಿ ಚರ್ಚಿಸಲಾಗುತ್ತಿದೆ. ಮಾನವ ಮಾತಿನ ಮೂಲಕವೇ ವಾಸ್ತವ ಸತ್ಯವಾಗುವುದರಿಂದ, ಮಾತಿನ ಖಚಿತತೆಗೆ ಒತ್ತು ನೀಡಲಾಗಿದೆ. ಪ್ರಕೃತಿ, ಜೀವ, ಜಡಗಳ ಕುರಿತ ಸ್ವಭಾವವಾದದ ವಿಚಾರಗಳು ಇಲ್ಲಿ ನಿರೂಪಿಸಲ್ಪಟ್ಟಿವೆ. ಉಣ್ಣು, ತಿನ್ನು, ಕುಡಿ, ಆಡು, ಭೋಗಿಸು ಎಂಬ ಕೊನೆಯ ಮಾತನ್ನು ಉದ್ದೇಶಪೂರ್ವಕವಾಗಿ ಲೋಕಾಯತವನ್ನು ಅವಹೇಳನ ಮಾಡುವ ಕಾರಣಕ್ಕೆ ಸೇರಿಸಿರುವಂತೆ ತೋರುತ್ತದೆ. ಕಷ್ಟಕರವಾಗಿರುವ ಮಾನವ ಜೀವನದಲ್ಲಿ ಸುಖಿಯಾಗಿರಬೇಕಾದುದೇ ಮುಖ್ಯ ಧ್ಯೇಯವೆಂದು ಹೇಳುತ್ತಿದ್ದಾನೆ ಸತ್ಯವ್ರತ.

ಇಲ್ಲಿ ಹೇಳಲಾಗಿರುವ ಸಂಗತಿಗಳು ಪ್ರಾಮಾಣಿಕವಾಗಿವೆ ಎಂದು ಭಾವಿಸಲು ಯಾವ ಅಡ್ಡಿಯೂ ಕಾಣುತ್ತಿಲ್ಲ. ನಾಸ್ತಿಕವಾದವನ್ನು ತಿರುಚಿ ಹೇಳುವದು ಸುಲಭವೂ ಆಗಿರಲಿಲ್ಲವೇನೋ? ಕತೆ ಹೀಗೆ ಮುಂದುವರಿಯುತ್ತದೆ –

ಸತ್ಯವ್ರತನ ಮಾತಿನಿಂದ ನಂದಭದ್ರ ವಿಚಲಿತನಾಗಲಿಲ್ಲ. ಧರ್ಮನಿಷ್ಠನಾದ ಮನುಷ್ಯ ಅಸುಖಿ ಎಂಬ ಮಾತನ್ನು ಆತ ತಿರಸ್ಕರಿಸುತ್ತಾನೆ. ಪಾಪಿಗಳೂ ದುಃಖಿಗಳೇ. ನನ್ನ ಮತದಲ್ಲಿ ಧರ್ಮವೇ ಶ್ರೇಷ್ಠ. ಪುಣ್ಯಾತ್ಮನಾದ ಸಾಧು ಪುರುಷನಿಗೆ ಬರುವ ಕಷ್ಟಗಳನ್ನು ಕಂಡು ಜನ 'ಈತ ಸಾಧು ವ್ಯಕ್ತಿಯಾಗಿದ್ದರೂ ಕಷ್ಟಗಳು ಎದುರಾಗಿವೆ ಇದು ಆಶ್ಚರ್ಯಕರ'ವೆಂದು ಹೇಳುತ್ತಾರೆ. ಪಾಪಿಗಳನ್ನು ಕುರಿತು ಈ ರೀತಿ ಸಹಾನುಭೂತಿಯನ್ನು ಜನ ಪ್ರಕಟಪಡಿಸಲಾರರು. ಸ್ತ್ರೀ ಸಂಪತ್ತುಗಳನ್ನು

ಅಪಹರಿಸಲು ಮನೆಗೆ ನುಗ್ಗುವ ದುಷ್ಟನನ್ನು ಕಂಡು ಭಯವಾಗುತ್ತದೆ. ಅವನ ಬಗ್ಗೆ ದ್ವೇಷ, ಸಿಟ್ಟು ಹುಟ್ಟುತ್ತವೆ. ಆದರೆ ಇವೆಲ್ಲ ವ್ಯರ್ಥ. ಸಂಸಾರಕ್ಕೆ ಕಾರಣವಾಗುವ ಈಶ್ವರನೇ ಇಲ್ಲವೆಂಬುದು ಮಕ್ಕಳ ಮಾತು. ಪ್ರಜೆಗಳಿಲ್ಲದೇ ರಾಜನಿರಬಲ್ಲನೇ ? ಲಿಂಗವು ಕಲ್ಲೆನ್ನುವ ನಿನಗೆ ಲಿಂಗದ ಮಹಿಮೆ ತಿಳಿದಿಲ್ಲ. ಇದು ಕುರುಡ ಸೂರ್ಯನನ್ನು ಕಾಣದಂತಿದೆ. ದೇವತೆ, ಮುನಿ, ಮಾನವರೆಲ್ಲ ಶಿವಲಿಂಗ ಪೂಜಕರು. ಸ್ಥಾಪಿಸಿದವರ ಹೆಸರಿನಿಂದಲೇ ಲಿಂಗ ಪ್ರಖ್ಯಾತ ವಾಗುತ್ತದೆ. ಇವರೆಲ್ಲ ಮೂರ್ಖರೇನು ? ನೀನೊಬ್ಬನೇ ಬುದ್ಧಿವಂತನೇನು ? ರಾಮ, ರಾವಣನನ್ನು ಕೊಂದು ರಾಮೇಶ್ವರಲಿಂಗ ಸ್ಥಾಪಿಸಿದ್ದು ಸುಳ್ಳೇ ? ಇಂದ್ರ ವೃತ್ರಾಸುರನನ್ನು ಕೊಂದು ಮಹೇಂದ್ರ ಪರ್ವತದಲ್ಲಿ ಲಿಂಗ ಸ್ಥಾಪಿಸಿ ಪಾಪಮುಕ್ತನಾದ. ಚಂದ್ರ ಪಶ್ಚಿಮ ಸಮುದ್ರ ತೀರದಲ್ಲಿ ಸೋಮನಾಥಲಿಂಗ ಸ್ಥಾಪಿಸಿ ಆರೋಗ್ಯವಂತನಾದ. ಯಮ, ಕುಬೇರರು ಕಾಶಿಯಲ್ಲಿ; ಗರುಡ, ಕಶ್ಯಪರು ಸಹ್ಯಾದ್ರಿಯಲ್ಲಿ; ವಾಯು ವರುಣರು ನೈಮಿಷಾರಣ್ಯದಲ್ಲಿ ಶಿವಲಿಂಗಗಳನ್ನು ಸ್ಥಾಪಿಸಿದರು. ಇದರಿಂದ ಸದಾ ಸುಖಿಗಳಾದರು. ಇದೇ ಸ್ತಂಭ ತೀರ್ಥದಲ್ಲಿ ಸ್ಕಂದನು ಕುಮಾರೇಶ್ವರಲಿಂಗ ಸ್ಥಾಪಿಸಿದ. ಈತ ಪಾಪನಾಶಕ ನಲ್ಲವೇ ? ಇದೇ ರೀತಿ ಇತರ ದೇವತೆಗಳು, ಮನುಷ್ಯರು, ರಾಜರು ಸ್ಥಾಪಿಸಿದ ಲಿಂಗಗಳಿಗೆ ಲೆಕ್ಕವಿಲ್ಲ. ಭೂ, ಸ್ವರ್ಗ, ಪಾತಾಳವಾಸಿಗಳೆಲ್ಲ ಶಿವಲಿಂಗ ಸ್ಥಾಪಿಸಿದ್ದಾರೆ. ದೇವರಿಲ್ಲ ಎನ್ನುತ್ತೀ : ದೇವರೇನು ನಿನ್ನ ಬಾಗಿಲಿಗೆ ಬಂದು ಭಿಕ್ಷುಕನಂತೆ ಯಾಚಿಸಬೇಕೇ ? ಎಲ್ಲವೂ ಸ್ವಭಾವತಃ ಆಗುವುದಾದರೆ ಮಾಡುವವನಿಲ್ಲದೇ ಆಹಾರವೇಕೆ ತಯಾರಾಗುವುದಿಲ್ಲ? ಹಾಗಾಗಿ ಸೃಷ್ಟಿಗೆ ಕರ್ತನೊಬ್ಬನ ಅವಶ್ಯಕತೆ ಇದ್ದೇ ಇದೆ. ಎಲ್ಲದರಲ್ಲೂ ಕರ್ತನೇ ನಿರ್ಮಾಣ ಶಕ್ತಿಯನ್ನು ತುಂಬಿರುವವನು. ಪಶು, ಪಕ್ಷಿ, ಕ್ರಿಮಿ, ಕೀಟಗಳು ಮಾತ್ರ ಸುಖಿಗಳು ಎಂಬ ಮಾತನ್ನು ನಿನ್ನಿಂದ ಮಾತ್ರ ಕೇಳುತ್ತಿದ್ದೇನೆ. ತಮೋಗುಣಿಗಳಿಗೂ, ಅಲ್ಪ ಇಂದ್ರಿಯಗಳಿರುವ ಪ್ರಾಣಿ, ಪಕ್ಷಿ, ಕ್ರಿಮಿ ಕೀಟಗಳು ಸುಖಿಯಾಗಿರುವುದಾದರೆ, ಸಂಪೂರ್ಣ ಇಂದ್ರಿಯಗಳಿರುವ ಮನುಷ್ಯ ಶ್ರೇಷ್ಠನೂ, ಧನ್ಯನೂ ಏಕಲ್ಲ? ನಿನ್ನ ಸತ್ಯವ್ರತ ನರಕಕ್ಕೆ ಹೋಗಲು ಮಾತ್ರ ಸಹಾಯಕ. ನೀನು ಹಾಕಿದ ಆಡಂಬರಪೂರ್ಣವಾದ ಪೀಠಿಕೆಯೇ ಸತ್ವರಹಿತವಾದುದು. ಮಾಯಾವಿಗಳ ಮಾತು ಇಂಥ ಆಡಂಬರದಿಂದ ಆಚ್ಛಾದಿತವಾಗಿರುತ್ತದೆ. ಇದೆಲ್ಲ ನಿನ್ನ ತಪ್ಪಲ್ಲ, ನಿನ್ನ ಮಾತು ಕೇಳುತ್ತಿರುವ ನನ್ನ ತಪ್ಪು.

ನಾಸ್ತಿಕ, ಸರ್ಪ ಮತ್ತು ವಿಷಗಳ ಗುಣವೇ ಇತರರನ್ನು ಆಕರ್ಷಿಸಿ ಮೋಹಿತಗೊಳಿಸು ವುದು. ಧರ್ಮದ ಕಾರಣದಿಂದ ದಿನವೂ ಸತ್ಪುರುಷರ ಸಂಗವನ್ನು ಮಾಡಬೇಕು. ವಿದ್ವಾಂಸ, ವೃದ್ಧ, ತಪಸ್ವಿ, ಸಂತರ ಸಂಪರ್ಕದಲ್ಲಿ ಇರಬೇಕು. ನೀಚ, ಅಜ್ಞಾನಿ, ಆತ್ಮಜ್ಞಾನಿ ಯಲ್ಲದವರ ಜತೆ ಇರಬಾರದು. ಕುಲ, ವಿದ್ಯೆ, ಕರ್ಮ ಈ ಮೂರೂ ಶುದ್ಧವಿರಬೇಕು. ನೀನು ಸದಾ ಬ್ರಾಹ್ಮಣರ ನಿಂದೆ ಮಾಡುತ್ತಿರುವುದರಿಂದ ನಿನ್ನನ್ನು ಭೇಟಿಯಾಗಲಾರೆ. ವೇದ, ಸ್ಮೃತಿ, ಧರ್ಮಗಳೇ ಪ್ರಮಾಣ.

ಹೀಗೆ ಹೇಳಿ ನಂದಭದ್ರ ಕಪಿಲೇಶ್ವರಲಿಂಗ ಪೂಜೆ ಮಾಡುತ್ತ ದೇವರಿಗೆ, 'ಚೇತನ ವಾಗಿದ್ದು ನೀನು ಜಡವನ್ನೇಕೆ ಸೃಷ್ಟಿಸಿದೆ ?' ಎಂದು ಪ್ರಶ್ನಿಸುತ್ತಾನೆ. ಸೃಷ್ಟಿಯನ್ನು ದೋಷ ಮುಕ್ತವೇಕೆ ಮಾಡಲಿಲ್ಲ? ಸಮದರ್ಶಿಯಾದ ದೇವರು ಸುಖ, ದುಃಖ, ಜನ್ಮ ಮರಣಗಳ ಕ್ಲೇಶವನ್ನೇಕೆ ಮಾಡಿದ ? ಹೀಗೆ ಯೋಚಿಸುತ್ತ ನಾಲ್ಕು ದಿನ ನಿಂತಲ್ಲೇ ನಿಂತುಬಿಡುತ್ತಾನೆ ನಂದಭದ್ರ. ರೋಗಿಷ್ಠ ಹುಡುಗನೊಬ್ಬ ಬಂದು 'ದೇಹವೆಲ್ಲ ಸದೃಢವಿದ್ದೂ ಯಾಕೆ ದುಃಖಿಸುತ್ತೀ ? ನಾನು ರೋಗಿಷ್ಠನಾದರೂ ಸಾಯಲಿಚ್ಛಿಸುತ್ತಿಲ್ಲ' ಎಂದು ಹೇಳುತ್ತಾನೆ.

ರೋಗ, ಅನಿಷ್ಟ ವಸ್ತುಗಳನ್ನು ಪಡೆಯುವುದು, ಪರಿಶ್ರಮ ಮತ್ತು ಇಷ್ಟ ವಸ್ತುಗಳ ಅಗಲಿಕೆಯಿಂದ ದುಃಖವಾಗುತ್ತದೆ ಮುಂತಾಗಿ ಹೇಳಿ ತನ್ನ ಜನ್ಮ ಕತೆಯನ್ನು ನಿರೂಪಿಸುತ್ತಾನೆ. ಇದನ್ನೆಲ್ಲ ಕೇಳಿ ನಂದಭದ್ರ ಮತ್ತೊಂದು ಮದುವೆಯಾಗಿ ಅನೇಕ ಮಕ್ಕಳನ್ನು ಪಡೆದು ಸುಖಿಯಾಗಿರುತ್ತಾನೆ. – ಹೀಗೆ ಕತೆ ಪೂರ್ಣಗೊಳ್ಳುತ್ತದೆ.

ಮಾತಾಡುವ ಕ್ರಮದ ಬಗ್ಗೆ ವೈಜ್ಞಾನಿಕವಾಗಿ ವಿವರಿಸುವ ಸತ್ಯವ್ರತನ ಕುರಿತು ಗೌರವ ಹುಟ್ಟುತ್ತದೆ. ಮಾತಿನ ೧೮ ದೋಷಗಳ, ಬುದ್ಧಿಯ ೬ ದೋಷಗಳ ವಿವರಗಳು ತುಂಬ ಗಮನಾರ್ಹವಾಗಿವೆ. ಅವೈದಿಕನಾದ ನಂದಭದ್ರನ 'ಶೈವ' ಆಚರಣೆಗಳನ್ನು ನಾಸ್ತಿಕ ಸತ್ಯವ್ರತ ಟೀಕಿಸುತ್ತಿದ್ದಾನೆ. ಶೈವೀಯ ಆಸ್ತಿಕ ದೃಷ್ಟಿಕೋನಕ್ಕೆ, ಲೋಕಾಯತ ದೃಷ್ಟಿಕೋನ ಇಲ್ಲಿ ಮುಖಾಮುಖಿಯಾಗುತ್ತಿದೆ. 'ಪುರಾಣ' ಶೈವವನ್ನು ಎತ್ತಿ ಹಿಡಿಯುತ್ತಿದ್ದರೂ ಲೋಕಾಯತ ತತ್ವಜ್ಞಾನದ ಕೆಲವಾದರೂ ವಿವರಗಳನ್ನು ನೀಡಿ ಉಪಕಾರ ಮಾಡುತ್ತಿದೆ. ಲೋಕಾಯತವನ್ನು ತೆಗಳುವಲ್ಲಿ ಯಾವ ಅರ್ಥವಂತಿಕೆಯೂ ಕಾಣುತ್ತಿಲ್ಲ. ಅದು ಅದಕ್ಕೆ ಸಹಜವೇ. ಅದಲ್ಲ ನಮಗಿಲ್ಲಿ ಮುಖ್ಯ ವಿಚಾರ.

ಲೋಕಾಯತ ತತ್ವಜ್ಞಾನದ ಯಾವ ಗ್ರಂಥಗಳೂ ದೊರಕದೇ ಇರುವುದರಿಂದ, ಇಲ್ಲಿ ಪ್ರಸ್ತಾಪವಾಗಿರುವ ಅದರ ಪ್ರಮುಖವೆಂದು ತೋರುವ ವಿಚಾರಗಳು ಪರಂಪರೆಯ ದಾರ್ಶನಿಕ ಅಧ್ಯಯನಕ್ಕೆ ಬಹಳಷ್ಟು ಸಹಾಯ ಮಾಡುತ್ತವೆಂಬುದು ನಿರ್ವಿವಾದ. ಲೋಕಾಯತ ವಿಚಾರಗಳನ್ನು ನಂದಭದ್ರನಿಗೆ ತರ್ಕಬದ್ಧವಾಗಿ ನಿರಾಕರಣೆ ಮಾಡುವುದಕ್ಕೆ ಆಗಿಲ್ಲ. ಲೋಕಾಯತಿಕರ ಮಾತಿನ ಅಥವಾ ಸತ್ಯದ ಕುರಿತ ತಾತ್ವಿಕ ಗ್ರಹಿಕೆಗಳನ್ನು ಇಲ್ಲಿ ಸ್ಪಷ್ಟವಾಗಿ ಕಾಣುತ್ತೇವೆ. ಸತ್ಯದ ಪ್ರತಿಪಾದಕರಾಗಿದ್ದ ಲೋಕಾಯತಿಕರು ಅದರ ಎಲ್ಲ ಸೂಕ್ಷ್ಮ ಮಗ್ಗುಲುಗಳನ್ನು ಗಮನಿಸುತ್ತಿದ್ದರೆಂಬುದು ಖಚಿತವಾಗುತ್ತದೆ. ಇಲ್ಲಿ ಹೇಳಲಾದ ವಿಚಾರಗಳ ಪರ್ಯಾಲೋಚನೆ ಅಗತ್ಯವಿದೆ.

ಎಸ್. ಎಸ್. ಹಿರೇಮಠ
ಕನ್ನಡ ಪ್ರಾಧ್ಯಾಪಕ, ಎ.ಡಿ.ಬಿ. ಪ್ರಥಮ ದರ್ಜೆ ಮಹಾವಿದ್ಯಾಲಯ, ಹರಪನಹಳ್ಳಿ - ೫೮೩ ೧೩೧

೬೦ನೇ ಪುಟದಿಂದ

ಮಾತನಾಡುವ ಎಂತಹವನೂ ದೇಶದ್ರೋಹಿಯಾಗಿ ಕಂಡುಬಿಡುತ್ತಾನೆ. 'ಧರ್ಮ'ವನ್ನೂ ಧಾರ್ಮಿಕ ಮೂಲಭೂತವಾದವನ್ನೂ ಪ್ರತ್ಯೇಕಿಸಿ ನೋಡುವ ಜ್ಞಾನವುಳ್ಳವನು – ವೈರಿಯಾಗಿ ಕಾಣಿಸಿಕೊಳ್ಳುತ್ತಾನೆ. ದೇಶವನ್ನು, ದೇಶದ ಜನತೆಯ ಬದುಕನ್ನು, ವಾಸ್ತವತೆಯಿಂದ ದೂರ ಇರಿಸಿ ಭ್ರಮೆಗಳಿಂದ ಮಾತ್ರ ದೃಷ್ಟಿಸುವಂತೆ ಮಾಡುವ 'ಕೋಮುವಾದಿ ಸಿದ್ಧಾಂತ' ಸದಾ ಸುಳ್ಳುಗಳಲ್ಲೇ ಮೈಮರೆತಿರುವಂತೆ ವ್ಯಕ್ತಿಯನ್ನು ತಯಾರಿಗೊಳಿಸುತ್ತದೆ. ಹೀಗೇ ತನ್ನ ಗತಿಯಲ್ಲಿ ಜನರು ತಮ್ಮ ಬದುಕುಗಳ ನಿಜವಾದ ದುಃಸ್ಥಿತಿಗೆ ಕಾರಣ ಹುಡುಕದಂತೆ ತಡೆಯೊಡ್ಡುತ್ತದೆ. ಆ ಮೂಲಕ ಸಾಮ್ರಾಜ್ಯಶಾಹಿಯನ್ನು ರಕ್ಷಿಸುವ ತನ್ನ 'ಮಹಾ ಪುಣ್ಯಕಾರ್ಯ'ವನ್ನು ಜಾಣತನದೊಂದಿಗೆ ನಿರ್ವಹಿಸಿ ಆನಂದದಿಂದ ತನ್ನ ಬೆನ್ನನ್ನು ತಾನೇ ಚಪ್ಪರಿಸಿಕೊಳ್ಳುತ್ತದೆ.

ವಾಜಪೇಯಿ-ಅಡ್ವಾನಿಯವರ ಅಧಿಕಾರಾವಧಿಯಲ್ಲಿ ಅಮೆರಿಕಾ ಅವರಿಗೆ ಸಹಜ ಮಿತ್ರನಂತೆಯೇ ಕಂಡುಬಂದಿತು. ದೇಶಾದ್ಯಂತ ರೈತರ ಆತ್ಮಹತ್ಯೆಗಳು ಜರುಗಿದರೂ, ಮಿಲಿಯಾಂತರ ಕಾರ್ಮಿಕರು ಅವರ ಅಧಿಕಾರಾವಧಿಯಲ್ಲಿ ಕೆಲಸದಿಂದ ಹೊರದೂಡ ಲ್ಪಟ್ಟರೂ ಅವರು ಅದಕ್ಕೆಲ್ಲಾ ಕೇರ್ ಮಾಡಲೇ ಇಲ್ಲ. 'ಶಿಕ್ಷಣ' ಎಂಬುದು ಅವರ ಅಧಿಕಾರಾ ವಧಿಯಲ್ಲಿ ದುಡ್ಡಿದ್ದವರು ಕೊಂಡುಕೊಳ್ಳುವ ಸರಕೇ ಆಗಿಹೋಯಿತು. ಕೋಟಿ ಕೋಟಿ ಉದ್ಯೋಗಗಳ ಸೃಷ್ಟಿಯ ಬಗ್ಗೆ ಮಾತನಾಡಿಯೂ ದೇಶದ ನಿರುದ್ಯೋಗವನ್ನು ಕಡಿಮೆ ಮಾಡಲಾಗದಂತಾಗಿದ್ದರು. ಆದರೂ ಇಷ್ಟೆಲ್ಲಾ ಅನಾಹುತಗಳಲ್ಲಿ ಈ ದೇಶದ 'ಹಿಂದೂ' ಗಳೇ ಬಹುಸಂಖ್ಯೆಯಲ್ಲಿ ತೊಂದರೆಗೀಡಾದರೂ ಇವರು ಮಾತ್ರ ಅವರ ಆಗ್ರಹಗಳನ್ನು, ಟೀಕೆಗಳನ್ನು ಕುಚೋದ್ಯವೆಂಬಂತೆಯೇ ಕಂಡುಬಿಟ್ಟರಲ್ಲವೆ ? ದೇಶದ ಜನತೆಯ ಬದುಕು ತಮ್ಮ ಕುಚೋದ್ಯದಿಂದಾಗಿ ಹೊತ್ತಿ ಉರಿಯುತ್ತಿದ್ದರೂ 'ಭಾರತ ಪ್ರಕಾಶಿಸುತ್ತಿದೆ' ಎಂದು ಬೊಬ್ಬಿಡುವ ಯತ್ನ ಮಾಡಿದರೂ, ಭ್ರಮೆಗಳು ಬದುಕನ್ನು ಕಲ್ಪಿಸಲಾರವೆಂಬುದನ್ನು ಅರಿತ ಜನತೆ ಅವರನ್ನು ಆಡಳಿತದಿಂದ ಹೊರಹಾಕಿರುವ ಈಗಲಾದರೂ ಪಾಠ ಕಲಿತಿರುವರೆ ? ಅದೂ ಇಲ್ಲ. ಈಗಲೂ ಈ ದೇಶದ ಸಾಮಾನ್ಯ ದುಡಿಯುವ ಜನತೆ ಅನುಭವಿಸುವ ಪಾಡು ಅವರ ದೃಷ್ಟಿಯಲ್ಲೇ ಇಲ್ಲ. ಕಂಚಿಸ್ವಾಮಿಗಳ ಬಂಧನದ ಹಿಂದಿನ ಹಿಂದೂ ಧರ್ಮದ ನಿರ್ನಾಮದ ಸಂಚು ಎಲ್ಲಿ ಅಡಗಿದೆಯೆಂದು ಪತ್ತೆಹಚ್ಚಬಲ್ಲರಲ್ಲದೆ ಇನ್ನೂ ಜರುಗುತ್ತಲೇ ಇರುವ ರೈತರ ಆತ್ಮಹತ್ಯೆಗಳು, ಕಾರ್ಮಿಕರ ಸಂಕಟ, ಸಣ್ಣ ವ್ಯಾಪಾರಸ್ಥರ ಆತಂಕ ಈ ಯಾವೂ ಅವರ ತಲೆಯಲ್ಲಿಲ್ಲ. ಇದುವೇ 'ಕೋಮುವಾದ ಸಿದ್ಧಾಂತ'ದ ವೈಖರಿ.

ಹಿಂದೂಗಳು, ಮುಸ್ಲಿಮರು, ಕ್ರಿಶ್ಚಿಯನ್ನರು, ಪಾರ್ಸಿಗಳು, ಸಿಖ್ಖರು, ಜೈನರು, ಬೌದ್ಧರು – ಹೀಗೆ ನಮ್ಮ ದೇಶದ ವಿಶಿಷ್ಟತೆಯೊಂದಿಗೆ ತಳುಕುಹಾಕಿಕೊಂಡ ವಿಭೇದಗಳಿವೆಯಲ್ಲದೆ, ಹಾಗೆಯೇ ಈ ಎಲ್ಲರೂ ಒಂದಿಲ್ಲೊಂದು ವರ್ಗವಾಗಿಯೂ ರೂಪುಗೊಂಡಿದ್ದಾರೆ ಕೂಡ. 'ಕಾರ್ಮಿಕ ವರ್ಗ', 'ರೈತಾಪಿವರ್ಗ', 'ಸಣ್ಣ ವ್ಯಾಪಾರಿವರ್ಗ', 'ಕೃಷಿ ಕಾರ್ಮಿಕ ವರ್ಗ' – ಹೀಗೆ ನೋಡುತ್ತಾ ಹೋದರೆ ಅಲ್ಲಿ ಮಾತ್ರ ಇವರ ಬದುಕಿನ ವಾಸ್ತವಗಳು ಕಾಣುತ್ತವೆ. ಒಂದು ಕೋಮು ಮೇಲು, ಇನ್ನೊಂದು ಕೀಳು, ಒಂದು ಜಾತಿ ಮೇಲು – ಇನ್ನೊಂದು ಕೀಳು, ಎಂಬುದನ್ನು ತೊಡೆದುಹಾಕಲು ಸಾಧ್ಯವಾಗಲು ಈ ಎಲ್ಲಾ ಜನರನ್ನೂ ವರ್ಗದೃಷ್ಟಿ ಕೋನ ದೊಂದಿಗೆ ನೋಡುವುದರಿಂದ ಮಾತ್ರವೇ ಸಾಧ್ಯ. ಗತಕಾಲದ ಮೇಲುಕೀಳೆಂಬ ಹೊಲಸಿ ನಿಂದ ಸಮಾಜವನ್ನು ತೊಳೆಯಲು ಆಧುನಿಕ ಕಾಲಘಟ್ಟದಲ್ಲಿ ಸೃಜಿತಗೊಂಡಿರುವ ಉತ್ಪಾದನಾ ವಿಧಾನದ ಚೌಕಟ್ಟಿನೊಳಗೆ, ಜನರೆಲ್ಲರನ್ನು ಗುರುತಿಸಬೇಕಾದ ವೈಜ್ಞಾನಿಕ ವಿಧಾನವಾಗಿ 'ವರ್ಗ ದೃಷ್ಟಿಕೋನ' ಮಾತ್ರವೇ ಸಂಜೀವಿನಿಯಾದ್ದರಿಂದ, ಪ್ರತಿಯೊಬ್ಬರೂ ಇದರ ಬೆಳವಣಿಗೆಗಾಗಿ ಶ್ರಮಿಸಬೇಕಾಗಿದೆ. ಅಂತಿಮ ಅರ್ಥದಲ್ಲಿ ಕೋಮುವಾದವನ್ನು ಮಟ್ಟಹಾಕು ವುದೆಂದರೆ ವರ್ಗದೃಷ್ಟಿಕೋನವನ್ನು ಬೆಳೆಸಿಕೊಳ್ಳುವುದು ಮತ್ತು ಬೆಳೆಸುವುದೇ ಆಗಿದೆ.

ಅಯ್ಯಪ್ಪ ಹೂಗಾರ್
೨೫/೧, ವಿನೋಬಾ ರಸ್ತೆ, ಜಯಲಕ್ಷ್ಮೀಪುರಂ, ಮೈಸೂರು - ೫೭೦ ೦೧೨



# ಪ್ರಸ್ತುತವಿದೆ
# ಹಿಂದೆಂದಿಗಿಂತಲೂ
# ಉತ್ತಮವಾದ ಹೊಸ
# ಸಂತೂರ್

ಇದೀಗ ಹೊಸ ಸಂತೂರ್ ಬಳಸಲು ಇನ್ನಷ್ಟು ಕಾರಣಗಳು

**ನ್ಯಾಚುರಲ್ ಸ್ಕಿನ್ ಸಾಫ್ಟನರ್ಸ್**
ನೀಡುವುದು ಕೋಮಲ
ಹಾಗೂ ನುಣುಪಾದ ತ್ವಚೆ

ಮೈಮರೆಸುವ **ಹೊಸ ಪರಿಮಳ**
ನೀಡುವುದು, ಆಹ್ಲಾದಕರ
ಸ್ನಾನದ ಅನುಭವ

**ಚಂದನ ಮತ್ತು ಅರಿಸಿನದ**
**ಅಡ್ವಾನ್ಸ್ಡ್ ಎಕ್ಸ್‌ಟ್ರಾಕ್ಟ್ಸ್**
ನೀಡುವುದು
ತಾರುಣ್ಯ ಭರಿತ ತ್ವಚೆ




ಹೊಸ **ಸಂತೂರ್**

ನಿಮಗೆಂದೇ ವಿಶೇಷವಾಗಿ

HOSATHU Kannada Monthly / May 2005 Rs. 10 RNI Regn. No. KARKAN/1999/614 REGD. CPMG / KA / BGE – 7 / 2003-05
Licenced to post without prepayment. Licence No. WPP-14 Posted at Bangalore PSO on the 28th/3rd of every month



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna